ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೯

ಪ್ರಧಾನ ಸಂಪಾದಕ:

ಡಾ| ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.

# ಆದಿಪುರಾಣ ಸಂಗ್ರಹ






ಸಂಪಾದಕ:

ಎಲ್. ಗುಂಡಪ್ಪ, ಎಂ.ಎ.

ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೫೬




ಮೊದಲನೆಯ ಮುದ್ರಣ: ೧೯೫೪
ಎರಡನೆಯ ಮುದ್ರಣ: ೧೯೫೬

ಬೆಲೆ:

| ಸಾದಾ ಪ್ರತಿ: | ಉತ್ತಮ ಪ್ರತಿ: |
|---|---|
| ೨—೦—೦ | ೩—೦—೦ |





ಬೆಂಗಳೂರು:
ಅರಳೇಪೇಟೆಯಲ್ಲಿರುವ ಬಿ. ಬಿ. ಡಿ. ಪವರ್ ಪ್ರೆಸ್‌ನಲ್ಲಿ ಮುದ್ರಿಸಲ್ಪಟ್ಟಿತು
೧೯೫೬

# ಮುನ್ನುಡಿ

ಸುಮಾರು ಸಾವಿರ ವರ್ಷಗಳ ಹಿಂದಿನಿಂದಲೂ ಬೆಳೆದು ಬಂದಿರುವ ಕನ್ನಡ ಸಾಹಿತ್ಯ ಅನೇಕ ಕವಿವರೇಣ್ಯರ ವಿಪುಳ ಕೃತಿಗಳ ವಿರಚನೆಗಳಿಂದ ವೈವಿಧ್ಯ ರಮಣೀಯವಾಗಿ ಪರಿಶೋಭಿಸುತ್ತಿದೆ. ಸಹಸ್ರ ವರ್ಷಗಳ ವಿಸ್ತಾರವಾದ ಸಾಹಿತ್ಯದ ಈ ವಿರಾಟ್‌ಕ್ಷೇತ್ರದಲ್ಲಿ ಅನೆಷ್ಟೋ ಉನ್ನತೋನ್ನತ ಕೃತಿರತ್ನ ಶೈಲಗಳಿವೆ, ಭಾವುಕ ಜನಾಕರ್ಷಣೀಯವಾಗಿ, ಸಹೃದಯ ಮನಾಹ್ಲಾದ ಕಾರಿಯಾಗಿ! ಆದರೆ ಈ ಕೃತಿರತ್ನಶೈಲಶ್ರೇಣಿಯಲ್ಲಿ ಎರಡು ಉತ್ತುಂಗ ಶಿಖರಗಳು ಮಾತ್ರ ಮಹತ್ತು ಬೃಹತ್ತುಗಳಲ್ಲಿಯೂ ದಿವ್ಯತೆ ಭವ್ಯತೆಗಳಲ್ಲಿಯೂ ಪರಸ್ಪರ ಸ್ಪರ್ಧಿಗಳಾಗಿ ಹೈಮಾಚಲೋನ್ನತಗಳಾಗಿ ಕೈಲಾಸಕಲ್ಪಕಗಳಾಗಿ ನಮ್ಮ ಕಣ್ಮನಗಳನ್ನು ಸೆಳೆಯುತ್ತಿವೆ; ನಮ್ಮನ್ನು ವಿಸ್ಮಯಮೂಕರನ್ನಾಗಿ ಮಾಡುತ್ತಿವೆ; ನಮ್ಮನ್ನು ಬಳಿಗೆಳೆದು ಸೂರೆಗೈದು ನಮ್ಮನ್ನೇ ಇಲ್ಲಗೈಯುವ ಮಹಾಪವಾಡದಲ್ಲಿ ತೊಡಗಿವೆ.* ಮೇರು ಮಂದರಗಳಂತಿರುವ ಆ ಶೃಂಗಗಳಲ್ಲಿ ಒಬ್ಬ ಪಂಪ, ಮತ್ತೊಬ್ಬ ನಾರಣಪ್ಪ.

ನಮ್ಮ ಸಾಹಿತ್ಯದ ಮೊಟ್ಟಮೊದಲನೆಯ ನವೋದಯಾವಸರದಲ್ಲಿ

---

* ಕನ್ನಡ ಸಾಹಿತ್ಯದ ಸಹಸ್ರ ಸಂವತ್ಸರದ ಬೆಳವಣಿಗೆಯ ಹಬ್ಬುಗೆಯನ್ನು ಪರ್ವತ ಶ್ರೇಣಿಗೆ ಹೋಲಿಸಿದಲ್ಲಿ ಮೇಲೆ ಕಾಣಿಸಿದಂತೆ ಪಂಪ ನಾರಣಪ್ಪರ ಕೃತಿಶೈಲಗಳೆರಡೆ ನೀಲನಭಶ್ಚುಂಬಿಯಾಗಿ ನಿಮಿರಿ ನಿಂತಿರುವುದು ನಿಜ. ಆದರೆ ಆ ಪರ್ವತ ಶ್ರೇಣಿಯಲ್ಲಿ ಇನ್ನೊಂದು ಹೆಗ್ಗೋಡು ಪಂಪನಾರಣಪ್ಪರ ಔನ್ನತ್ಯಕ್ಕೆ ಏರದಿದ್ದರೂ ಅವುಗಳಿಗೆ ದ್ವಿತೀಯ ವಾಗಿ ಕನ್ನಡ ಸಾಹಿತ್ಯದ ದ್ವಿತೀಯ ನವೋದಯಾವಸರಾನಂತರದಲ್ಲಿ ರಗಳೆ ಷಟ್ಪದಿಗಳ ಕೃತಿಸಮುಷ್ಟಿಯಲ್ಲಿ ಚಾರು ತುಂಗಾಕೃತಿಯ ಶೈವಧರ್ಮದ ಧವಳ ಬೃಹದ್‌ಗೋಪುರವಾಗಿ ಮೇಲೆದ್ದಿತು. ಆ ಗೋಪುರ ಕೃತಿಶೈಲವೇ ಹರಿಹರ–ರಾಘವಾಂಕ! ಈ ಶೈಲಶೃಂಗಕ್ಕೆ ಬಹುದೂರದಲ್ಲಿ ಇತ್ತ ತೃತೀಯ ನವೋದಯಾವಸರಾನಂತರದಲ್ಲಿ ಜಿನಭಕ್ತಿ ರೂಪದಲ್ಲಿ ಪುನರುತ್ಥಾನಗೊಂಡ ಆ ರಸಸ್ಫೂರ್ತಿಯ ಸಾಂಗತ್ಯಾಕೃತಿಯ ದರ್ಶನ ಕಾವ್ಯದ ಲಲಿತ ಶೈಲವೊಂದು ವಿಯಚ್ಚುಂಬಿಯಾಗಿ ಮೇಲೆದ್ದಿತು! ಹೀಗೆ ನಮ್ಮ ಸಾಹಿತ್ಯದ ಪರ್ವತ ಶ್ರೇಣಿ ಪಂಪ, ಹರಿಹರ–ರಾಘವಾಂಕ, ನಾರಣಪ್ಪ, ರತ್ನಾಕರ ಈ ಜಗತ್ ಕೃತಿರತ್ನ ಶೈಲಶಿಖರಗಳಿಂದ ರಮಣೀಯಭವ್ಯವಾಗಿ ಮೆರೆಯುತ್ತಿದೆ. (‘ವಿಭೂತಿಪೂಜೆ’ ಎಂಬ ಗ್ರಂಥದಲ್ಲಿರುವ ಪ್ರಬಂಧಗಳನ್ನು ನೋಡಿ.) A. P.

ಜೈನಧರ್ಮರೂಪದಿಂದ ಆವಿರ್ಭೂತವಾದ ಆ ದಿವ್ಯ ಚೇತನಶಕ್ತಿ ರತ್ನದಂತೆ ಪಂಪನ ಕೃತಿಗಳಲ್ಲಿ ತೊಳಗುತ್ತಿದೆ. ಸಕಲ ಜೀವ ಕಲ್ಯಾಣಕಾರಿಣಿಯೂ ಭವತಾರಿಣಿಯೂ ಆದ ಈಶ್ವರೀಚಿತ್‌ತಪಸ್ಸು ಲೌಕಲೋಚನೆಯಾಗಿ ಬಹಿರ್ಮುಖಿಯಾಗಿ ಒಂದು ಕೃತಿಯಲ್ಲಿಯೂ ಆಗಮನೇತ್ರೆಯಾಗಿ ಅಂತರ್ಮುಖಿಯಾಗಿ ಇನ್ನೊಂದು ಕೃತಿಯಲ್ಲಿಯೂ ತನ್ನ ಸಾನ್ನಿಧ್ಯ ಪ್ರಕಟನೆ ಮಾಡಿರುವುದರಿಂದ ಪಂಪನ ಭಾರತವೂ ಆದಿಪುರಾಣವೂ ಉದ್ಧಕೃತಿಗಳಾಗಿ ತಾರಕಶಕ್ತಿಗಳಾಗಿ ನಿಂತಿವೆ. ಭಾರತ ಆದಿಪುರಾಣಗಳಲ್ಲಿ ಆದಿಪುರಾಣಕ್ಕೇ ಹೆಚ್ಚಿನ ಗೌರವದ ಸ್ಥಾನ ಸಲ್ಲುವುದು ನ್ಯಾಯವಾಗಿದೆ. ಲೌಕಿಕವನ್ನು ಭಾರತದಲ್ಲಿಯೂ ಆಗಮವನ್ನು ಆದಿಪುರಾಣದಲ್ಲಿಯೂ ಪಂಪನು ಬೆಳಗಿರುವುದೇ ಇದಕ್ಕೆ ಕಾರಣವೆನ್ನಬೇಕು. ಅಲ್ಲದೆ ಪಂಪನ ಆದಿಪುರಾಣದ ದರ್ಶನಪೂರ್ವಕವಾದ ಕಲೆ ಆತನ ಕಲಾಪೂರ್ಣವಾದ ವಿಕ್ರಮಾರ್ಜುನವಿಜಯದ ದರ್ಶನಕ್ಕಿಂತಲೂ ಶಾಶ್ವತತರವಾದ ಪರಮಪುರುಷಾರ್ಥಪರವಾಗಿರುವುದರಿಂದ ಅದು ಸುಪಕ್ವಚೇತನರಿಗೆ ಮೆಚ್ಚಾಗುವ ಸಂಭವವುಂಟು.

ಧರ್ಮದೃಷ್ಟಿ ಭಗವದ್‌ಭಕ್ತಿ ಋಷಿದರ್ಶನಗಳಿಂದ ಕೂಡಿದ ಒಂದು ದರ್ಶನಕಾವ್ಯ ಈ ಆದಿಪುರಾಣ. ಜೈನದರ್ಶನ ಕನ್ನಡ ಕಾವ್ಯವಾಗಿ ಇಲ್ಲಿ ರೂಪು ತಳೆದಿದೆ. ಮಹಾಮಹಿಮನಾದ ಪ್ರಥಮ ಜಿನೇಶ್ವರನ ದಿವ್ಯಕಥೆ ಇದರ ವಸ್ತು. ಈ ವಸ್ತುವನ್ನು ಪ್ರತಿಮಾವಿಧಾನದಿಂದ ನಿರೂಪಿಸಿರುವುದೇ ಇಲ್ಲಿ ಕಾಣುವ ಕವಿಯ ಮಹಿಮೆ. ತ್ರಿಕಾಲಾತೀತವಾದ ಅಲೋಕ ಸತ್ಯಗಳು ಲೋಕಕಾಲದೇಶಾಧೀನವಾಗಿ ಸ್ವತಂತ್ರವಾಗಿ ರೂಪುಗೊಂಡು ಸ್ವಭಾವತಂತ್ರವಾಗಿ ಹೇಗೆ ವಿಕಾಸಗೊಳ್ಳುತ್ತವೆ ಎಂಬುದರ ಚಿತ್ರ ಪ್ರತಿಮಾವಿಧಾನದಿಂದ ಇಲ್ಲಿ ನಿರೂಪಿತವಾಗಿದೆ.

ಮತ್ತೊಂದು ಮಾತು. ಕಲೆಗಾಗಿ ಕಲೆ ಎನ್ನುವ ಕ್ಷುದ್ರ ಪ್ರಚಾರ ಆದಿಪುರಾಣದಂತಹ ಕೃತಿರತ್ನಗಳಿಗಲ್ಲ. ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ, ಸಮ್ಯಕ್ ದರ್ಶನಗಳನ್ನು ಕಂಡು, ನಂಬಿ ಸದ್ಧರ್ಮಪಥದಲ್ಲಿ ಶುಚಿಜೀವನವನ್ನು ಬಾಳಿದ ಮಹಾಕವಿ ಆ ತನ್ನ ನಂಬಿಕೆಯ ಅನುಭವದ ಧರ್ಮದ ಪ್ರಚಾರಕ್ಕಾಗಿ ಈ ಕೃತಿಯನ್ನು ಕಂಡರಿಸಿದ್ದಾನೆ, ಜಿನಧರ್ಮವನ್ನೂ ಕಾವ್ಯಧರ್ಮವನ್ನೂ ಕೂಡಿಸಿ ಹೆಣೆದಿದ್ದಾನೆ. ತತ್‌ಪರಿಣಾಮವಾಗಿ ಈ ಆದಿಪುರಾಣ ರಸರೂಪಿ ವಿಶ್ವೇಶ್ವರನ ಸಾಕ್ಷಾತ್ಕಾರಕ್ಕೆ ಸೋಪಾನ

ಸಾಧನವೂ ಆಗಿ ಪರಿಣಮಿಸಿದೆ. ಧರ್ಮಬೋಧೆಯಿಂದ ಆಕರ್ಷಿತರಾಗುವವರು ಹಲವರಾದರೆ ಕಲಾಸೌಂದರ್ಯದಿಂದ ಆಕರ್ಷಿತರಾಗುವವರು ಹಲವರಿದ್ದಾರೆ. ಪಂಪನಿಗೆ ಇದು ಗೊತ್ತಿಲ್ಲದಿಲ್ಲ. ಆದುದರಿಂದ ಕವಣೆಯೊಂದರಿಂದಲೇ ಹಕ್ಕಿಯೂ ಹಣ್ಣೂ ಬುಟ್ಟಿಗೆ ಒಟ್ಟಿಗೆ ಬೀಳುವ ಚಮತ್ಕಾರವನ್ನು ಪಂಪ ಸಾಧಿಸಿದ್ದಾನೆ ಇಲ್ಲಿ, ಕಾವ್ಯಧರ್ಮವನ್ನೂ ಧರ್ಮವನ್ನೂ ಕೂಡಿಸಿ. ಇದರಿಂದ ಈ ಕಾವ್ಯ ಯಾರು ಯಾರು ಯಾವ ಯಾವ ನೋಟದಿಂದ ನೋಡಿದರೂ ಎಂತೆಂತಹ ಸಂಸ್ಕಾರ ಸೋಪಾನದಲ್ಲಿ ನಿಂತು ಈಕ್ಷಿಸಿದರೂ ಅವರವರಿಗೆ ಆಯಾಯಾ ರೀತಿಯಿಂದಲೇ ದರ್ಶನವಿತ್ತು ಉದ್ಧಾರಗೈವ ಪವಾಡಕೃತಿಯಾಗಿ ಪರಿಣಮಿಸಿದೆ. ಆಗಮಫಲ ರಸಾಸ್ವಾದದಿಂದ ಸಂತೃಪ್ತವಾದ ಕಾವ್ಯಪಕ್ಷಿ ಸಹೃದಯರ ಹೃದಯಾರಾಮವನ್ನು ಹೊಕ್ಕು ಬ್ರಹ್ಮಾನಂದದ ಬೃಹದ್‌ಗಾನವನ್ನು ಸಲಸಲಕ್ಕೆ ಉಣ್ಮಿಸುತ್ತಿದೆ ಇಲ್ಲಿ, ಕೇಳುವವರು ಕಿವಿಗೊಟ್ಟಲ್ಲಿ!

ಪಂಪನು ಹುಟ್ಟಿ ಬದುಕಿ ಬಾಳಿದ ಕಾಲದ ದೃಷ್ಟಿಯಿಂದ ಆತ ಕನ್ನಡದ ಆದಿಕವಿ. ಪಂಪನು ರಚನೆಗೈದ ಕಾವ್ಯಗಳ ಮಹತ್ತು ಬೃಹತ್ತುಗಳ ದೃಷ್ಟಿಯಿಂದ ಆತ ಮಹಾಕವಿ. ಆರಿಸಿಕೊಂಡ ವಿಷಯ, ನಡೆಸಿಕೊಂಡು ಹೋದ ರೀತಿ—ಇವುಗಳ ದೃಷ್ಟಿಯಿಂದ ನಮ್ಮ ಆದಿಮಹಾಕವಿಯಾದ ಪಂಪ ಜಗತ್‌ಕವಿಯೂ ಆಗಿದ್ದಾನೆ. ಬೃಹದ್ ಭಾವಗಳನ್ನು ವಸ್ತುಗೈದು ಮಹತ್ ಕೃತಿಗಳನ್ನು ರಚಿಸುವುದರಿಂದಲೇ ಜಗತ್‌ಕವಿಗಳಾಗುತ್ತಾರೆ. ಪಂಪ ಇಂತಹ ಜಗತ್‌ಕವಿಗಳ ಮಾಲಿಕೆಯಲ್ಲಿ ಸೇರಲು ಯೋಗ್ಯತೆಯುಳ್ಳವನು.

ಕಥೆ ರೀತಿ ಉದ್ದೇಶ ಸಿದ್ಧಿಗಳ ದೃಷ್ಟಿಯಿಂದ ಆದಿಪುರಾಣ ಜಗತ್ ಕಾವ್ಯವಾಗಿ ಪರಿಣಮಿಸಿದೆ. ಸಂಸಾರದಲ್ಲಿ ಬಿದ್ದ ಜೀವನು ಸಂಸಾರವನ್ನೇ ಹಿಡಿದು ಮೇಲೆದ್ದು ಅಲೌಕಿಕ ಸಿದ್ಧಿಗೆ ಸಲ್ಲಬೇಕಾದ ವಿವರವನ್ನು ಕುರಿತ ತೀರ್ಥಂಕರ ಚರಿತ್ರೆ ಪ್ರಧಾನವಸ್ತುವಾಗಿದೆ ಇಲ್ಲಿ. ಅತೀವ ಕಠೋರ ನಿಷ್ಠೆಯಿಂದ ಕೂಡಿದ ಸಾಧನೆಯಿಂದ ಮಾನವನು ಅತ್ಯಂತ ಮಹೋದಾತ್ತವಾದ ಪರಮಪದದ ಸಿದ್ಧಿಗೆ ಏರಿದ ವೃತ್ತವನ್ನು ಮುಖ್ಯ ಲಕ್ಷ್ಯವನ್ನಾಗಿ ಕವಿ ಇಟ್ಟುಕೊಂಡಿದ್ದಾನೆ. ನಾರಕ, ತಿರ್ಯಕ್, ಮಾನುಷ, ದೇವ ಯೋನಿಗಳಲ್ಲಿ ಚರಿಸಿದ ಜೀವನ ಭವಾವಳಿಯ ಬೃಹತ್ಕಥೆ ಇದು. ಬಹು ಲೋಕಗಳಲ್ಲಿ ತೊಳಲಿ ಬಹು ಜನ್ಮಗಳಲ್ಲಿ ಬಳಲಿ ನಾನಾ ಬಗೆಯ ಸಂಸಾರದ ಸುಖದುಃಖಗಳಲ್ಲಿ, ಬಿಸಿಲು ಬೆಳುಗಳುಗಳಲ್ಲಿ, ಮುಳ್ಳು ಮಲ್ಲಿಗೆಗಳಲ್ಲಿ ಸಿಕ್ಕಿ ವಿಧವಿಧದ ಸಂಸ್ಕಾರದಿಂದ ತಿದ್ದಿ

ಇಹದ ಕಷ್ಟಕಾರ್ಪಣ್ಯಗಳ ಕಸಮುಸುರೆಗಳ ಸಹಸ್ರ ಸಹಸ್ರ ಕೋಟಲೆಗಳಲ್ಲಿ ಕರಗಿ ಕುದ್ದು ಕಾಳಿಕೆಕಳೆದು ಅಪರಂಜಿಯಾಗಿ ಕೊನೆಗೆ ಜೀವವು ಮುಕ್ತಿಗೆ ಸಲ್ಲುತ್ತದೆ. ಹೊಕ್ಕಲೋಕ, ಎತ್ತಿದ ಜನ್ಮ, ಚರಿಸಿದ ಕಲ್ಪ ಗ್ರೈವೆಗಳಿಗೆ ಇತಿ ಇಲ್ಲ ಮಿತಿ ಇಲ್ಲ. ಇವುಗಳಲ್ಲೆಲ್ಲ ಚರಿಸಿ ಚರಿಸಿ ಅರಿತರಿತು ನುರಿತು ನುರಿತು ಸವಿದು ಸವಿದು ತುತ್ತತುದಿಗೆ ಜೀವ ಆ ಅರ್ಹತ್ ಪದದಲ್ಲಿ ನೆಲಸುತ್ತದೆ! ಎಂತಹ ದಿವ್ಯವಾದ ಭವ್ಯವಾದ ಕಥೆ ಇದು! ಆ ಸರ್ವೋಚ್ಚ ಪದವಿಗೆ ಯಾತ್ರೆ ಗೈವ ಊರ್ಧ್ವಮುಖವಾದ ಏರೇರಿಕೆಯ ವಿಕಾಸಶೀಲವಾದ ಆತ್ಮದ ಮಜಲು ಮಜಲಿನ ಮುನ್ನಡೆಯ ಚಿತ್ರ ಈ ಆದಿಪುರಾಣದಲ್ಲಿ ಹೃದಯಂಗಮವಾಗಿ ನಿರೂಪಿತವಾಗಿದೆ. ಮಹಾಬಲನು ಲಲಿತಾಂಗ, ವಜ್ರಜಂಘ, ಆರ್ಯ, ಶ್ರೀಧರ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ ಮತ್ತು ಅಹಮಿಂದ್ರಾದಿಗಳಲ್ಲಿ ಚರನಾಗಿ ಹತ್ತನೆಯ ಭವದಲ್ಲಿ ಅರ್ಹಂತನಾಗುತ್ತಾನೆ. ಆದಿಪುರಾಣದ ಕಲಾಸಾಮಗ್ರಿ ಜನ್ಮಜನ್ಮಗಳಲ್ಲಿ ಲೋಕಲೋಕಗಳಲ್ಲಿ ಚತುರ್ಗತಿಗಳಲ್ಲಿ ಪರಿವ್ರಜಿಸಿ ನೇಮಿರಹಿತಕೇವಲತೆಯ ಅಸೀಮದಲ್ಲಿ ನಿರ್ವಾಣವಾಗುತ್ತದೆ. ಅಂತೆಯೇ ಇಲ್ಲಿಯ ಭೂಮತೆ ಅಲೌಕಿಕವಾದದ್ದು, ಅತಿಮಾನುಷವಾದದ್ದು. ಮಹಾಕವಿಯ ದೈತ್ಯಶಕ್ತಿಯ ದಿವ್ಯಪ್ರತಿಭೆಗೆ ತಕ್ಕುದಾದದ್ದು!

ಆದಿಪುರಾಣದಲ್ಲಿ ಭವ್ಯತೆ ಎಲ್ಲಿ ಹೇಗೆ ಮೈವೆತ್ತಿದೆ ಎಂಬುದನ್ನು ಕಾವ್ಯದಲ್ಲಿ ಬರುವ ಜಿನಶಿಶುವಿನ ಜನ್ಮಾಭಿಷೇಕದ ಪ್ರಸಂಗ ಪುರಂದರನ ಆನಂದನೃತ್ಯದ ಪ್ರಸಂಗಾದಿಗಳನ್ನು ಓದಿ ಸಂತತವಾದ ಧ್ಯಾನಮನನಾದಿಗಳಿಂದ ಪರಿಭಾವಿಸಿ ಕೊಳ್ಳಬೇಕು.* ಇಂತಹ ಕಡೆಗಳಲ್ಲಿ ಬರುವ ವರ್ಣನೆಗಳು ಬ್ರಹ್ಮಸ್ಪರ್ಶಿ ಯಾಗಿವೆ, ವಿರಾಟ್‌ಪ್ರತಿಮೆಯಾಗಿವೆ, ಅದ್ಭುತರಮ್ಯೋಜ್ವಲ ಚಿತ್ರವಾಗಿವೆ! ಪಂಪನ ಮತಿ ಕಲ್ಪನೆ ಪ್ರತಿಭೆಗಳಿಗೆ ಶ್ರೀಮಂತ ಸಾಕ್ಷಿಗಳಾಗಿ ನಿಂತಿವೆ!

ಆದಿಪುರಾಣದಲ್ಲಿ ತೀರ್ಥಂಕರನಾದ ಪುರುಪರಮೇಶ್ವರನ ಚರಿತ್ರೆಯಂತೆ ಅವನ ಮಕ್ಕಳಾದ ಆ ಭರತಬಾಹುಬಲಿಗಳ ಚರಿತ್ರೆಯೂ ಅಧ್ಯಯನ ಯೋಗ್ಯವಾದ ಆದರ್ಶ ಚರಿತ್ರೆಯಾಗಿ ಬಂದಿದೆ. ರಾಜಿಕ ಆರ್ಥಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಕಕ್ಷಿಕಕ್ಷಿಗಳ ಪಕ್ಷಪಕ್ಷಗಳ ಖಂಡನಮಂಡನಗಳಿಂದಲೂ

---

* ಈ ವಿಷಯದಲ್ಲಿ ಹೆಚ್ಚಿನ ವಿವರಗಳನ್ನು ತಿಳಿಯಬಯಸುವವರು 'ತಪೋನಂದನ' ದಲ್ಲಿ 'ಪಂಪನಲ್ಲಿ ಭವ್ಯತೆ' ಎಂಬ ಲೇಖನವನ್ನು ಓದಬೇಕು.

ಆಘಾತಪ್ರತ್ಯಾಘಾತಗಳಿಂದಲೂ ಕ್ಷಣಕ್ಷಣಕ್ಕೂ ಹುಟ್ಟುತ್ತಿರುವ ಸಹಸ್ರ ಸಹಸ್ರ ವಿಷಮ ವಿರೋಧಗಳಿಗೆ ಏಕೈಕ ಬೀಜಮದ್ದು ತ್ಯಾಗವೀರನಾದ ಬಾಹುಬಲಿಯ ಚರಿತ್ರಪಠನ. ನಮ್ಮ ನಮ್ಮ ಹಮ್ಮು ಬಿಮ್ಮುಗಳನ್ನು ಮುರಿಯುವುದಕ್ಕೂ ನಮ್ಮ ನಮ್ಮ ಸ್ವಾರ್ಥ ಅಸೂಯೆ ದರ್ಪಕೋಪಾದಿಗಳನ್ನು ನಿಗ್ರಹಿಸುವುದಕ್ಕೂ ನಮಗೆ ಬಾಹುಬಲಿಯಂತಹ ವ್ಯಕ್ತಿ ಆರಾಧ್ಯದೈವವಾಗಬೇಕು. ಬಾಹುಬಲಿಯ ಕೃಪಾಹಸ್ತಾವಲಂಬಿಯಾದಲ್ಲದೆ ರಾಜಿಕ ಸಾಮಾಜಿಕ ಕ್ಷೇತ್ರಗಳ ಹೊಲಸಿನಿಂದ ನಾವು ಮೇಲೇಳಲಾರೆವಲ್ಲವೆ? ಧರ್ಮಕಲಿಯಾಗಿ ಅಹಿಂಸಾವೀರನಾಗಿ ಮನಃಕಷಾಯಗಳನ್ನು ತೊಳೆದುಕೊಂಡ ತಪೋಮೂರ್ತಿಯಾಗಿ ರಾರಾಜಿಸುವ ಪೂಜ್ಯ ಬಾಹುಬಲಿಯ ಆದರ್ಶ ಇಂದು ಜನಕ್ಕೆ ಬೇಕಾಗಿದೆ.

ರಾಜಕೀಯವಾಗಿ ಸ್ವತಂತ್ರರಾದ ಭಾರತೀಯರು ತಮ್ಮ 'ನಿಜ'ವನ್ನು ಅರಿಯಲು ಪುರುಪರಮೇಶ್ವರನ ಮತ್ತು ಅವನ ಕುಮಾರರ ದಿವ್ಯಚರಿತ್ರೆಯನ್ನು ಪಠಿಸುವುದು ಆವಶ್ಯಕ. ಈ ದೃಷ್ಟಿಯಿಂದ ಈ ಪುರಾಣ ಮಹಾಕಾವ್ಯದ ಸಂಗ್ರಹವನ್ನು ಪ್ರಕಟಪಡಿಸುವುದರ ಮೂಲಕ ಮೈಸೂರು ವಿಶ್ವವಿದ್ಯಾನಿಲಯ ತಾನೂ ಕೃತಕೃತ್ಯವಾಗಿದೆ, ಜನರನ್ನೂ ಕೃತಾರ್ಥರನ್ನಾಗಿ ಮಾಡಿದೆ.

ಪಂಪನ ಸಹಜಪ್ರತಿಭೆ ಕೃತಕವಾದ ಧರ್ಮಪಾಂಡಿತ್ಯದ ದಾಕ್ಷಿಣ್ಯಕ್ಕೆ ವಶವಾಗಿ ಕೆಲವೆಡೆ ಕಾವ್ಯದ ಕ್ಷೇತ್ರದಲ್ಲಿ ಶಾಸ್ತ್ರದ ವಸಾಹತುಗಳನ್ನು ಕಲ್ಪಿಸಿಕೊಂಡಿದೆ. ಈ ಶಾಸ್ತ್ರ ಆಯಾ ಧರ್ಮೀಯರಿಗೆ ಎಷ್ಟೇ ಅಗತ್ಯವಿದ್ದರೂ ಶುದ್ಧ ಸಾಹಿತ್ಯದ ದೃಷ್ಟಿಯಿಂದ ನೋಡುವವರಿಗೆ ಅನಾವಶ್ಯಕವಾದ ಹೊರೆಯಾಗುವುದೇ ಹೆಚ್ಚು ಸಂಭವ. ಆದ್ದರಿಂದ ಸಾಧ್ಯವಾದ ಎಡೆಗಳಲ್ಲೆಲ್ಲ ಈ ವಸಾಹತುಗಳನ್ನು ತೆಗೆದು ಅಥವಾ ಸಾಹಿತ್ಯಕ್ಷೇತ್ರದಲ್ಲಿ ವಿಲಯನಗೊಳಿಸಿ ಸಹಜ ಸಾಹಿತ್ಯಕ್ಷೇತ್ರವನ್ನಷ್ಟನ್ನೇ ಸಹೃದಯರಿಗೆ ನೀಡುವುದು ಇಂತಹ ಸಂಗ್ರಹಗಳ ಉದ್ದೇಶ. ಈ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ವಿಶ್ವವಿದ್ಯಾನಿಲಯದ ಗಣ್ಯ ಅಧ್ಯಾಪಕರಲ್ಲಿ ಒಬ್ಬರಾದ ಶ್ರೀ ಗುಂಡಪ್ಪನವರು ಆದಿಪುರಾಣದ ಈ ಸಂಗ್ರಹವನ್ನು ತೃಪ್ತಿಕರವಾಗಿ ಅಳವಡಿಸಿದ್ದಾರೆ.

ಸಂಸ್ಕೃತದ ಸುಭಾಷಿತವೊಂದು ಈ ಅರ್ಥ ಬರುವಂತೆ ಹೇಳುತ್ತದೆ:

ಸಂಸಾರದ ವಿಷವೃಕ್ಷದಿ ಹಣ್ಣೆರಡಿವೆ ಅಮೃತೋಪಮ:
ಕಾವ್ಯಾಮೃತದಾಸ್ವಾದನ ಮೇಣ್ ಸಜ್ಜನಸಲ್ಲಾಪ!

ಸಹೃದಯರಾದ ಕನ್ನಡಿಗರಿಗೆ ಈ ಸಂಗ್ರಹ ಕಾವ್ಯಾಮೃತವನ್ನೂ ಸಜ್ಜನ ಸಲ್ಲಾಪವನ್ನೂ ಹೃದಯ ತಣಿಯೆ ಒದಗಿಸಲಿ!

೧-೬-೧೯೫೪
ಮೈಸೂರು

ಕೆ. ವಿ. ಪುಟ್ಟಪ್ಪ,
ಪ್ರಕಾಶನ ಸಮಿತಿಯ ಅಧ್ಯಕ್ಷ.

# ನೆನವರಿಕೆ

ಈ ಸಂಗ್ರಹವನ್ನು ಸಿದ್ಧಪಡಿಸುವುದರಲ್ಲಿ ಈ ಹಿರಿಯರೂ ಮಾನ್ಯ ಮಿತ್ರರೂ ನನಗೆ ನೆರವು ನೀಡಿದ್ದಾರೆ: ಈ ಗ್ರಂಥಮಾಲೆಯ ಪ್ರಧಾನ ಸಂಪಾದಕರಾಗಿದ್ದು, ಆದಿಪುರಾಣ ಸಂಗ್ರಹ ಕಾರ್ಯವನ್ನು ನನಗೆ ವಹಿಸಿಕೊಟ್ಟು ಗ್ರಂಥ ಹೊರಬರುವ ಮೊದಲೇ ದಿವಂಗತರಾದ ನನ್ನ ಪೂಜ್ಯ ಗುರುಗಳು ರಾಜಸೇವಾಸಕ್ತ ಶ್ರೀ ಬಿ. ಎಂ. ಶ್ರೀಕಂಠಯ್ಯ, ಎಂ.ಎ.,ಬಿ.ಎಲ್., ಅವರು; ಅವರಾದ ಬಳಿಕ ಪ್ರಧಾನ ಸಂಪಾದಕರಾಗಿದ್ದು ನಾನು ಸಿದ್ಧಪಡಿಸಿದ ಹಸ್ತಪ್ರತಿಯನ್ನು ಪರಿಶೀಲಿಸಿ ಮೇಲ್ಪಾಡುಗಳನ್ನು ಸೂಚಿಸಿ ಅಚ್ಚುಕೂಟಕ್ಕೆ ಕಳಿಸಿದ ನನ್ನ ಪೂಜ್ಯ ಗುರುಗಳು ಶ್ರೀ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಅವರು; ಈಗ ಪ್ರಧಾನ ಸಂಪಾದಕರಾಗಿ ತಮ್ಮ ಮಹತ್ತ್ವಪೂರ್ಣವಾದ ಮುನ್ನುಡಿಯಿಂದ ಅಲಂಕರಿಸಿ ಗ್ರಂಥವನ್ನು ಬೆಳಕಿಗೆ ತರುತ್ತಿರುವ ಕನ್ನಡ ಕವಿವರ್ಯರಾದ ಶ್ರೀ ಕೆ. ವಿ. ಪುಟ್ಟಪ್ಪ, ಎಂ.ಎ., ಅವರು; ಪಂಪಕವಿಯ ಕಾಲದೇಶಾದಿಗಳ ವಿಷಯದಲ್ಲಿ ತಮ್ಮ ಪರಿಶೋಧನೆಯ ಫಲವನ್ನು ಕೇಳಿದೊಡನೆ ನನಗೆ ಒದಗಿಸಿಕೊಟ್ಟ ಕನ್ನಡದ ರಾಷ್ಟ್ರಕವಿ ಶ್ರೀ ಎಂ. ಗೋವಿಂದಪೈ ಅವರು; ಜೈನಧರ್ಮಕ್ಕೆ ಸಂಬಂಧಿಸಿದ ಹಲವು ವಿಷಯಗಳಲ್ಲಿನ ಸಂದಿಗ್ಧಾಂಶಗಳನ್ನು ಚರ್ಚಿಸಿ ಪತ್ರ ಬರೆದು ಖಚಿತಪಡಿಸಿದವರು ಮತ್ತು ಹಲವು ಗ್ರಂಥಗಳನ್ನೂ ತಾಳೆಯೋಲೆಯ ಪ್ರತಿಗಳನ್ನೂ ಒದಗಿಸಿಕೊಟ್ಟವರು: ಮೈಸೂರಿನ ಪಂಡಿತರು ನ್ಯಾಯತೀರ್ಥ ಶ್ರೀ ಎ. ಶಾಂತರಾಜಶಾಸ್ತ್ರಿಗಳು; ಮೂಡಬಿದರೆಯ ಜೈನಮಠದ ಪಂಡಿತರು ನ್ಯಾಯತೀರ್ಥ ಶ್ರೀ ಎಂ. ನಾಗರಾಜಶಾಸ್ತ್ರಿಗಳು ಮತ್ತು ಶ್ರೀ ವಿ. ಲೋಕನಾಥಶಾಸ್ತ್ರಿಗಳು; ನನ್ನ ಮಾನ್ಯ ಮಿತ್ರರಾದ ಶ್ರೀ ಜಿ. ಪಿ. ರಾಜರತ್ನಂ, ಎಂ.ಎ., ಅವರು. ಇವರೆಲ್ಲರಿಗೂ ಈ ಮೂಲಕ ವಂದನೆಯನ್ನರ್ಪಿಸುತ್ತೇನೆ.

ಬೆಂಗಳೂರು
೨೨-೫-೧೯೫೨

**ಎಲ್. ಗುಂಡಪ್ಪ**

## ಎರಡನೆಯ ಮುದ್ರಣ

ಮೊದಲ ಮುದ್ರಣದಲ್ಲಿ ಗದ್ಯದಂತೆ ಅಚ್ಚಾಗಿದ್ದ ಒಂದು ಕಂದವನ್ನು ಇಲ್ಲಿ ಸರಿಪಡಿಸಿ ಮುದ್ರಿಸಿದೆ. ಕೆಲವು ಕಡೆ ಲೇಖನ ಚಿಹ್ನೆಗಳನ್ನು ಉಪಯೋಗಿಸಿದೆ. ಮತ್ತೆಲ್ಲವೂ ಮೊದಲ ಮುದ್ರಣದ ಪುನರಾವೃತ್ತಿ.

ಮೈಸೂರು ವಿಶ್ವವಿದ್ಯಾನಿಲಯದ ೧೯೫೬ನೆಯ ವರ್ಷದ ಇಂಟರ್‌ಮಿಡಿಯೆಟ್ ಪರೀಕ್ಷೆಗೆ ಪಠ್ಯ ಪುಸ್ತಕವಾಗಿ ಗೊತ್ತುಮಾಡಿರುವುದರಿಂದ ಈ ಆದಿ ಪುರಾಣ ಸಂಗ್ರಹ ಇಷ್ಟು ಶೀಘ್ರವಾಗಿ ಪುನರ್ಮುದ್ರಣವಾಗುವುದಕ್ಕೆ ಅವಕಾಶವಾಯಿತು. ಪಠ್ಯಪುಸ್ತಕ ಸಮಿತಿಯವರಿಗೆ ವಂದನೆಗಳು.

ಬೆಂಗಳೂರು
೨೨–೮–೧೯೫೬

ಎಲ್. ಗುಂಡಪ್ಪ

# ತಪ್ಪು — ಸರಿ

ಪೀಠಿಕೆ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| iii | ೧೯ | ಶುಕ್ರ | ಶಕ್ರ |
| xii | ೨೬ | ಸೌಮ್ಯ | ಸಾಮ್ಯ |
| xviii | ೧೭ | ಗುಪ್ರ | ಗುಪ್ತ |
| xxi | ೧೩ | ವಿಧ್ಯಾನುವಾದ | ವಿದ್ಯಾನುವಾದ |
| xxx | ೨೭ | ಸ್ಪಷ್ಟ | ಸೃಷ್ಟ |
| xlviii | ೨೧ | ಸುತ್ತವರಿದು | ಸುತ್ತುವರಿದು |
| | ೨೨ | ಸುತ್ತವರಿದಿದೆ | ಸುತ್ತುವರಿದಿದೆ |
| l | ಕಡೆಯಪಂಕ್ತಿ | ದಜಯಾರ್ಧ | ವಿಜಯಾರ್ಧ |
| liv | ೨ | ಆಚಲ | ಅಚಲ |
| lxi | ೧೩ | ಗಳಾಗುತ್ತದೆ | ಗಳಾಗುತ್ತವೆ |
| lxxv | ೧೭ | ಕಣ್ಮಲೆಯ | ಕಣ್ಮಲೆಯೆ |
| lxxxix | ೭ | ದೊಡರೊಳ್ | ದೊಡಲೊಳ್ |
| xcvii | ೯ | ಮುಗುೞ್ | ಮುಗುಱ್ |
| | | ಹಿಂತಿರುಗು | ಹಿಂದಿರುಗು |
| xcviii | ೧೨ | ೫೧೪ | ೫೧೫ |
| | ೨೪ | ೫೧೩ | ೫೧೪ |
| xcix | ೧೦ | ೫೧೫ | ೫೧೬ |

ಗ್ರಂಥ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೧ | ೧೭ | ಮುತ್ತುಪಾ | ಮತ್ತುಪಾ |
| ೬ | ೨೦ | ಕಿವಿಯೋಳ್ | ಕಿವಿಯೊಳ್ |
| ೧೯ | ೬–೭ | ಎಂಜಲವುೞ | ಎಂಜಲೆವುೞ |
| ೪೮ | ೧೭ | ಕತ್ನಾಕರ | ರತ್ನಾಕರ |
| ೬೪ | ೮ | ರಂಜಿಸಿಳದವಳ್ | ರಂಜಿಸಿದಳವಳ್ |
| ೭೭ | ೭ | ಪಾದಾಂ | ಪದಾಂ |
| ೮೩ | ೧೨ | ವಶ್ಯಮುಕ್ಕು | ವಶ್ಯಮುಕ್ಕು |
| ೧೨೮ | ೧೨ | ಒೞಿಯಂ | ಬೞಿಯಂ |
| ೧೩೮ | ೧೭ | ಮುಱುಳ್ಗೊಂಡು | ಮರುಳ್ಗೊಂಡು |

# ಒಳಪಿಡಿ



## ಆದಿಪುರಾಣ ಸಂಗ್ರಹ



## ಗ್ರಂಥ

## ಮೊದಲನೆಯ ಭಾಗ

### ಪೂರ್ವ ಭವಾವಳಿ

## ಎರಡನೆಯ ಭಾಗ

### ಆದಿ ತೀರ್ಥಂಕರ ಚರಿತಂ

## ಮೂರನೆಯ ಭಾಗ

### ಭರತ ಚಕ್ರವರ್ತಿ ಚರಿತ್ರಂ



---

# ಆದಿಪುರಾಣ ಸಂಗ್ರಹ

## ಪೀಠಿಕೆ

### ೧ ಕವಿ ಪರಿಚಯ

ಕನ್ನಡ ಸಾಹಿತ್ಯ ಸುಮಾರು ಸಾವಿರದೈನೂರು ವರ್ಷಗಳಿಂದ ಬೆಳೆದು ಬಂದಿದೆ. ಈ ಸಾಹಿತ್ಯವನ್ನು ಮೊದಲು ರೂಪುಗೊಳಿಸಿ ಬೆಳಸಿದ ಕೀರ್ತಿ ಜೈನರಿಗೆ ಸಲ್ಲಬೇಕು. ಜೈನಕವಿಗಳಲ್ಲಿ ಪಂಪ, ಪೊನ್ನ, ರನ್ನ—ಈ ಮೂವರು 'ರತ್ನತ್ರಯ' ಎಂದು ಪ್ರಖ್ಯಾತರಾಗಿದ್ದಾರೆ. ಪೊನ್ನ ರನ್ನ ಜನ್ನರು ತಮ್ಮ ಕಾಲದ ಕನ್ನಡನಾಡಿನ ಚಕ್ರವರ್ತಿಗಳಿಂದ 'ಕವಿ ಚಕ್ರವರ್ತಿ' ಎಂಬ ಬಿರುದನ್ನು ಪಡೆದು ಬೆಳಗಿದರು. ಪಂಪನ ದೊರೆ ಚಕ್ರವರ್ತಿಯಲ್ಲ; ಬರಿಯ 'ಸಾಮಂತ ಚೂಡಾಮಣಿ'. ಆದ್ದರಿಂದ ಪಂಪನಿಗೆ ಕವಿಚಕ್ರವರ್ತಿಯೆಂಬ ಬಿರುದು ಬರಲಿಲ್ಲ. ಆದರೂ ಕನ್ನಡ ಕವಿಗಳಲ್ಲಿ ಪಂಪನಿಗೇ ಅಗ್ರಮರ್ಯಾದೆ. ಕವಿ ಚಕ್ರವರ್ತಿಗಳೂ ಅವನ ಹಿರಿಮೆಯನ್ನು ಅರಿತುಕೊಂಡು ಅವನನ್ನು ಹೊಗಳಿದ್ದಾರೆ. ಹೆಸರಾದ ಕವಿಗಳಲ್ಲಿ ಹಲವರು—ಜೈನರಲ್ಲದವರು ಕೂಡ —ಪಂಪನನ್ನು ನೆನೆದು ಕಾವ್ಯರಚನೆಗೆ ಕೈಹಾಕಿದ್ದಾರೆ; ಅವನಿಂದ ಸ್ಫೂರ್ತಿ ಪಡೆದಿದ್ದಾರೆ. ಪಂಪನ ಕಾವ್ಯಗಳು ಹೊರಬಂದ ಮೇಲೆ ಹಿಂದಿನ ಕಾವ್ಯಗಳೆಲ್ಲ ಸೂರ್ಯೋದಯವಾದ ಮೇಲಿನ ಚಂದ್ರ ನಕ್ಷತ್ರಗಳಂತೆ ಮಸುಳಿ ಮರೆಯಾದವು. ಪಂಪನ ಕಾವ್ಯಗಳು ಮುಂದಿನ ಕವಿಗಳಿಗೆ ಆದರ್ಶವಾಗಿ ಉಳಿದವು. ಹೀಗೆ ಪಂಪ ಕನ್ನಡಕ್ಕೆ ಆದಿಕವಿಯಾಗಿ, ಆದರ್ಶಕವಿಯಾಗಿ ಬೆಳಗುತ್ತಿದ್ದಾನೆ.

ಸಾಮಾನ್ಯವಾಗಿ ನಮ್ಮ ಕವಿಗಳ ಕಾಲ, ದೇಶ, ಮತ, ಜೀವನ ಘಟನೆ ಮೊದಲಾದ ಸ್ವಂತ ವಿಷಯಗಳು ನಮಗೆ ನಿಸ್ಪೃಷ್ಟವಾಗಿ ತಿಳಿಯುವಂತಿಲ್ಲ. ಅವರ ಮತ್ತು ಇತರರ ಕಾವ್ಯಗಳಲ್ಲೂ ಶಾಸನಗಳಲ್ಲೂ ದೊರೆಯಬಹುದಾದ ಕೆಲವು ಸಂಗತಿಗಳಿಂದ ಊಹಿಸಿ ತಿಳಿಯಬೇಕಾಗಿದೆ. ಆದರೆ ಪಂಪನ ಗ್ರಂಥಗಳಲ್ಲಿ ಅವನ ವಿಷಯುವಾಗಿ ಕೆಲವು ಮುಖ್ಯ ಸಂಗತಿಗಳು ಸ್ಪಷ್ಟವಾಗಿ ತಿಳಿಯು ಬರುತ್ತವೆ.

**ಕಾಲ :** ಆದಿಪುರಾಣದ ಕಡೆಯಲ್ಲಿ ಅದನ್ನು ತಾನು ಮುಗಿಸಿದ್ದು "ಶಕ ವರ್ಷಮೆಂಟುನೂಱಕ್ಕೆ ಕಡೆಯೊಳಱುವತ್ತುಮೂಱು ಸಂದಂದು" ಪ್ಲವ ಸಂವತ್ಸರದ ಕಾರ್ತಿಕ ನಂದೀಶ್ವರದಲ್ಲಿ ಎಂದು ಹೇಳಿದ್ದಾನೆ. ಶಾಲಿವಾಹನ ಶಕ ೮೬೩ನೆಯ ವರ್ಷ ಕ್ರಿ. ಶ. ೯೪೧ಕ್ಕೆ ಸರಿಹೊಂದುತ್ತದೆ. ಇದೇ ಆದಿಪುರಾಣದ ರಚನಕಾಲವೆಂದು ಇದುವರೆಗೂ ಸಾಮಾನ್ಯ ನಂಬಿಕೆಯಾಗಿತ್ತು. ಆದರೆ ಪಂಪನು ಕೊಟ್ಟಿರುವ "ಸಿತ ಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲ ನಕ್ಷತ್ರದೊಳನ್ವಿತಮಾಗೆ" ಎಂಬ ತಿಥಿ ವಾರ ನಕ್ಷತ್ರಗಳು ಕ್ರಿ. ಶ. ೯೪೧ನೆಯ ವರ್ಷಕ್ಕೆ ಸರಿಹೊಂದುವುದಿಲ್ಲವೆಂದೂ ೯೪೨ನೆಯ ಅಕ್ಟೋಬರ್ ೧೬ನೆಯ ತಾರೀಖು ಭಾನುವಾರಕ್ಕೆ ಸರಿಹೊಂದುವುದೆಂದೂ ಮಂಜೇಶ್ವರದ ಶ್ರೀ ಗೋವಿಂದ ಪೈ ಅವರು ಲೆಕ್ಕ ಮಾಡಿ ನಿರ್ಧರಿಸಿದ್ದಾರೆ.*

---

* ಶಾ. ಶ. ೮೬೩ನೆಯ ಪ್ಲವ ಸಂವತ್ಸರವು ಉತ್ತರ ಸಂಪ್ರದಾಯದ ಮೇರೆಗೆ ಒದವಿದುದು ಕ್ರಿ. ಶ. 940–41ರಲ್ಲಿ, ದಕ್ಷಿಣ ಸಂಪ್ರದಾಯದ ಪ್ರಕಾರ ಕ್ರಿ. ಶ. 941–42ರಲ್ಲಿ. ಆದರೆ ಇವೆರಡೂ ವರ್ಷಗಳಲ್ಲಿ ಕಾರ್ತಿಕ ಶು|| ೫ ಯ ತಿಥಿ 'ದಿನಪತಿವಾರ' ಅಂದರೆ ರವಿವಾರದಂದು ಬಂದಿರಲಿಲ್ಲ—ಕ್ರಿ. ಶ. 940ರಲ್ಲಿ ಆ ತಿಥಿ ಅಕ್ಟೋಬರ ತಾ. 9 ಶುಕ್ರವಾರದಂದು ಬಂದು ಉದಯಕಾಲದಲ್ಲಿ ಮೂಲ ನಕ್ಷತ್ರದಿಂದ ಕೂಡಿತ್ತು; ಕ್ರಿ. ಶ. 941ರಲ್ಲಿ ಅದು ಅಕ್ಟೋಬರ ತಾ. 28 ಗುರುವಾರದಂದು ಬಂದಿತ್ತಲ್ಲದೆ ಅಂದು ಮೂಲ ನಕ್ಷತ್ರವೂ ಇರಲಿಲ್ಲ. ಆದರೆ ಪಂಪನು ಹೇಳಿರುವ ಶಕ ಸಂಖ್ಯೆಯಲ್ಲಿ ೮೬೩ 'ಸಂದು' ಎಂದಿರುವುದರಿಂದ, ಆಗ್ಗೆ ಶಾಲಿವಾಹನ ಶಕದ ೮೬೩ ವರ್ಷಗಳು ಸಂದು ಹೋಗಿ ೮೬೪ನೆಯ ವರ್ಷವು ನಡೆಯುತ್ತಿದ್ದಿತು ಎಂದಾಗುತ್ತದೆ; ಹಾಗಾದರೆ ಆ ಪ್ಲವ ಸಂವತ್ಸರವು ಕ್ರಿ. ಶ. 942–43ಕ್ಕೆ ಸರಿಹೋಗುತ್ತದೆ. ಶಾ. ಶ. ವರ್ತಮಾನ ೮೬೪ರಲ್ಲಿ ಕಾರ್ತಿಕ ಶುಕ್ಲ ಚೌತಿಯ ತಿಥಿ ಕ್ರಿ. ಶ. 942ನೆಯ ಅಕ್ಟೋಬರ 16ನೆಯ ತಾರೀಖು ರವಿವಾರದಂದು ಇಳಿಹೊತ್ತಿನವರೆಗಿದ್ದು ಆಮೇಲೆ ಪಂಚಮಿಯ ತಿಥಿ ಆರಂಭಿಸಿತು. ಮೂಲ ನಕ್ಷತ್ರವು ಆಮೇಲೂ ಸುಮಾರು ೧೨|| ಗಳಿಗೆಗಳ ವರೆಗೂ ಇದ್ದಿತ್ತು; ಅತ ಏವ ಕ್ರಿ. ಶ. 942ನೆಯ ಅಕ್ಟೋಬರ 16ನೆಯ ತಾರೀಖು ರವಿವಾರದ ರಾತ್ರಿಯ ಮೊದಲನೆಯ ಜಾವದಲ್ಲಿ ಪಂಪನು ಆದಿಪುರಾಣವನ್ನು ಮುಗಿಸಿರಬೇಕು ಎಂಬೀ ಫಲಿತಾಂಶವು ಈಗಣ ಮಾದರಿಯ ಗಣಿತದಿಂದ ಉಪಲಬ್ಧವಾಗುತ್ತದೆ.

'ಪಂಪನ ದೇಶ ಕಾಲಗಳ ವಿಚಾರ'—ಎಂ. ಗೋವಿಂದ ಪೈ (ಭಾರತಿ: ಆಗಸ್ಟಿನಿಂದ ನವೆಂಬರ್ ೧೯೩೩)

'ಪಂಪನ ಆದಿ ಪುರಾಣದ ರಚನ ಕಾಲ'—(ಕಂಠೀರವ: ೨೭ ಆಗಸ್ಟ್ ೧೯೪೦; ೩ ಸೆಪ್ಟೆಂಬರ್ ೧೯೪೦)

'ದುಂದುಭಿ ಸಂವತ್ಸರೋದ್ಭವಂ ಪಂಪಂ' ಎಂದು ಮತ್ತೊಂದು ಪದ್ಯದಲ್ಲಿ ಹೇಳಿದೆ. ಇದರ ಪ್ರಕಾರ ಆದಿಪುರಾಣವನ್ನು ಬರೆಯುವ ಹೊತ್ತಿಗೆ ಪಂಪನಿಗೆ ೩೯ ವರ್ಷ ವಯಸ್ಸೆಂದು ಗೊತ್ತಾಗುತ್ತದೆ. ಪಂಪ ಹುಟ್ಟಿದ್ದು ಶಾಲಿವಾಹನ ಶಕ ೮೨೪ಕ್ಕೆ ಸಲ್ಲುವ ಕ್ರಿ. ಶ. ೯೦೨-೩ರಲ್ಲಿ ಎನ್ನಬಹುದು; ಹುಟ್ಟಿದ ದಿನ ಇಂಥದೆಂದು ಹೇಳಲಾಗುವುದಿಲ್ಲ.

**ಕುಲ:** ಪಂಪ ಹುಟ್ಟುಜೈನನಾದರೂ ಅವನ ಅಜ್ಜನ ಕಾಲದ ವರೆಗೂ ಅವನ ಹಿರಿಯರು ನಿಷ್ಠರಾದ ವೈದಿಕ ಬ್ರಾಹ್ಮಣರಾಗಿದ್ದರು. ಪಂಪನಿಗೆ ಅವರಲ್ಲಿ ವಿಶೇಷ ಗೌರವ; ಜೈನಮತವನ್ನವಲಂಬಿಸಿದ ತನ್ನ ತಂದೆಯಲ್ಲಿ ತುಂಬ ಅಭಿಮಾನ.

ಪಂಪನ ಪೂರ್ವಿಕರು ಇದ್ದದ್ದು ವೆಂಗಿಮಂಡಲದ 'ವೆಂಗಿಪೞು' ಎಂಬ ಊರಿನಲ್ಲಿ. ವೆಂಗಿಮಂಡಲ 'ಕೃಷ್ಣಾ ಗೋದಾವರೀ ನದಿಗಳ ನಡುವೆ ಪೂರ್ವ ಸಮುದ್ರದ ಕರೆಯ ತನಕ ಮುಟ್ಟಿದ್ದ ವಿಸ್ತಾರವಾದ ನಾಡು'. ಆ ವೆಂಗಿಪೞುವಿನಲ್ಲಿ,

ನಯಶಾಲಿ ವತ್ಸಗೋತ್ರ
ಶ್ರಯಣೀಯನನೇಕ ಸಕಳ ಶಾಸ್ತ್ರಾರ್ಥವಿನಿ
ಶ್ಚಯ ಮತಿ ಕೃತಿ ಮಾಧವ ಸೋ
ಮಯಾಜಿ ಸಲೆ ನೆಗಟ್ದನಾಸಮುದ್ರಂಬರೆಗಂ

ಹೀಗೆ ಪ್ರಸಿದ್ಧನಾದ ಮಾಧವಸೋಮಯಾಜಿ ಮಂತ್ರಸಿದ್ಧಿ ಪಡೆದು ಮಹಾ ಮಹಿಮನಾಗಿದ್ದನು. 'ಶಕ್ರ ಶಶಾಂಕ ಸೂರ್ಯ ಪವಮಾನರೂ' ಅವನ ಮಂತ್ರಶಕ್ತಿಗೆ ಅಂಜುತ್ತಿದ್ದರು. ಅಷ್ಟು ಮಹಿಮಾವಂತನಾದ ಆತನು 'ಸರ್ವ ಕ್ರತುಯಾಜಿ'ಯಾದನು. ಆಗಿ,

ವರ ದಿಗ್ವನಿತೆಗೆ ಮಾಟದ
ಕುರುಳಾ ತ್ರೈಭುವನಕಾಂತೆಗಂ ದಲ್ ಕಂಠಾ
ಭರಣಮೆನೆ ಪರೆದ ತನ್ನ
ಧ್ವರ ಧೂಮದೆ ಕರಿದುಮಾಡಿದಂ ನಿಜಯಶಮಂ

ಸರ್ವಕ್ರತುಯಾಜಿಯಾಗಿ ಹಲವು ಯಜ್ಞಗಳ ಹೊಗೆಯಿಂದ (ಪ್ರಾಣಿಹಿಂಸೆಯಿಂದ) ತನ್ನ ಹೆಸರಿಗೆ ಕಳಂಕ ತಂದುಕೊಂಡನಲ್ಲ ಎಂದು ಪಂಪನ ಜೈನ ಹೃದಯಕ್ಕೆ ನೋವಾಗಿದೆ.

ಆ ಮಾಧವ ಸೋಮಯಾಜಿಯ ಮಗ ಅಭಿಮಾನಚಂದ್ರ. ಅವನು 'ಕರಿ ತುರಗೋತ್ತಮ ಮಣಿ ಕನಕ ಸಾರ ವಸ್ತು'ಗಳನ್ನು ಕೇಳಿ ಕೇಳಿದವರಿಗೆ ಕೊಟ್ಟು ಪ್ರಸಿದ್ಧನಾದನು. (ಇದರಿಂದ ಪಂಪನ ಪೂರ್ವಿಕರು ತುಂಬ ಸಿರಿವಂತ ರಾಗಿದ್ದರೆಂದು ಸಿದ್ಧವಾಗುತ್ತದೆ). ಆತನಿಗೆ ಕೊಮರಯ್ಯನೆಂಬ ಮಗನಾದನು. ಕೊಮರಯ್ಯನು 'ವೇದ ವೇದಾಂಗ ಸಮುದ್ಯೋತಿತ ಮತಿಯುತನ್; ಉಚಿತ ಪುರಾತನ ಚರಿತನ್'. ಕೊಮರಯ್ಯನ ಮಗ ಅಭಿರಾಮದೇವರಾಯ. ಆತನು 'ಅವನಿತಳಾಕಾಶ ವ್ಯಾಪ್ತ ಕೀರ್ತಿ; ನಿಜಗುಣ ಮಣಿ ರತ್ನಾಕರನ್; ಅಜ್ಞಾನ ತಮೋನೀಕರನ್'. ಆತನು ತನ್ನ ಮುತ್ತಜ್ಜನಂತೆ ಕೀರ್ತಿಗೆ ಕಪ್ಪು ಹಚ್ಚಿಕೊಳ್ಳಲಿಲ್ಲ; ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿ ಉತ್ತಮ ವಾದ ತನ್ನ ಜಾತಿಯನ್ನು ಇನ್ನೂ ಉತ್ತಮಮಾಡಿಕೊಂಡನು. ಹೇಗೆ ಎಂಬು ದನ್ನು ಪಂಪನ ಮಾತಿನಲ್ಲೇ ಹೇಳಬೇಕು:

"ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇ
ಮಾತೊ ಜಿನೇಂದ್ರಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ ತ
ಜ್ಜಾತಿಯನುತ್ತರೋತ್ತರಮೆ ಮಾಡಿ ನೆಗಳ್ಚಿದನಿಂತಿರಾತ್ಮವಿ
ಖ್ಯಾತಿಯನಾತನಾತನ ಮಗಂ ನೆಗಳ್ದಂ ಕವಿತಾಗುಣಾರ್ಣವಂ"

ಉತ್ತಮವಾದ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು ನಂಬುವುದಕ್ಕೆ ಜೀವದಯೆ ಯಿಂದ ಪರಿಶುದ್ಧವಾದ ಜೈನಧರ್ಮವೊಂದೇ ತಕ್ಕದ್ದೆಂದು ಪಂಪನ ನಿಶ್ಚಯ. ಅಂಥ ಉತ್ತಮ ಧರ್ಮವನ್ನು ನಂಬಿ ತನ್ನ ತಂದೆ ತನ್ನ ಜಾತಿಯ ಘನತೆಯನ್ನು ಹೆಚ್ಚಿಸಿದನೆಂದು ಅವನಲ್ಲಿ ಪಂಪನಿಗೆ ಎಣೆಯಿಲ್ಲದ ಅಭಿಮಾನ.

ಪಂಪನು ವೇದವೇದಾಂಗ ಪಾರಂಗತರಾದ ಉತ್ತಮ ವೈದಿಕ ಬ್ರಾಹ್ಮಣರ ಕುಲದಲ್ಲಿ ಬಂದು ಆ ಪರಂಪರೆಯಲ್ಲಿ ಅಭಿಮಾನ ಇಟ್ಟುಕೊಂಡಿರುವವನು; ಜೈನಮತದಲ್ಲಿ ಹೆಚ್ಚಿನ ಘನತೆಯನ್ನು ಕಂಡು ಅದನ್ನು ಅವಲಂಬಿಸಿದಾತನ ಮಗನಾಗಿ ಆ ಮತದಲ್ಲಿ 'ಅಪರಿಮಿತ ಭಕ್ತಿ'ಯನ್ನಿಟ್ಟಿರುವವನು. ಹೀಗೆ ಇವನಲ್ಲಿ ಬ್ರಾಹ್ಮಣ ಜೈನ ಮತಗಳೆರಡರ ಸಂಸ್ಕಾರವೂ ಸಮರಸವಾಗಿ ಹೊಂದಿ ಕೊಂಡು ತೋರಿಬರುತ್ತಿದೆ. ಇದರಿಂದ ಇವನ ಜೀವನಕ್ಕೂ ಕಾವ್ಯಕ್ಕೂ ಅಪೂರ್ವವಾದ ಸಮತೆ ಘನತೆ ಗಾಂಭೀರ್ಯಗಳು ಒದಗಿ ಬಂದಿವೆ.

**ದೇಶ:** ಪಂಪನ ಪೂರ್ವಿಕರು ವಾಸಮಾಡುತ್ತಿದ್ದ ನಾಡು ವೆಂಗಿಮಂಡಲ. ಪಂಪನು ತನ್ನ ಪ್ರೌಢವಯಸ್ಸಿನಲ್ಲಿ ಕಲಿಯಾಗಿ, ಸತ್ಕವಿಯಾಗಿ ಶಾಸನದ

ಅಗ್ರಹಾರವನ್ನು ಪಡೆದು ರಾಜಸನ್ಮಾನಿತನಾಗಿ ಬಾಳಿದ್ದೂ ಅದೇ ವೆಂಗಿಮಂಡಲ ದಲ್ಲಿ; ಲೆಂಬುಳಪಾಟಕವೆಂಬ ಈಗಿನ ವೇಮುಲವಾಡದಲ್ಲಿ ಆಳುತ್ತಿದ್ದ ಚಾಲುಕ್ಯ ವಂಶದ ಎರಡನೆಯ ಅರಿಕೇಸರಿಯ ಆಸ್ಥಾನದಲ್ಲಿ. ಆದರೆ ಅವನು ಹುಟ್ಟಿದ್ದೂ ಬೆಳೆದದ್ದೂ ಎಲ್ಲಿ ಎಂಬುದು ಸ್ಪಷ್ಟವಾಗಿಲ್ಲ; ಸಂದೇಹಕ್ಕೆ ಆಸ್ಪದವಾಗಿದೆ. ಪಂಪಭಾರತದಲ್ಲಿ ಬನವಾಸಿ ದೇಶವನ್ನು ಕುರಿತು ಅರ್ಜುನನ ಬಾಯಲ್ಲಿ ಬರುವ ಮಾತುಗಳನ್ನು ನೋಡಿದರೆ ಪಂಪನ ತಾಯ್ನಾಡು, ಹುಟ್ಟೂರು, ಬನವಾಸಿಯೇ ಆಗಿರಬೇಕು ಎನ್ನಿಸುತ್ತದೆ. ಬನವಾಸಿ ದೇಶವನ್ನು ವರ್ಣಿಸುವ ಆ ನಾಲ್ಕು ಪದ್ಯಗಳು ತಾಯ್ನಾಡಿನ ಒಲುಮೆಯನ್ನು ಉಕ್ಕಿ ಹರಿಸುತ್ತ ಕನ್ನಡ ಸಾಹಿತ್ಯ ದಲ್ಲಿ ಎಣೆಯಿಲ್ಲದವಾಗಿವೆ : ಬನವಾಸಿದೇಶ ನಂದನವನದಂತಿದೆ. ಅಲ್ಲಿ ಮನುಷ್ಯ ರಾಗಿ ಹುಟ್ಟುವುದಕ್ಕೆ ಪುಣ್ಯ ಬೇಕು. ಆ ಪುಣ್ಯವಿಲ್ಲದಿದ್ದರೆ, 'ಮಱಿದುಂಬಿ ಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ಬನವಾಸಿ ದೇಶದೊಳ್'.

'ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ'

'ಅಮರ್ದಂ ಮುಕ್ಕುಳಿಪಂತುಟಪ್ಪ ಸುಸಿಲೊಂದಿಂಪುಂ ತಗುಳ್ದೊಂದು ಗೇ
ಯಮುಮಾದಕ್ಕರ ಗೊಟ್ಟಿಯುಂ ಚದುರರೊಳ್ವಾತುಂ ಕುಳಿರ್ ಕೋಟ್ಟಿ ಜೊಂ
ಪಮುಮೇವೇಱ್ಪುದನುಳ್ಳಮೆಯ್ಸುಕಮುಮಿಂತೆನ್ನಂ ಕರಂ ನೋಡಿ ನಾ
ಡೆ ಮನಂಗೊಂಡಿರೆ ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೇ'

ಎಂದೋ ಒಮ್ಮೆ ಬಂದು ಹೋದ ಆಗಂತುಕನು ಇಷ್ಟು ಆಳವಾದ ಪ್ರೀತಿಯನ್ನು ಹೊರಸೂಸಲಾರ. 'ಆರಂಕುಸವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ. ತೆಂಕನಾಡ ಮಱಿಯಲ್ಕಿನ್ನೇಂ ಮನಂ ಬರ್ಕುಮೇ!' ಎಂಬೀ ಮಾತುಗಳು ತನ್ನ ಸರ್ವಸುಖಕ್ಕೂ ನೆಲೆವೀಡಾದ ಮೆಚ್ಚಿನ ತಾಯ್ನಾಡನ್ನು ಅಗಲಿ ದೂರ ಹೋಗಿ ಇರಬೇಕಾಗಿ ಬಂದವನೊಬ್ಬನು ಅದನ್ನು ಅಡಿಗಡಿಗೆ ನೆನೆದು ಹಂಬಲಿಸಿರುವ ನುಡಿಗಳಂತಿವೆ. ಪಂಪನಿಗೆ ಬನವಾಸಿಯ ಮೇಲೆ ಅಸಾಧಾರಣವಾದ ಅಭಿಮಾನವಿದ್ದಿತೆಂಬುದಕ್ಕೆ ಅವನ ಕಾವ್ಯಗಳಲ್ಲಿ ಇನ್ನೂ ಕೆಲವು ಸಾಕ್ಷಿಗಳಿವೆ. ಇವುಗಳಿಂದ ಪಂಪ ಬನವಾಸಿಯಲ್ಲೇ ಹುಟ್ಟಿ ಬೆಳೆದ

ನೆಂದು ಸಂದೇಹಕ್ಕೆಡೆಯಿಲ್ಲದಂತೆ ಸಾಧಿಸಲಾಗುವುದಿಲ್ಲವಾದರೂ ಅವನು ಅಲ್ಲಿ ಬಹು ಕಾಲ ಬಾಳಿ ಆ ನಾಡಿನ ಮತ್ತು ಅಲ್ಲಿನ ಜನದ ಚೆಲುವಿಗೂ ರಸಿಕತೆಗೂ ಮೆಚ್ಚಿ ನಲಿದು, ತನ್ನ ಜೀವನವನ್ನು ತಿದ್ದಿಕೊಂಡು ಮಹಾಕವಿಯಾದನೆಂಬುದ ರಲ್ಲಿ ಸಂಶಯವಿಲ್ಲ.

ಪಂಪ ತನ್ನ ಕಾವ್ಯಗಳಲ್ಲಿ ಬಳಸಿರುವುದು ತನಗೆ 'ಸಾಜ'ವಾಗಿದ್ದ 'ಪುಲಿಗೆಱೆಯ ತಿರುಳ ಕನ್ನಡ'.* ಕನ್ನಡಮಾತು ತಕ್ಕಷ್ಟು ಪ್ರಚಾರವಲ್ಲಿದ್ದರೂ ತೆಲುಗಿಗೆ ಹೆಚ್ಚು ಪ್ರಾಧಾನ್ಯವಿದ್ದಿರಬಹುದಾದ ವೆಂಗಿಮಂಡಲದ ವೆಂಗಿಪಟುವೇ ಅವನ ಹುಟ್ಟೂರಾಗಿದ್ದು ಅಲ್ಲೆ ಅವನು ಬೆಳೆದು ಅದೇ ವೆಂಗಿಮಂಡಲದ ಲೆಂಬುಳಪಾಟಕದಲ್ಲಿ ನೆಲಸಿದ್ದ ಪಕ್ಷದಲ್ಲಿ ಪುಲಿಗೆಱೆಯ ಕನ್ನಡ ಅವನಿಗೆ ಸಹಜವಾಗುತ್ತಿರಲಿಲ್ಲ. ಬನವಾಸಿ ಪುಲಿಗೆಱೆಯ ನೆರೆನಾಡಾದ್ದರಿಂದ ಆ ಕನ್ನಡ ಬನವಾಸಿಯವರಿಗೆ ಸಹಜವಾಗುವುದರಲ್ಲಿ ಆಶ್ಚರ್ಯವಿಲ್ಲ. ಇದೂ ಪಂಪ ಬನವಾಸಿ ನಾಡಿನವನಾಗಿರಬಹುದೆಂಬುದಕ್ಕೆ ಸಾಧಕವಾಗಿದೆ.

ಪಂಪನ ತಂದೆ ತಾನು ಜೈನ ಧರ್ಮವನ್ನವಲಂಬಿಸಿದ ಮೇಲೆ ತನ್ನ ಬಂಧುಗಳೊಡನೆ ಹೊಂದಿಕೊಂಡಿರಲಾರದೆಯೊ ಬನವಾಸಿ ಪ್ರಾಂತದಲ್ಲಿ ಜೈನ ಧರ್ಮಕ್ಕೆ ಹೆಚ್ಚು ಆಶ್ರಯವಿದ್ದುದರಿಂದಲೊ ಮತ್ತೆ ಯಾವ ಕಾರಣದಿಂದಲೊ ತನ್ನ ತವರು ನಾಡನ್ನು ತೊರೆದು ಬನವಾಸಿಗೆ ಬಂದಿರಬೇಕು; ಅಲ್ಲೆ ಪಂಪ ಹುಟ್ಟಿರಬೇಕು. ಅಥವಾ ಆ ಮೊದಲೆ ಪಂಪ ಹುಟ್ಟಿದ್ದ ಪಕ್ಷದಲ್ಲಿ ಪಂಪನ ಎಳವೆಯಲ್ಲೆ ಬನವಾಸಿಗೆ ಬಂದಿರಬೇಕು. ಮುಂದೆ ಅರಿಕೇಸರಿಯ ಆಸ್ಥಾನಕ್ಕೆ ಹೋಗುವ ವರೆಗೂ ಪಂಪ ಬನವಾಸಿಯಲ್ಲೆ ವಾಸಮಾಡಿರಬೇಕು.

ಪುಲಿಗೆಱೆ (ಧಾರವಾಡ ಜಿಲ್ಲೆಯಲ್ಲಿರುವ ಈಗಿನ ಲಕ್ಷ್ಮೇಶ್ವರ) ಅರಿಕೇಸರಿಯ ರಾಜಧಾನಿಯಾಗಿತ್ತೆಂದೂ ಪಂಪನೂ ಅಲ್ಲೆ ವಾಸಿಸುತ್ತಿದ್ದನೆಂದೂ ನಂಬಿಕೆಯಿತ್ತು. ಆದರೆ ಅರಿಕೇಸರಿಯ ರಾಜಧಾನಿ ಪುಲಿಗೆಱೆಯಲ್ಲ, ಲೆಂಬುಳಪಾಟಕ (ಈಗ ನೈಜಾಮರ ರಾಜ್ಯದ ಕರೀಂನಗರ ಜಿಲ್ಲೆಯಲ್ಲಿರುವ ವೇಮುಲವಾಡ) ಎಂದು ಈಚೆಗೆ ದೊರೆತ ಒಂದು ಶಾಸನ†ದಿಂದ ನಿರ್ಧರ

---

* ಈ ಸಂಗತಿಯನ್ನು ತಿಳಿಸುವ ಪದ್ಯ (ಪಂಪ ಭಾರತದ ೧ಳನೆಯ ಆಶ್ವಾಸದ ೫ಲನೆಯ ಪದ್ಯ) ಪ್ರಕ್ಷಿಪ್ತವಾಗಿರಬಹುದೆಂಬ ಸಂದೇಹವೂ ಇದೆ.

† ಪರಭಣಿಯ ತಾಮ್ರಶಾಸನ ಮತ್ತು ಪಂಪ ಭಾರತ: ಪ್ರಬುದ್ಧ ಕರ್ಣಾಟಕ, ಸಂಪುಟ ೧೬, ಸಂಚಿಕೆ ೧.

ವಾಗಿದೆ. ಅಲ್ಲದೆ ಪುಲಿಗೆಱೆನಾಡು ಅರಿಕೇಸರಿಯ ವಂಶದವರಿಗೆ ಎಂದೂ ಅಧೀನವಾಗಿರಲಿಲ್ಲವೆಂಬುದನ್ನು ಶ್ರೀ ಗೋವಿಂದ ಪೈ ಅವರು ತೋರಿಸಿದ್ದಾರೆ.* ಆದ್ದರಿಂದ ಪುಲಿಗೆಱೆಗೂ ಪಂಪನಿಗೂ ತಿರುಳು ಕನ್ನಡ ನುಡಿಯೊಂದು ಹೊರತು ಬೇರೆ ಸಂಬಂಧ ಇತ್ತೆಂದು ಹೇಳಲಾಗುವುದಿಲ್ಲ.

ಆದಿಪುರಾಣವನ್ನು ಬರೆಯುವ ಹೊತ್ತಿಗಾಗಲೆ ಪಂಪ ಆಸ್ಥಾನಕವಿಯಾಗಿ 'ಕವಿತಾ ಗುಣಾರ್ಣವ' ಎಂಬ ಬಿರುದು ಪಡೆದಿದ್ದನು. ಅವನು ರಾಜಾಸ್ಥಾನಕ್ಕೆ ಹೋದದ್ದು ಯಾವಾಗ ಎಂಬುದು ಗೊತ್ತಿಲ್ಲ.

**ವ್ಯಕ್ತಿ ಚಿತ್ರ :** ಆದಿಪುರಾಣದ ಪೀಠಿಕೆಯಲ್ಲಿ ಕವಿಯ ವ್ಯಕ್ತಿಚಿತ್ರವನ್ನು ಕುರಿತ ಈ ಮಾತುಗಳು ದೊರೆಯುತ್ತವೆ :

'ಕದಳೀ ಗರ್ಭಶ್ಯಾಮಂ
ಮೃದು ಕುಟಿಲ ಶಿರೋರುಹಂ ಸರೋರುಹ ವದನಂ
ಮೃದು ಮಧ್ಯಮತನು ಹಿತಮಿತ
ಮೃದುವಚನಂ ಲಲಿತ ಮಧುರ ಸುಂದರವೇಷಂ

'ವತ್ಸಕುಲತಿಲಕನಭಿಜನ
ವತ್ಸಳನಭಿಮಾನಮೂರ್ತಿ ಸುಕವಿಯಶೋ ನಿ
ರ್ಮತ್ಸರನಮೃತಮಯೋಕ್ತಿ ಶ
ರತ್ಸಮಯ ಸುಧಾಂಶು ವಿಶದ ಕೀರ್ತಿವಿತಾನಂ

'ದುಂದುಭಿಗಭೀರನಿನದಂ . . . . ಸುರ
ದುಂದುಭಿಪತಿ ಚರಣಕಮಳ ಭೃಂಗಂ ಪಂಪಂ'

ಪಂಪನಿಗೆ ಬಾಳೆಯ ಸುಳಿಯಂತೆ ನಸುಗಪ್ಪಾದ ಮೈಬಣ್ಣ; ಮೃದುವಾದ ಗುಂಗುರು ಕೂದಲು; ತಾವರೆಯಂತೆ ದುಂಡುಮುಖ; ಎತ್ತರವೂ ಕುಳ್ಳೂ ಅಲ್ಲದ ಮಧ್ಯಮ ತರದ ಆಕೃತಿ; ಹಿತವಾದ ಮಿತವಾದ ಮೃದುವಾದ ಮಾತು; ದುಂದುಭಿಯಂತೆ ಗಂಭೀರವಾದ ದನಿ; ಲಲಿತ ಮಧುರ ಸುಂದರ ವೇಷ. ಅವನ ಚೆಲುವು ಎಲ್ಲರನ್ನೂ ಆಕರ್ಷಿಸುತ್ತಿದ್ದಿತೆಂದು ತೋರುತ್ತದೆ.

ಪಂಪ ಕುಲೀನರಾದ ಉತ್ತಮರಿಗೆ ಪ್ರೀತಿಪಾತ್ರನಾಗಿದ್ದನು. ಇವನು

---

* 'ಪಂಪನ ದೇಶ ಕಾಲಗಳ ವಿಚಾರ' ನೋಡಿ.

ಅಭಿಮಾನಮೂರ್ತಿ. 'ಕವಿತೆಯಿಂದ ಪಡೆಯಬಯಸುವ ಫಲ ಯಾವುದು? ಪೂಜೆ, ಕೀರ್ತಿ, ಲಾಭ—ಇವು ತಾನೆ? ಜಿನೇಂದ್ರಗುಣ ಸ್ತುತಿಯಿಂದ ಇಂದ್ರ ಪೂಜೆ, ಭುವನಸ್ತುತವಾದ ಕೀರ್ತಿ, ಮುಕ್ತಿಲಾಭ—ಇವು ತಾವಾಗಿಯೇ ಬಂದು ಸೇರುತ್ತವೆ. ಹೀಗಿರುವಲ್ಲಿ ಹೆರರು ಕೊಡುವುದೇನು, ಮಾಡುವುದೇನು, ಅವರಿಂದ ಆಗುವುದೇನು?' ಎಂಬ ಮಾತೇ ಅವನ ಈ ಅಭಿಮಾನಕ್ಕೆ ಸಾಕ್ಷಿ ಯಾಗಿದೆ. ವಿಕ್ರಮಾರ್ಜುನ ವಿಜಯದಲ್ಲಿ ಅರಿಕೇಸರಿ ಪ್ರೀತಿಯಿಂದ ಬಱಿ ಯಟ್ಟ ಕರಸಿ 'ಪಿರಿದನಿತ್ತು' ತನ್ನ ಕೀರ್ತಿ ನಿಲ್ಲುವ ಹಾಗೆ ಇತಿಹಾಸಕಥೆಯನ್ನು ಬರೆಯಲೊಪ್ಪಿಸಿದನೆಂಬ ಸಂದರ್ಭದಲ್ಲಿಯೂ ಈ ಅಭಿಮಾನಮೂರ್ತಿಯ ಚಿತ್ರ ಬಂದಿದೆ:

"ಕವಿತೆ ನೆಗಜ್ತೆಯಂ ನಿಜಿಿಸೆ ಜೋಳದ ಪಾಱಿ ನಿಜಾಧಿನಾಥನಾ
ಹವದೊಳರಾತಿ ನಾಯಕರ ಪಟ್ಟನೆ ಪಾಱಿಿಸೆ ಸಂದ ಪೆಂಪು ಭೂ
ಭುವನದೊಳಾವಗಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ
ವಿವರಿಸೆ ಸಂದನೇನ್ ಕಲಿಯೊ ಸತ್ಕವಿಯೋ ಕವಿತಾಗುಣಾರ್ಣವಂ"

ಪರಮ ದುರ್ಲಭವಾದ ಮತ್ತೊಂದು ಶ್ಲಾಘ್ಯಗುಣ ಪಂಪನಲ್ಲಿತ್ತು. ತಾನು ಸ್ವಾಭಿಮಾನಿಯಾಗಿದ್ದದ್ದು ಮಾತ್ರವಲ್ಲ, ಇತರ ಕವಿಗಳ ಕೀರ್ತಿಯಲ್ಲಿ ಎಳ್ಳಷ್ಟೂ ಮತ್ಸರವಿಲ್ಲದವನಾಗಿದ್ದನು; ಯಾರಾದರೊಬ್ಬ ಸತ್ಕವಿ ಕಣ್ಣಿಗೆ ಬಿದ್ದರೆ ಅವನ ವಿಷಯದಲ್ಲಿ ಬಾಯಿತುಂಬ ಒಳ್ಳೆಯ ಮಾತಾಡುತ್ತಿದ್ದನು; ಅಮೃತಮಯೋಕ್ತಿಯಾಗಿದ್ದನು. ಈ ಮಾತನ್ನು ದೊಡ್ಡವರೆಂದು ಹೆಸರು ಗೊಂಡ ಎಷ್ಟು ಜನರ ವಿಷಯದಲ್ಲಿ ಹೇಳಲಾದೀತು? ಪಂಪನಲ್ಲಿ ಈ ಬಗೆಯ ನಿರ್ಮಾತ್ಸರ್ಯ ಗುಣವಿದ್ದದ್ದರಿಂದ ಅವನ ಕೀರ್ತಿ ಅಮೃತಕಿರಣನ ಬೆಳಗಿನಂತೆ ಎಲ್ಲೆಡೆಯೂ ಹರಡಿದ್ದು ಆಶ್ಚರ್ಯವಲ್ಲ.

ಪಂಪನ ದನಿ ದುಂದುಭಿಯ ದನಿಯಂತೆ ಗಂಭೀರವಾಗಿತ್ತು. ಆ ಗುಡುಗು ದನಿಯನ್ನು ಕೇಳುವ ಪುಣ್ಯ ನಮಗಿಲ್ಲ. ಆದರೆ ಅವನ ಕಾವ್ಯಗಳಲ್ಲಿ ಆ ಉಕ್ತಿಗಾಂಭೀರ್ಯವನ್ನೂ ನಾದಮಾಧುರ್ಯವನ್ನೂ ಕಂಡುಕೊಳ್ಳಬಹುದು. 'ನಿಚ್ಚಂ ಪೊಸತರ್ಣವಂಬೊಲ್ ಅತಿಗಂಭೀರಂ' ಎಂದು ಹೆಸರುಗೊಂಡ ಅವನ ಕವಿತೆಯಲ್ಲಿ ಅವನ ದನಿಯ ಛಾಯೆಯನ್ನು ಕಂಡು ತಣಿಯಬಹುದು.

'ಲಲಿತಾಲಂಕರಣಂ' ಎಂದು ವಿಕ್ರಮಾರ್ಜುನ ವಿಜಯದಲ್ಲಿಯೂ 'ವನಿತಾ ಕಟಾಕ್ಷ ಕುವಲಯ ವನ ಚಂದ್ರಂ' ಎಂದು ಮೊದಲಾಗಿ ಆದಿಪುರಾಣದ

ಪೀಠಿಕೆಯಲ್ಲೂ ಪಂಪನ ವಿಷಯವಾದ ಹೇಳಿಕೆಗಳು ದೊರೆಯುತ್ತವೆ. ಪಂಪ ಸುಂದರ; ಒಳ್ಳೆಯ ರಸಿಕ; ಅಚ್ಚುಕಟ್ಟಾದ ವೇಷಭೂಷಣಗಳನ್ನು ತುಂಬ ಮೆಚ್ಚಿದವನು; ಪ್ರೇಮದ ಸುಖವನ್ನು ಅನುಭವಿಸಿ ಬಲ್ಲವನು; ಕೋಮಲವಾದ ಬಹುಮುಖವಾದ ಸೊಬಗು ಕಂಪುಗಳನ್ನು ಬೀರುವ ಮಲ್ಲಿಗೆ ಮೊದಲಾದ ಹಲವು ಹೂವುಗಳ ಚೆಲುವಿಗೆ ಮನಸೋತವನು; ಗಾನದಿಂಪಿಗೆ ಮೈಮರೆಯು ವವನು. ಸಂಸಾರಸುಖವನ್ನು ಅಲ್ಲಗಳೆಯದೆ ಅದರ ಸಾರವನ್ನು ಸವಿಯುವುದು ಕರ್ತವ್ಯವೆಂಬ ಮನೋಭಾವನೆಯುಳ್ಳವನು. ಅವನ ಕಾವ್ಯಗಳೆರಡರಲ್ಲೂ ಇದಕ್ಕೆ ಬೇಕಾದಷ್ಟು ನಿದರ್ಶನಗಳನ್ನು ಕಾಣಬಹುದು. ಆದಿಪುರಾಣದಲ್ಲಿ ಒಂದು ಕಡೆ 'ಧರ್ಮಂ ಪ್ರಧಾನಂ; ಅರ್ಥಂ ಧರ್ಮಾಂಘ್ರಿಪ ಫಳಂ; ಅದರ್ಕೆ ರಸಮದು ಕಾಮಂ' ಎಂದು ನುಡಿದು ಕಾಮೋಪಭೋಗ ಯಾವಾಗಲೂ ಧರ್ಮಕ್ಕೆ ವಿರುದ್ಧವೆಂಬ ಭಾವನೆ ತಪ್ಪು ಎಂದು ಸಾರಿದ್ದಾನೆ.

ರಸಿಕನಾಗಿ ಸಂಸಾರ ಸುಖವನ್ನು ಮೆಚ್ಚಿದವನಾದರೂ ರಾಜಮನ್ನಣೆಯನ್ನು ಪಡೆದು ಸಂಪತ್ತಿನಲ್ಲಿ ಮೆರೆಯುವವನಾದರೂ ಪಂಪ ವಿನಯಶಾಲಿ, ದೈವಭಕ್ತ. ಕುಲಪರಂಪರೆಯ ವೈದಿಕಧರ್ಮದ ಸಾರವನ್ನೂ ಹೊಸದಾಗಿ ಸ್ವೀಕರಿಸಿದ ತೀವ್ರ ತಪಶ್ಚರ್ಯೆಯ ಜೈನಧರ್ಮದ ಸಾರವನ್ನೂ ಚೆನ್ನಾಗಿ ಮೈಗೂಡಿಸಿ ಕೊಂಡು ಸಂಸಾರ ಸ್ವರೂಪವನ್ನು ಅರಿತು ವೈರಾಗ್ಯಕ್ಕೆ ಮನಸ್ಸು ಹರಿಸಿದವನು; ಈ ರೀತಿಯ ಧರ್ಮಪ್ರೇಮದಿಂದ ಪ್ರೇರಿತನಾಗಿ ಅವನು 'ಅಪರಿಮಿತ ಭಕ್ತಿ ಯಿಂದ' ಆದಿಪುರಾಣದ ರಚನೆಗೆ ಕೈಹಾಕಿದನು.

**ವಿನಯ:** ಶಾಸ್ತ್ರಸಾಹಿತ್ಯಗಳ ವಿಷಯದಲ್ಲಿ ಪಂಪನಿಗೆ ಪರಮ ಪೂಜ್ಯ ಭಾವನೆಯಿತ್ತು. ಆದಿ ಪುರಾಣದಲ್ಲಿ 'ಪರಮ ಜಿನೇಂದ್ರವಾಣಿಯೆ ಸರಸ್ವತಿ; ಅದು ಹೆಣ್ಣುರೂಪಾಂತು ನಿಂತದ್ದಲ್ಲ. ಆ ಜಿನವಾಣಿಯ ಸ್ವರೂಪದ ಸರಸ್ವತಿ ಯನ್ನೆ ಬೇಡುತ್ತೇನೆ' ಎಂದು ಹೇಳಿದ್ದಾನೆ. ಬುಧರು ಪಂಪನ ಸಾಮರ್ಥ್ಯ ವನ್ನು ಪ್ರಶಂಸಿಸಿ ಬಿರುದುಗಳನ್ನು ಹೊಗಳಿ, 'ತ್ರಿದಶಸ್ತುತ್ಯಮಿದಾದಿದೇವ ಚರಿತಂ. ಕರ್ಣಾಮೃತಸ್ಯಂದಿಯಕ್ಕಿದು ಭವ್ಯಾವಳಿಗೆ' ಎಂದು ಹೇಳಿದರು.

"ಎಂದಿಂತು ತಮ್ಮ ತಮ್ಮಣು
ಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇ
ೞೆಂದೊಡೆ ಪೇೞಲ್ಕಾಂ ಬಗೆ
ದಂದೆಸಿದೆನ್ನಳವೆ ಗಣಧರೋದಿತ ಚರಿತಂ

ಪುರುದೇವಾದಿ ಜಿನೇಂದ್ರಮಾಳೆ ಗಣಭೃತ್ಸಂತಾನಮೆಂದೀ ಪರಂ
ಪರೆಯಿಂ ವಿಶ್ರುತ ವೀರಸೇನ ಜಿನಸೇನಾಚಾರ್ಯ ಪರ್ಯಂತಮಾ
ಗಿರೆ ಬಂದೀ ಕಥೆ ಗುಣ್ಪುಪೆತ್ತುದವರುಂ ಜ್ಞಾನರ್ಧಿಸಂಪನ್ನರೆಂ
ದಿರದಾಂ ಧೃಷ್ಟನೆನೀ ಕಥಾಬ್ಧಿಯುಮನೇನೀಸಲ್ ಮನಂದಂದೆನೋ"

ಇಲ್ಲಿ ಪಂಪನು, 'ಗಣಧರರು ಹೇಳಿರುವ ಕಥೆಯನ್ನು ವರ್ಣಿಸುವುದು ನನಗೆ ಸಾಧ್ಯವೆ? ಜ್ಞಾನರ್ಧಿಸಂಪನ್ನರಾದ ಅವರು ಹೇಳಿದ ಗಂಭೀರವಾದ ಆ ಕಥಾಬ್ಧಿಯನ್ನು ಈಸುವುದಕ್ಕೆ ಮನಸ್ಸುಮಾಡಿ ನಾನು ಧೃಷ್ಟನಾದೆ' ಎಂದು ವಿನಯವನ್ನು ಮೆರೆದಿದ್ದಾನೆ. ಅಲ್ಲದೆ, 'ಗುರು ದೇವೇಂದ್ರಮುನಿ. ಇಂದ್ರ ವಂದಿತನಾದ ಪುರುದೇವ ಕಥಾನಾಯಕ. ಆ ದೇವನ ಜನ್ಮಾಂತರಗಳಿಂದ ಮನೋಹರವಾಗಿರುವುದು ಈ ಕಥೆ. ಈ ಕಥೆಯಿಂದ ನನ್ನ ಮಾತಿಗೆ ಬಲ ಬಂತು, ಕಳೆಬಂತು' ಎಂದಿದ್ದಾನೆ. ಈ ವಿನಯ ಕವಿಕುಲಗುರುವಾದ ಕಾಳಿದಾಸನು ರಘುವಂಶಕಾವ್ಯವನ್ನು ಮೊದಲುಮಾಡುವಾಗ ತೋರಿಸಿರುವ ವಿನಯವನ್ನು ಜ್ಞಾಪಕಕ್ಕೆ ತರುತ್ತದೆ.

ಹೀಗೆಯೇ ವಿಕ್ರಮಾರ್ಜುನವಿಜಯದಲ್ಲಿಯೂ

'ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ಕವಿ
ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ
ವಾಸಮನೆಯ್ದೆ ಪೇೞ್ದಪೆನದಲ್ಲದೆ ಗರ್ವಮೆ ದೋಷಮುೞ್ತಿಗಂ
ದೋಷಮೆ ಕಾಣೆನೆನ್ನಱಿವ ಮಾೞ್ಕೆಯೆ ಪೇೞ್ವೆನಿದಾವ ದೋಷಮೋ'

ಎಂದು ವಿನಯವನ್ನೆ ಪ್ರಕಟಿಸಿದ್ದಾನೆ. 'ಗರ್ವಮೆ ದೋಷಂ. ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ವ್ಯಾಸರಲ್ಲಿ ಭಕ್ತಿಯನ್ನು ತೋರಿಸಿದ್ದಾನೆ. ತನ್ನ ಸಾಮರ್ಥ್ಯದಲ್ಲಿ ತನಗೆ ಪೂರ್ಣ ನಂಬಿಕೆಯಿರುವುದಾದರೂ ಮಾನ್ಯರಾದ ಪಂಡಿತರು ಈ ಕೆಲಸ ಮಾಡಲು ಪಂಪನೊಬ್ಬನೆ ಸಮರ್ಥನೆಂದು ಹೊಗಳಿ ಉಬ್ಬಿಸಿದ್ದರೂ ಅವನು ಸ್ವಲ್ಪವೂ ಅಹಂಕಾರಪಡಲಿಲ್ಲ. ವಿದ್ಯೆಗೆ ಸಹಜವಾದ ವಿನಯದಿಂದ ತಗ್ಗಿ ಹಿರಿಯರಿಗೆ ತಲೆಬಾಗಿ ಅವರು ಮಾಡಹೇಳಿದ್ದು ತನಗೆ ಮೆಚ್ಚಿಕೆಯಾದ ಕೆಲಸವೇ ಆದ್ದರಿಂದ 'ಅಱ್ತಿಯಿಂದ' ಮಾಡಲು ಕೈಹಾಕಿದ್ದಾನೆ.

ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯಗಳೆರಡರಲ್ಲಿಯೂ ಕವಿವಿಷಯ

ವಾಗಿ ದೊರೆಯುವ ಪದ್ಯಗಳನ್ನೆಲ್ಲ (ಮೇಲೆ ಉದಾಹರಿಸಿರುವ ಮೂರು ಪದ್ಯಗಳಲ್ಲಿಯಂತೆ ಅವನೇ ಬರೆವನೆಂದು ಸ್ಪಷ್ಟವಾಗಿಲ್ಲದಿರುವವನ್ನು ಕೂಡ) ಪಂಪನೇ ಬರೆದನೆಂದು ನಂಬಿದರೆ ಅವನ ಈ ವಿನಯಗುಣಕ್ಕೆ ಸ್ವಲ್ಪಮಟ್ಟಿಗೆ ಕುಂದು ತಟ್ಟುತ್ತದೆ. ಪಂಪನ ಗುಣಗಳನ್ನು ವರ್ಣಿಸಿ ಬಿರುದುಗಳನ್ನು ಉಗ್ಗಡಿಸುವ ಪದ್ಯಗಳು ಅವನ ಹೇಳಿಕೆಯಂತೆಯೇ 'ಬುಧಸಮೂಹಂ ತಮ್ಮ ತಮ್ಮಣುಗಿಂದಂ' ಹೇಳಿದ ಪ್ರಶಸ್ತಿಗಳು. ತಮ್ಮ ಮೆಚ್ಚಿನ ಕವಿಯನ್ನು ಕುರಿತು ಅವರು ಆಡಿದ ಮಾತುಗಳಲ್ಲಿ ಹಲವು ಅತಿಶಯೋಕ್ತಿಗಳೂ ದರ್ಪದ ಮಾತುಗಳೂ ಇರುವುದು ಸಹಜ. ಆದರೆ ಪಂಪ ಅಂಥ ಮಾತುಗಳನ್ನು ತಾನೆಂದೂ ಆಡಿಲ್ಲ. 'ಸುಕವಿಯಶೋನಿರ್ಮತ್ಸರ'ನಾದ ಆತನು 'ಮುನ್ನಿನ ಕಬ್ಬಮನೆಲ್ಲ**ಮಿಕ್ಕಿ ಮೆಟ್ಟಿದುವು** ಸಮಸ್ತಭಾರತಮುಮಾದಿ ಪುರಾಣ ಮಹಾಪ್ರಬಂಧಮುಂ' ಎಂದು ದರ್ಪೋಕ್ತಿಗಳನ್ನಾಡಿದನೆಂದರೆ ನಂಬುವುದು ಕಷ್ಟ.*

ಈ ಪದ್ಯಗಳೆಲ್ಲ ಪಂಪನವೇ ಆಗಿರಲಿ ಅಥವಾ ಅವನ ಪ್ರಶಸ್ತಿರೂಪವಾಗಿ ಬೇರೆಯವರು ಹೇಳಿದವೇ ಆಗಿರಲಿ (ಒಬ್ಬ ಕವಿಯ ಗ್ರಂಥದಲ್ಲಿ ಅದು ಪ್ರಕಟವಾಗುವಾಗಲೇ ಬೇರೆಯವರು ಬರೆದ ಕವಿಯ ಪ್ರಶಸ್ತಿಯನ್ನೂ ಸೇರಿಸುವುದು ತಮಿಳುಸಾಹಿತ್ಯದಲ್ಲಿ ಹಿಂದಿನಿಂದಲೂ ವಾಡಿಕೆಯಾಗಿದೆ) ಅವುಗಳಲ್ಲಿ ಪಂಪನ ವಿಷಯವಾದ ಹಲವು ಸಂಗತಿಗಳು ತಿಳಿಯಬರುವುದರಿಂದ ಅವೆಲ್ಲ ನಮಗೆ ಮುಖ್ಯವಾದವೇ. ಅದರಲ್ಲೂ ಅವನನ್ನು ಕಂಡಿದ್ದ ಸಮಕಾಲಿಕರು ಆಡಿದ್ದರೆ ಆ ಮಾತುಗಳಂತೂ ಬಹು ಬೆಲೆಯುಳ್ಳವು. ಅಂದಿನ ಅವರ ವಿಮರ್ಶೆ ಇಂದಿನವರಿಗೂ ಮಾನ್ಯವಾಗಿದೆ; ನ್ಯಾಯವಾಗಿ ತೋರುತ್ತಿದೆ.

**ಕಾವ್ಯಗಳು :** ಪಂಪ ಆದಿಪುರಾಣ, ವಿಕ್ರಮಾರ್ಜುನವಿಜಯ ಎಂಬ ಎರಡು ಕಾವ್ಯಗಳನ್ನು ಬರೆದಿದ್ದಾನೆ. ಎರಡೂ ಚಂಪೂಕಾವ್ಯಗಳು. ಆದಿಪುರಾಣ ಧಾರ್ಮಿಕ ಗ್ರಂಥ; ಲೋಕಕಲ್ಯಾಣಕ್ಕಾಗಿ 'ಧರ್ಮಾಮೃತ'ವನ್ನು ವರ್ಷಿಸಿದ 'ಆದಿ ತೀರ್ಥೇಶ್ವರನ ಚರಿತ'; 'ಕರ್ಣಾಮೃತಸ್ಯಂದಿಯಕ್ಕಿದು ಭವ್ಯಾವಳಿಗೆ' ಎಂದು ಪಂಡಿತರು ಪ್ರೇರಿಸಿದರೂ ಮುಖ್ಯವಾಗಿ ತನಗೆ ಪುಣ್ಯ ದೊರಕಲೆಂದೂ 'ಕರ್ಮನಿರ್ಜರೆ' ಯಾಗಲೆಂದೂ ಬಯಸಿ 'ಅನಂತಸುಖಾಭಿ

---

* ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ೨೬ನೆಯ ಸಂಪುಟದ ೧ ನೆಯ ಸಂಚಿಕೆಯಲ್ಲಿರುವ 'ನಮ್ಮ ರತ್ನತ್ರಯದ ವಿನಯ' ಎಂಬ ಶ್ರೀ ಜಿ. ಪಿ. ರಾಜರತ್ನಂ, ಎಂ. ಎ., ಅವರ ಲೇಖನವನ್ನು ನೋಡಿ.

ಲಾಷಿ'ಯಾಗಿ 'ಷೋಡಶ ಭಾವನೆಯಿಂದ' ಬರೆದ 'ಷೋಡಶಾಶ್ವಾಸ' ಗಳುಳ್ಳ ಪವಿತ್ರ ಗ್ರಂಥ.

'ವಿಕ್ರಮಾರ್ಜುನ ವಿಜಯ' ಎಂಬುದು 'ಪಂಪ ಭಾರತ'ದ ಹೆಸರು. ತನ್ನ ದೊರೆಯಾದ ಅರಿಕೇಸರಿಯ ಗುಣಗಳೂ ಪ್ರೀತಿವಿಶ್ವಾಸಗಳೂ ಪಂಪನ ಮನಸ್ಸನ್ನು ಸೆಳೆದವು; 'ಗುಣಾರ್ಣವ'ನೆನಿಸಿದ ಅರಿಕೇಸರಿ ಉದಾತ್ತರಾದ ಪೂರ್ವದ ಷೋಡಶ ಮಹಾರಾಜರ ಪಂಕ್ತಿಗೆ ಸೇರಲು ತಕ್ಕವನಾಗಿ ತೋರಿದನು. ಅರಿಕೇಸರಿಯೂ ಪಂಪನನ್ನು ಕರಸಿ ತನ್ನ ಕೀರ್ತಿ ನಿಲ್ಲುವಂತೆ ಇತಿಹಾಸಕಥೆಯನ್ನು ಬರೆಯಬೇಕೆಂದು ಕೇಳಿಕೊಂಡನು. ಪಂಡಿತರು 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುನ್ *ಸಮಸ್ತಭಾರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ; ಪೇೞ್ವೊಡೆ ಪಂಪನೇ ಪೇೞ್ಗುಂ' ಎಂದು ಪ್ರೋತ್ಸಾಹಿಸಿದರು. ಆಗ ಪಂಪನು ಭಾರತವನ್ನು ಬರೆಯತೊಡಗಿ 'ಗುಣಾರ್ಣವ'ನ ಒಳ್ಪನ್ನು ಕಂಡವನಾದ್ದರಿಂದ 'ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗೞ್ತಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್' ಎಂದು ಅರಿಕೇಸರಿಯನ್ನು ಭಾರತದ ಅರ್ಜುನನೊಡನೆ ಅಭೇದವಾಗಿ ವರ್ಣಿಸಿ 'ವಿಕ್ರಮಾರ್ಜುನ ವಿಜಯ' ವನ್ನು ರಚಿಸಿದನು.

ಮಹಾಭಾರತ ವೈದಿಕಧರ್ಮದವರಿಗೆ ಪವಿತ್ರಗ್ರಂಥವಾದರೂ ಜೈನನಾದ ಪಂಪನಿಗೆ ಅದು ಲೌಕಿಕಗ್ರಂಥವೇ. ಅದನ್ನು ಲೌಕಿಕದೃಷ್ಟಿಯಿಂದಲೆ ನೋಡಿ ಉದಾತ್ತವಾದ ಪುರುಷಗುಣಗಳನ್ನು ಮೆರೆದ ಮಹಾಪುರುಷರ ಚರಿತ್ರೆಯನ್ನೊಳಗೊಂಡು ಭಾರತ ಲೋಕಪೂಜ್ಯವಾಯಿತು ಎಂದು ಅದರ ಘನತೆ

---

* 'ಸಮಸ್ತ ಭಾರತ' ಎಂಬ ಮಾತಿಗೆ 'ಸಮಗ್ರವಾದ ಭಾರತ', 'ಸಂಗ್ರಹವಾಗಿ ಹೇಳಿದ ಭಾರತ' ಎಂಬ ಅರ್ಥಗಳ ಜೊತೆಗೆ (ಒಂದರೊಡನೊಂದನ್ನು) 'ಬೆರಸಿ ಹೇಳಿರುವ ಭಾರತ' ಎಂಬ ಮೂರನೆಯ ಅರ್ಥವೂ ಹೊಳೆಯುತ್ತದೆ. ಅರಿಕೇಸರಿಯನ್ನು ಅರ್ಜುನನೆಂದು ಅಭೇದವಾಗಿ ವರ್ಣಿಸಿರುವೆನೆಂದು ಪಂಪನೇ ಸ್ಪಷ್ಟವಾಗಿ ಹೇಳಿದ್ದಾನೆ. ಗ್ರಂಥದಲ್ಲಿ ಅರ್ಜುನನ ಹೆಸರೂ ಬಿರುದುಗಳೂ ಬರಬೇಕಾದ ಕಡೆ ಅರಿಕೇಸರಿಯ ಹೆಸರು ಬಿರುದುಗಳನ್ನೆ ಉಪಯೋಗಿಸಿದ್ದಾನೆ. ಉಳಿದ ಕಥಾವಿಷಯಗಳಲ್ಲಿ ಕೂಡ ಅರಿಕೇಸರಿಯ ಚರಿತ್ರೆಗೂ ಮಹಾಭಾರತಕ್ಕೂ ಸಾಮ್ಯವಿದೆಯೆಂದೂ ಎರಡನ್ನೂ ಬೆರಸಿ ಕಥೆ ಹೇಳಿರುವುದರಿಂದ ಇದಕ್ಕೆ ಸಮಸ್ತಭಾರತವೆಂಬ ಹೆಸರು ಬಂತೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಶ್ರೀ ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' ನೋಡಿ.

ಯನ್ನು ಎತ್ತಿ ತೋರಿಸಿದ್ದಾನೆ. ಆದಿಪುರಾಣದಲ್ಲಿ 'ಜಿನಾಗಮ'ವನ್ನೂ ಸಮಸ್ತ ಭಾರತದಲ್ಲಿ 'ಲೌಕಿಕ'ವನ್ನೂ ಬೆಳಗಿದ್ದಾನೆ.

ಭಾರತ ಆದಿಪುರಾಣಗಳಲ್ಲಿ 'ಒಂದಱುದಿಂಗಳೊಳೊಂದು ಮೂಱು ತಿಂಗಳೊಳೆ ಸಮಾಪ್ತಿಯಾದುದೆನೆ ಬಣ್ಣಿಸಿದಂ ಕವಿತಾಗುಣಾರ್ಣವಂ'. ಭಾರತವನ್ನು ಒಂದು ವರ್ಷದೊಳಗೆ ಮುಗಿಸಬೇಕೆಂದು ಅರಿಕೇಸರಿ ತಿಳಿಸಿದ್ದನು. ಪಂಪ ಬರೆಯತೊಡಗಿ ಆರು ತಿಂಗಳಲ್ಲೆ ಮುಗಿಸಿದನು. ಆದಿಪುರಾಣದ ರಚನೆಯಲ್ಲಿ ಆ ರೀತಿಯ ಕಾಲನಿಯಮ ಇದ್ದಂತೆ ಕಾಣಲಿಲ್ಲ. ಆದರೂ ಅದನ್ನು ಮೂರು ತಿಂಗಳಲ್ಲೆ ಮುಗಿಸಿದನು. ಇಷ್ಟು ಅಲ್ಪಕಾಲದಲ್ಲಿ ಬರೆದಿರುವುದಾದರೂ ಪಂಪನ ಕೆಲಸ ಅವಸರವಸರವಾಗಿ ಮಾಡಿದ್ದರ ಹಾಗೆ ಕಾಣುವುದಿಲ್ಲ.

ಪಂಪಭಾರತದಲ್ಲಿ ದೊರೆಯುವ ಮೇಲಿನ ಮಾತಿಗೆ ಭಾರತ ಮತ್ತು ಆದಿಪುರಾಣಗಳೆರಡನ್ನೂ ಒಂದೇ ವರ್ಷ ಒಂದಾದ ಮೇಲೊಂದರಂತೆ ರಚಿಸಿರಬೇಕೆಂದು ಕೆಲವರು ಅರ್ಥಮಾಡುತ್ತಾರೆ. ಪಂಪನ ಸಾಮರ್ಥ್ಯವನ್ನು ಸ್ಥಾಪಿಸುವುದಕ್ಕೆ ಹೀಗೆ ಅರ್ಥಮಾಡಬೇಕಾದ ಅಗತ್ಯವೇನೂ ಇಲ್ಲ. ಅವರ ಈ ವಿವರಣೆಯನ್ನೊಪ್ಪಿಕೊಂಡರೆ ಭಾರತ ಮೊದಲು ಹುಟ್ಟಿತೆಂದೂ ಆದಿಪುರಾಣ ಅಮೇಲೆ ಹುಟ್ಟಿತೆಂದು ಕೂಡ ಹೇಳಬಹುದಾಗುತ್ತದೆ. ಆದರೆ ಎರಡು ಗ್ರಂಥಗಳನ್ನೂ ಚೆನ್ನಾಗಿ ಹೋಲಿಸಿ ನೋಡಿದರೆ ಎರಡಕ್ಕೂ ನಡುವೆ ತಕ್ಕಮಟ್ಟಿನ ಕಾಲ ಕಳೆದಿರಬೇಕೆಂದೂ ಆದಿಪುರಾಣವನ್ನು ಬರೆದ ಮೇಲೆ ಲೋಕಾನುಭವ ಇನ್ನೂ ಹೆಚ್ಚಿ ಮನಸ್ಸು ಪರಿಪಕ್ವಕ್ಕೆ ಬಂದ ಬಳಿಕ ವಿಕ್ರಮಾರ್ಜುನ ವಿಜಯವನ್ನು ರಚಿಸಿರಬೇಕೆಂದೂ ಸ್ಪಷ್ಟವಾಗುತ್ತದೆ.

**ಪ್ರಶಸ್ತಿ :** ಆದಿಪುರಾಣವನ್ನು ಬರೆದದ್ದರಿಂದ 'ಪುರಾಣಕವಿ'ಎಂದು ಜೈನಸಮಾಜವೇ ಅವನನ್ನು ಹೊಗಳಿತು; ಪಂಡಿತರ ಮೆಚ್ಚೂ ದೊರೆಯಿತು. ಭಾರತವನ್ನೂ 'ಸಕಳಾವನೀತಳ ಜನ'ವೂ ಹಿರಿದಾಗಿ ಕೊಂಡಾಡಿತು. ಗುಣಾರ್ಣವರಾಜ ಪ್ರೀತಿಯಿಂದ ಕೊಂಡಾಡಿ ಲೆಕ್ಕವಿಲ್ಲದಷ್ಟು ಪಂಚರತ್ನ'ಗಳನ್ನೂ 'ಜೀವಧನ'ಗಳನ್ನೂ ಕೊಟ್ಟು 'ಧರ್ಮಪುರ'ವೆಂಬ ಶಾಸನದ ಅಗ್ರಹಾರವನ್ನು ಕಾವ್ಯಕ್ಕೆ ಮೆಚ್ಚುಕೊಟ್ಟನು. ಅಸದೃಶವಾದ ಈ ಕಾವ್ಯಗಳಿಂದ ಪಂಪ 'ನಾಡೊವಜ'ನಾದನು.

ಅರಿಕೇಸರಿ ತನ್ನ 'ಗುಣಾರ್ಣವ' ಎಂಬ ಬಿರುದಿಗೆ ಸರಿದೊರೆಯಾಗುವಂತೆ ಪಂಪನಿಗೆ 'ಕವಿತಾ ಗುಣಾರ್ಣವ' ಎಂಬ ಬಿರುದು ಕೊಟ್ಟನೆಂದು ತೋರುತ್ತದೆ.

ಇದಲ್ಲದೆ, ದೊರೆಯೊ ವಿದ್ವನ್ಮಂಡಲಿಯೊ ಮೆಚ್ಚಿ ಕೊಟ್ಟ 'ಸುಕವಿಜನ ಮನೋಮಾನಸೋತ್ತಂಸ ಹಂಸ', 'ಸಂಸಾರ ಸಾರೋದಯ', 'ಸರಸ್ವತೀ ಮಣಿಹಾರ' ಎಂಬ ಬೇರೆ ಬಿರುದುಗಳೂ ಪಂಪನಿಗಿದ್ದಂತೆ ಆದಿಪುರಾಣದಿಂದ ತಿಳಿಯ ಬರುತ್ತದೆ.

ಒಳ್ಳೆಯ ಕಾವ್ಯಕ್ಕೆ ಮೆಚ್ಚಿ ಅರಸರು ಕವಿಗಳಿಗೆ ಬಿರುದು ಕೊಟ್ಟು ಸತ್ಕರಿಸುವುದೇನೂ ವಿಶೇಷವಲ್ಲ. ಇಲ್ಲಿ, ಕವಿಯಿಂದ ರಾಜನಿಗೇ ಬಿರುದು ಬಂದಿರುವ ಒಂದು ಅಪೂರ್ವ ಸಂದರ್ಭ ಕಾಣಬರುತ್ತದೆ. ಪಂಪಭಾರತದ ರಚನೆಗೆ ಮೊದಲು ಸುಮಾರು ಕ್ರಿ. ಶ. ೯೨೭ ರಲ್ಲಿ ಹುಟ್ಟಿದ ವೇಮುಲವಾಡದ ಶಾಸನದಲ್ಲಿ ಅರಿಕೇಸರಿಗೆ ಗುಣಾರ್ಣವ ಮೊದಲಾದ ಬಿರುದುಗಳಿದ್ದರೂ 'ವಿಕ್ರಮಾರ್ಜುನ' ಎಂಬ ಬಿರುದು ಹೇಳಿಲ್ಲ. ಅವನ ಮೊಮ್ಮಗನಾದ ೩ನೆಯ ಅರಿಕೇಸರಿಯ ಪರಭಣಿ ತಾಮ್ರ ಪಟ್ಟದಲ್ಲಿ ತನ್ನ ಹಿರಿಯರಿಂದ ಬಂದ ಬಿರುದುಗಳ ಜೊತೆಯಲ್ಲಿ 'ವಿಕ್ರಮಾರ್ಜುನ' ಎಂಬ ಬಿರುದನ್ನೂ ಸೇರಿಸಿಕೊಂಡಿದ್ದಾನೆ. ಇದರಿಂದ ಪಂಪಭಾರತದಲ್ಲಿ ಅರಿಕೇಸರಿಯನ್ನು ಅರ್ಜುನನೊಡನೆ ಹೋಲಿಸಿ ವಿಕ್ರಮಾರ್ಜುನನೆಂದು ವರ್ಣಿಸಿದ ಬಳಿಕವೇ ಆತನಿಗೆ 'ವಿಕ್ರಮಾರ್ಜುನ' ಎಂಬ ಬಿರುದು ಬಂತೆಂದು ಹೇಳಬೇಕಾಗುತ್ತದೆ. ಹೀಗೆ, ಎಷ್ಟು ಉದಾತ್ತ ಗುಣಗಳುಳ್ಳವನಾದರೂ ಬರಿಯ 'ಸಾಮಂತ ಚೂಡಾಮಣಿ'ಯಾಗಿ ಚರಿತ್ರೆಯಲ್ಲಿ ಅಪ್ರಸಿದ್ಧನಾಗಿರುತ್ತಿದ್ದ ಅರಿಕೇಸರಿ ಪಂಪನ ಮೈತ್ರಿಯಿಂದ ಅವನ ವಿಕ್ರಮಾರ್ಜುನ ವಿಜಯದಲ್ಲಿ ಅಮರನಾಗಿದ್ದಾನೆ.

ಪಂಪನ ಮಾರ್ಗ ಮುಂದಿನ ಕವಿಗಳಿಗೆಲ್ಲ ಆದರ್ಶವಾಯಿತು. ಪ್ರಸಿದ್ಧ ಜೈನ ಕವಿಗಳೆಲ್ಲ ಅವನ ಮೇಲ್ಪಂಕ್ತಿಯನ್ನನುಸರಿಸಿ* ಒಂದು ಆಗಮಕಾವ್ಯ ಒಂದು ಲೌಕಿಕ ಕಾವ್ಯದಂತೆ ಬರೆಯತೊಡಗಿದರು. ಲೌಕಿಕ ಕಾವ್ಯದಲ್ಲಿಯೂ ತಮ್ಮ ಪೋಷಕನನ್ನು ಕಥಾನಾಯಕನೊಡನೆ ಅಭೇದವಾಗಿ ವರ್ಣಿಸಿ ಪಂಪನನ್ನೇ ಅನುಸರಿಸಿದರು. ಪಂಪ ಸ್ಥೂಲವಾಗಿ ಕೊಟ್ಟಿರುವ ಚಿತ್ರವೊಂದನ್ನು 'ಸಾಹಸ ಭೀಮವಿಜಯ'ವಾಗಿ ಹಿಗ್ಗಿಸಿ ಅದ್ವಿತೀಯನೆನಿಸಿದ ರನ್ನ ಪಂಪನಿಗೆ

---

* ಪಂಪನಿಗಿಂತ ಹಿಂದಿನವನಾದ ಗುಣವರ್ಮನೂ ಹೀಗೆಯೆ ಲೌಕಿಕ ಆಗಮ ಕಾವ್ಯಗಳೆರಡನ್ನೂ ಬರೆದಿರುವುದರಿಂದ ಇದು ಪಂಪ ಹಾಕಿದ ಮೇಲ್ಪಂಕ್ತಿಯಲ್ಲವೆಂದು ಅಭಿಪ್ರಾಯಪಡುವವರೂ ಇದ್ದಾರೆ. ಬೇರೆಯವರ ಮೇಲ್ಪಂಕ್ತಿಯೆ ಆಗಿದ್ದರೂ ಪಂಪ ಅನುಸರಿಸಿದ್ದರಿಂದ ಅದು ಸರ್ವರಿಗೂ ಗ್ರಾಹ್ಯವಾಯಿತೆಂದು ಹೇಳಬಹುದು.

ಸಜೀವ ಪ್ರಶಸ್ತಿಯೆನ್ನಬಹುದು. ನಾಗಚಂದ್ರ ತನ್ನನ್ನು 'ಅಭಿನವ ಪಂಪ' ನೆಂದು ಕರೆದುಕೊಂಡು ಪಂಪನನ್ನು ಗೌರವಿಸಿದನು.

'ಕ್ಷಿತಿಗೆ ಸಮಸ್ತಭಾರತಮುಮಾದಿ ಪುರಾಣಮುಮಿಾಗಳೊಂದಳಂ ಕೃತಿಯ ವೊಲಿರ್ದುವು', 'ಸರಸ್ವತಿಗೆ ವಿಳಾಸಮಂ ಪೊಸತು ಮಾಡುವ ಪಂಪನ ವಾಗ್ವಿಳಾಸಂ', 'ನಾಡೊಜನಾದಂ ಕವಿತಾಗುಣಾರ್ಣವಂ', 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ'—ಎಂದು ಮುಂತಾಗಿ ಅವನ ಕೀರ್ತಿ ಎಲ್ಲೆಲ್ಲೂ ಹರಡಿ ಬೆಳಗುತ್ತಿದೆ.

## ೨ ಜೈನಧರ್ಮ

ಆದಿಪುರಾಣ ಜಿನಾಗಮವನ್ನು ಬೆಳಗುವ ಮತಗ್ರಂಥವೆಂದು ಹಿಂದೆಯೆ ಹೇಳಿದೆಯಷ್ಟೆ. ಇದು ಭವ್ಯರು ಮತತತ್ತ್ವಗಳನ್ನು ತಿಳಿದುಕೊಂಡು ಸದ್ಗತಿ ಪಡೆಯಲು ಸಾಧಕವಾಗಲೆಂದು ಸಂಸ್ಕೃತ 'ಮಹಾಪುರಾಣ'ದಿಂದ ಸಂಗ್ರಹಿಸಿ ಕೊಟ್ಟಿರುವ ಕನ್ನಡ ಅನುವಾದ. ತತ್ತ್ವನಿರೂಪಣೆಯೇ ಮುಖ್ಯೋದ್ದೇಶವಾದರೂ ಪಂಪ ಇಲ್ಲಿ ಅನುಸರಿಸಿರುವುದು ಕಾವ್ಯಮಾರ್ಗ. ಕಾವ್ಯಧರ್ಮಕ್ಕೆ ಹೊಂದುವಂತೆ ಅದರೊಡನೆ ಬೆರಸಿ ಧರ್ಮವನ್ನು ವಿವರಿಸಲು ಯತ್ನಿಸಿದ್ದಾನೆ. ಸಂಸ್ಕೃತ ಪೂರ್ವಪುರಾಣದಲ್ಲಿ ಅತಿ ವಿಸ್ತಾರವಾಗಿ ಚರ್ಚಿಸಿರುವ ಎಷ್ಟೋ ಮತ ಪ್ರಕ್ರಿಯೆಗಳನ್ನೂ ಜನ್ಮಾಂತರ ವಿವರಗಳನ್ನೂ ಆದಿಪುರಾಣದಲ್ಲಿ ಅಡಕವಾಗಿ ಹೇಳಿದೆ. ಪಂಪ ಮಾಡಿರುವ ಸಂಗ್ರಹ ಕೂಡ ಜೈನಧರ್ಮದ ಕೈಪಿಡಿಯಾಗಿಯೇ ಉಳಿದಿದೆ. ಈಗ ಕೈಕೊಂಡಿರುವ 'ಪಂಪನ ಆದಿಪುರಾಣ ಸಂಗ್ರಹ'ದಲ್ಲಿ ಕಾವ್ಯದೃಷ್ಟಿಯನ್ನೆ ಮುಖ್ಯವಾಗಿಟ್ಟುಕೊಂಡಿರುವುದರಿಂದ ಜೈನಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಹೆಚ್ಚಾಗಿ ಲಂಬಿಸದೆ ಅಗತ್ಯವಾದಷ್ಟನ್ನು ಮಾತ್ರ ಉಳಿಸಿಕೊಂಡಿದೆ. ಆದರೂ ಕಾವ್ಯವನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಜೈನಧರ್ಮದ ಸ್ವರೂಪ ಸ್ವಲ್ಪಮಟ್ಟಿಗೆ ತಿಳಿದಿರುವುದು ಅತ್ಯಾವಶ್ಯಕ. ಆದ್ದರಿಂದ ಈ ಕೆಳಗೆ ಜೈನಧರ್ಮದ ಸ್ಥೂಲ ಪರಿಚಯವನ್ನು ಕೊಡಲಾಗಿದೆ.

### ಮತಪ್ರವರ್ತಕರು

ಕರ್ಮದ ಕಟ್ಟನ್ನು ಹರಿದು ಸಂಸಾರವನ್ನು ದಾಟಿ ಕೈವಲ್ಯ ಪಡೆದ ಮುಕ್ತ ಜೀವರಿಗೆ 'ಜಿನರು' (ಗೆದ್ದವರು) ಎಂದು ಹೆಸರು. ತತ್ತ್ವ ಸ್ವರೂಪವನ್ನರಿತ ಜಿನರಲ್ಲಿ ಕೆಲವರು ತಾವು ಕಂಡ ತತ್ತ್ವವನ್ನು ಲೋಕಾನುಗ್ರಹ ಬುದ್ಧಿಯಿಂದ

ಸಮಸ್ತ ಜೀವಿಗಳಿಗೂ ಉಪದೇಶಿಸಿ ತೀರ್ಥಂಕರರಾದರು. (ತೀರ್ಥಂಕರರು ಎಂದರೆ ಸಂಸಾರವನ್ನು ದಾಟಲು ಹಾಯ್ಗಡಮಾಡಿದವರು). ಈ ಜಿನರ ಮತವೇ ಜೈನಮತ. ಅವರು ಉಪದೇಶಿಸಿದ ಧರ್ಮವೇ ಜೈನಧರ್ಮ.

ಕಾಲದೋಷದಿಂದ ಧರ್ಮ ಮಸುಳಿಹೋದಾಗಲೆಲ್ಲ ಇಂಥ ತೀರ್ಥಂಕರರು ಅವತಾರಮಾಡಿ ಧರ್ಮಜ್ಯೋತಿಯನ್ನು ಬೆಳಗುವರೆಂದೂ ಸನಾತನವಾದ ಜೈನಧರ್ಮ ಈ ತೀರ್ಥಂಕರರ ಪರಂಪರೆಯಿಂದ ಇದುವರೆಗೂ ನಡೆದು ಬಂದಿದೆ ಯೆಂದೂ ಜೈನರು ನಂಬುತ್ತಾರೆ. ಈಗಿನ ಅವಸರ್ಪಿಣಿಯ ದುಷ್ಷಮ-ಸುಷಮ ಕಾಲದಲ್ಲಿ ಈ ಕೆಳಗೆ ಹೇಳುವ ಇಪ್ಪತ್ತುನಾಲ್ವರು ತೀರ್ಥಂಕರರು ಅವತರಿಸಿದರು:

೧ ವೃಷಭ ೨ ಅಜಿತ ೩ ಶಂಭವ ೪ ಅಭಿನಂದನ ೫ ಸುಮತಿ ೬ ಪದ್ಮಪ್ರಭ ೭ ಸುಪಾರ್ಶ್ವ ೮ ಚಂದ್ರಪ್ರಭ ೯ ಪುಷ್ಪದಂತ ೧೦ ಶೀತಲ ೧೧ ಶ್ರೇಯಾಂಸ ೧೨ ವಾಸುಪೂಜ್ಯ ೧೩ ವಿಮಲ ೧೪ ಅನಂತ ೧೫ ಧರ್ಮ ೧೬ ಶಾಂತಿ ೧೭ ಕುಂಥು ೧೮ ಅರ ೧೯ ಮಲ್ಲಿ ೨೦ ಮುನಿಸುವ್ರತ ೨೧ ನಮಿ ೨೨ ನೇಮಿ ೨೩ ಪಾರ್ಶ್ವ ೨೪ ವರ್ಧಮಾನ.

ಇದರಲ್ಲಿ ಮೊದಲನೆಯ ವೃಷಭತೀರ್ಥಂಕರ ಕೃತಯುಗಕ್ಕಿಂತ ಹಿಂದೆಯೆ ಹುಟ್ಟಿ ಆ ಯುಗವನ್ನು ಆರಂಭಗೊಳಿಸಿದವನು. ಕಡೆಯ ತೀರ್ಥಂಕರನಾದ ವರ್ಧಮಾನ ಮಹಾವೀರ* ಗೌತಮಬುದ್ಧನ ಹಿರಿಯ ಸಮಕಾಲೀನನಾಗಿದ್ದವನು. ಈ ಇಪ್ಪತ್ತುನಾಲ್ವರು ತೀರ್ಥಂಕರರನ್ನೂ ಒಂದು ರೀತಿಯಿಂದ ಜೈನ ಧರ್ಮದ ಪ್ರವರ್ತಕರೆಂದು ಕರೆಯಬಹುದು.

## ಇದುವರೆಗಿನ ಚರಿತ್ರೆ

ತೀರ್ಥಂಕರರು ಸಮವಸರಣವೆಂಬ ತಮ್ಮ ಧರ್ಮೋಪದೇಶಸಭೆಯಲ್ಲಿ ನೆರೆದಿದ್ದ ದೇವ ಮನುಷ್ಯ ಪಶುಪಕ್ಷಿ ಮೊದಲಾದ ಸಮಸ್ತ ಜೀವರಾಶಿಗೂ ತಿಳಿಯುವಂತಿದ್ದ ಸರ್ವಭಾಷಾತ್ಮಕವಾದ ದಿವ್ಯಧ್ವನಿಯಲ್ಲಿ ಧರ್ಮತತ್ತ್ವಗಳನ್ನೂ

* ಮಹಾವೀರನ ನಿರ್ವಾಣ ಕ್ರಿ. ಪೂ. ೫೨೭ರಲ್ಲಿ ನಡೆಯಿತೆಂದು ನಂಬಿಕೆ. ಈ ವಿಷಯದಲ್ಲೂ ಶ್ವೇತಾಂಬರ ದಿಗಂಬರ ಸಂಪ್ರದಾಯಗಳಲ್ಲಿ, ಮತಭೇದವಿದೆ. ವಿಮರ್ಶಕರೂ ನಿಸ್ಸಂಶಯವಾಗಿ ನಿರ್ಧರಿಸಿಲ್ಲ. ಈ ಕಾಲಗಣನೆ ಇನ್ನೂ ಚರ್ಚಾಸ್ಪದವಾಗಿಯೇ ಇದೆ. [ ಎಂ. ವಿಂಟರ್ನಿಟ್ಸ್ ಅವರ History of Indian Literature (ಭಾರತೀಯ ಸಾಹಿತ್ಯ ಚರಿತ್ರೆ) ಎಂಬ ಗ್ರಂಥದ ಎರಡನೆಯ ಸಂಪುಟದ ೬೧೪-೬೧೫ನೆಯ ಪುಟಗಳನ್ನು ನೋಡಿ.]

ಆಗಮ ಪುರಾಣಾದಿಗಳನ್ನೂ ಉಪದೇಶಿಸಿದರು. ಅವರ ಶಿಷ್ಯಮಂಡಲಿಯ ಮುಂದಾಳುಗಳಾದ ಗಣಧರರು ತೀರ್ಥಂಕರರ ಉಪದೇಶಗಳನ್ನು ವಿವರಿಸಿದರು. ಸಮವಸರಣದಲ್ಲಿಲ್ಲದಿದ್ದ ಮತ್ತು ತೀರ್ಥಂಕರರ ನಿರ್ವಾಣವಾದ ಬಳಿಕ ಧರ್ಮೋಪದೇಶವನ್ನು ಬಯಸಿದ ಸಾಧುಗಳೂ ಶ್ರಾವಕರೂ ಗಣಧರರಿಂದಲೂ ಅವರ ಶಿಷ್ಯರಿಂದಲೂ ಧರ್ಮವನ್ನು ತಿಳಿಯುತ್ತಿದ್ದರು. ಈ ಕ್ರಮವೇ ಆದಿ ತೀರ್ಥಂಕರನ ಕಾಲದಿಂದ ಮಹಾವೀರಸ್ವಾಮಿಯ ಕಾಲದವರೆಗೂ ನಡೆದು ಬಂತು.

ಜೈನಶಾಸ್ತ್ರಗಳನ್ನೂ ವೇದಗಳಂತೆಯೆ ಕಿವಿಯಿಂದ ಕೇಳಿ ಕಲಿತು ನೆನಪಿನಿಂದಲೆ ಮುಂದಿನ ಪೀಳಿಗೆಗೆ ತಿಳಿಸಿಕೊಡುತ್ತಿದ್ದರು. ಅವನ್ನು ಬರೆದಿಟ್ಟರಲಿಲ್ಲ. ಮಹಾವೀರಸ್ವಾಮಿಯ ನಿರ್ವಾಣವಾದ ಬಳಿಕ ಅರುವತ್ತೆರಡು ವರ್ಷಗಳವರೆಗೆ ಕ್ರಮವಾಗಿ ಗೌತಮಗಣಧರ, ಸುಧರ್ಮಾಚಾರ್ಯ, ಜಂಬೂಸ್ವಾಮಿ —ಈ ಮೂವರು ಕೇವಲಿಗಳು ಸಕಲಶಾಸ್ತ್ರಪುರಾಣಗಳನ್ನೂ ಸ್ವಲ್ಪವೂ ಕುಂದದಂತೆ ಪ್ರಕಟಿಸಿದರು. ಅವರ ಅನಂತರ ನೂರು ವರ್ಷಗಳವರೆಗೆ ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹು ಎಂಬ ಐವರು ಶ್ರುತಕೇವಲಿಗಳು ಜೈನಾಗಮಗಳಾದ ೧೧ ಅಂಗಗಳನ್ನೂ ೧೪ ಪೂರ್ವಗಳನ್ನೂ ಬಲ್ಲವರಾಗಿ ಪುರಾಣಗಳನ್ನು ಪೂರ್ಣವಾಗಿ ಪ್ರಚಾರಮಾಡಿದರು. ಆ ಬಳಿಕ ೧೮೩ ವರ್ಷಗಳ ವರೆಗೆ ೧೧ ಜನ ಆಚಾರ್ಯರು ೧೧ ಅಂಗಗಳ ಜೊತೆಗೆ ೧೦ ಪೂರ್ವಗಳನ್ನು ಮಾತ್ರ ಬಲ್ಲವರಾಗಿದ್ದರು; ಪುರಾಣಗಳನ್ನು ಪೂರ್ತಿಯಾಗಿ ತಿಳಿದಿದ್ದರು. ಮುಂದೆ ೨೨೦ ವರ್ಷ ಕಾಲದಲ್ಲಿ ಬಾಳಿದ ಆಚಾರ್ಯರು ೧೧ ಅಂಗಗಳನ್ನು ಮಾತ್ರ ಅರಿತಿದ್ದರು; ಪುರಾಣದಲ್ಲಿ ಮುಕ್ಕಾಲುಪಾಲನ್ನು ಮಾತ್ರ ತಿಳಿದಿದ್ದರು; ಪೂರ್ವಶಾಸ್ತ್ರಗಳು ಖಿಲವಾಗಿ ಹೋದವು. ಇನ್ನೂ ಮುಂದೆ ಕಾಲ ಕಳೆದಂತೆಲ್ಲ ಜನರ ಜ್ಞಾಪಕಶಕ್ತಿ ಕಡಮೆಯಾಗುತ್ತ ಆಗುತ್ತ ಅಂಗಗಳ ಮತ್ತು ಪುರಾಣಗಳ ಅರಿವೂ ಮಸುಳಿಸುತ್ತ ಬಂದು ಕ್ರಿ. ಶ. ೫೭ರ ಹೊತ್ತಿಗೆ ಅಂಗಧಾರಿಗಳು (ಅಂಗಶಾಸ್ತ್ರಗಳನ್ನು ಬಲ್ಲವರು) ಯಾರೂ ಉಳಿಯದಂತಾಯಿತು. ಆಗ ಆಗಮಶಾಸ್ತ್ರಗಳನ್ನು ಬರೆದಿಡಬೇಕಾದ ಆವಶ್ಯಕತೆ ಕಂಡುಬಂತು. ವರ್ಧಮಾನಸ್ವಾಮಿಯೂ ಕೇವಲಿಗಳೂ ವಿವರಿಸಿದ ಸಿದ್ಧಾಂತಗಳಲ್ಲಿ ನೆನಪಿದ್ದಷ್ಟನ್ನು ಸಂಗ್ರಹಿಸಿ ನಾಲ್ಕು ಅನುಯೋಗಗಳನ್ನೊಳಗೊಂಡ ಶ್ರುತಸ್ಕಂಧದ ಗ್ರಂಥಗಳು ರಚಿತವಾದವು.

ಸಿದ್ಧಾಂತಗ್ರಂಥಗಳನ್ನು ಬರೆದಿಡುವ ಪ್ರಯತ್ನ ಕ್ರಿ. ಪೂ. ನಾಲ್ಕನೆಯ ಶತಮಾನದ ಕೊನೆಯಲ್ಲಿ ಮೊದಲಾಯಿತೆಂದೂ ಸುಮಾರು ಕ್ರಿ. ಶ. ೪೫೪ರಲ್ಲಿ ವಲಭಿಯಲ್ಲಿ ದೇವರ್ಧಿಗಣಿಯ ಅಧ್ಯಕ್ಷತೆಯಲ್ಲಿ ನಡೆದ ಶ್ರಮಣಸಭೆಯಲ್ಲಿ ಆ ಗ್ರಂಥಗಳು ನಿಷ್ಕೃಷ್ಟವಾಗಿ ರೂಪುಗೊಂಡವೆಂದೂ ಶ್ವೇತಾಂಬರ ಸಂಪ್ರದಾಯದವರು ಹೇಳುತ್ತಾರೆ.

### ದಿಗಂಬರ ಶ್ವೇತಾಂಬರ ಪಂಗಡಗಳು

ಜೈನಸಂಘ ಒಡೆದು ಇಬ್ಬಣವಾದ ವಿಷಯದಲ್ಲಿ ಹೀಗೆ ತಿಳಿಯ ಬರುತ್ತದೆ: ಕೊನೆಯ ಶ್ರುತಕೇವಲಿಯಾದ ಭದ್ರಬಾಹುವಿನ ಕಾಲದಲ್ಲಿ ಮಧ್ಯದೇಶದಲ್ಲಿ ೧೨ ವರ್ಷ ಕಾಲ ಘೋರವಾದ ಕ್ಷಾಮ ಬಂತು. ಆ ಕ್ಷಾಮ ಬರುವ ಸೂಚನೆಯನ್ನರಿತ ಭದ್ರಬಾಹು ಮುನಿಸಂಘದಲ್ಲಿ ಒಂದು ಭಾಗವನ್ನೊಡಗೊಂಡು ದಕ್ಷಿಣದೇಶಕ್ಕೆ ಪ್ರಯಾಣಮಾಡಿದನು. ಆತನು ಈಗಿನ ಶ್ರವಣಬೆಳುಗೊಳದ ಹತ್ತಿರ ಬರುವಷ್ಟರಲ್ಲಿ ತನಗೆ ಅವಸಾನಕಾಲ ಸಮೀಪಿಸಿತೆಂದು ತಿಳಿದು ಮುನಿಸಂಘವನ್ನು ಇನ್ನೂ ದಕ್ಷಿಣದ ಚೋಳದೇಶಕ್ಕೆ ಕಳಿಸಿ ತಾನು 'ಕಟ್ವಪ್ಪು' ಎಂಬ (ಈಗಿನ ಚಿಕ್ಕ) ಬೆಟ್ಟದಲ್ಲಿ ತಂಗಿದನು.' ಚಂದ್ರಗುಪ್ತನೆಂಬ* ಮುನಿ ಗುರುಶುಶ್ರೂಷೆಮಾಡುತ್ತ ಅಲ್ಲೆ ಉಳಿದನು. ಮುನಿಸಂಘ ತಮಿಳುನಾಡಿನಿಂದ ಹಿಂದಿರುಗುವಷ್ಟರಲ್ಲಿ ಭದ್ರಬಾಹು ಸಮಾಧಿ ಪಡೆದಿದ್ದನು. ಬರಗಾಲ ಕಳೆದ ಮೇಲೆ ಆ ಮುನಿಸಂಘ ಉತ್ತರದೇಶಕ್ಕೆ ಮರಳಿತು. ಚಂದ್ರಗುಪ್ತಮುನಿ ಮಾತ್ರ ಕಟ್ವಪ್ಪಿನಲ್ಲೆ ಉಳಿದು ಭದ್ರಬಾಹು ಸಮಾಧಿಪಡೆದ ಬಳಿ ತಪೋನಿರತನಾಗಿದ್ದನು.

ಕ್ಷಾಮಭಯದಿಂದ ಜೈನಸಂಘ ದಕ್ಷಿಣದೇಶಕ್ಕೆ ಹೋಗಿ ಬಂದ ಆ ಕಾಲಾವಧಿಯಲ್ಲಿ ಉತ್ತರದಲ್ಲೆ ಉಳಿದಿದ್ದ ಶ್ರಮಣರಿಗೂ ದಕ್ಷಿಣದಿಂದ ಮರಳಿ ಬಂದವರಿಗೂ ಆಚಾರಗಳಲ್ಲಿ ಹಲವು ವ್ಯತ್ಯಾಸಗಳು ತಲೆದೋರಿದ್ದವು. ಉತ್ತರದಲ್ಲಿ

---

* ಈ ಚಂದ್ರಗುಪ್ತನು ಪ್ರಸಿದ್ಧನಾದ ಮೌರ್ಯವಂಶಸ್ಥಾಪಕ ಚಂದ್ರಗುಪ್ತ ಚಕ್ರವರ್ತಿಯೆಂದು ಸಾಧಾರಣ ನಂಬಿಕೆ. ಇದು ಸರಿಯಲ್ಲವೆಂದೂ ಈತನು ಮೌರ್ಯ ಚಕ್ರವರ್ತಿ ಚಂದ್ರಗುಪ್ತನ ಮೊಮ್ಮಗನಾದ ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತನೆಂದೂ ಶ್ರೀ ಎಂ. ಗೋವಿಂದ ಪೈ ಅವರು ನಿರ್ಧರಿಸಿದ್ದಾರೆ. "ಕರ್ಣಾಟಕಕ್ಕೆ ಜೈನಧರ್ಮದ ಆಗಮನ" — ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ: ಸಂಪುಟ ೨೬, ಸಂಚಿಕೆ ೧ — ೨.

ಉಳಿದವರು ದಿಗಂಬರತ್ವವನ್ನು ಬಿಟ್ಟು ಅರೆಬಟ್ಟೆ ಹೊದೆಯಲು ಪ್ರಾರಂಭಿಸಿದ್ದು ಈ ಭಿನ್ನಾಚಾರಗಳಲ್ಲೆಲ್ಲ ಮುಖ್ಯವಾದದ್ದು. ಇದರಿಂದ ಜೈನಸಂಘದಲ್ಲಿ ಒಡಕು ಹುಟ್ಟಿತು. ಈ ಒಡಕು ಕ್ರಮಕ್ರಮವಾಗಿ ಹೆಚ್ಚುತ್ತ ಬಂದು ಕ್ರಿ. ಶ. ೭೯-ರ ಹೊತ್ತಿಗೆ ದೊಡ್ಡದಾಯಿತು. ಒಂದು ಪಂಗಡದವರು ಪೂರ್ತಿಯಾಗಿ ಬಟ್ಟೆ ಉಡಲು ಮೊದಲುಮಾಡಿದರು. ಇನ್ನೊಂದು ಪಂಗಡದವರು ಬತ್ತಲೆಗರಾಗಿಯೇ ಉಳಿದರು. ಹೀಗೆ ಬಟ್ಟೆ ಉಡತೊಡಗಿದವರೇ ಶ್ವೇತಾಂಬರರು; ಮೊದಲಿನಂತೆಯೆ ಬತ್ತಲೆಗರಾಗಿದ್ದವರು ದಿಗಂಬರರು.

ದಿಗಂಬರರಿಗೂ ಶ್ವೇತಾಂಬರರಿಗೂ ಆಚಾರವಿಚಾರಗಳಲ್ಲಲ್ಲದೆ ಸಿದ್ಧಾಂತ ವಿಷಯಗಳಲ್ಲೂ ಕೆಲವು ಭೇದಗಳುಂಟು. ಈ ರೀತಿ ಭೇದವಿರುವುದು ಕೆಲವು ಗೌಣವಿಷಯಗಳಲ್ಲಿ ಮಾತ್ರ. ಉದಾಹರಣೆಗೆ, ದಿಗಂಬರರ ಪ್ರಕಾರ ಕೇವಲಿಯಾದ ಸಾಧು ಆಹಾರವಿಲ್ಲದೆಯೆ ಬದುಕಿರುತ್ತಾನೆ; ಸಂನ್ಯಾಸಿ ಏನನ್ನೂ, ಬಟ್ಟೆಯನ್ನೂ ಕೂಡ, ಸ್ವಂತದ್ದಾಗಿ ಇಟ್ಟುಕೊಳ್ಳಕೂಡದು; ಮೋಕ್ಷ ಪಡೆಯುವುದು ಹೆಂಗಸಿಗೆ ಸಾಧ್ಯವಿಲ್ಲ. ಹೆಂಗಸಿಗೆ ಮೋಕ್ಷ ಅಸಾಧ್ಯವೆಂದು ನಂಬಿರುವುದರಿಂದಲೆ ದಿಗಂಬರರು ಹೆಂಗಸರಿಗೆ ಸಂನ್ಯಾಸದೀಕ್ಷೆ ಕೊಡುವುದಿಲ್ಲ. ಶ್ವೇತಾಂಬರ ಗ್ರಂಥಗಳನ್ನು ದಿಗಂಬರರು ಪ್ರಮಾಣವೆಂದು ಅಂಗೀಕರಿಸುವುದಿಲ್ಲ.

## ಶ್ರುತಸ್ಕಂಧ

ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯಕ್ಕೆ ಶ್ರುತಸ್ಕಂಧವೆಂದು ಹೆಸರು. ಈ ಶ್ರುತಸ್ಕಂಧದಲ್ಲಿ ನಾಲ್ಕು ವಿಭಾಗಗಳಿವೆ. ಮೊದಲನೆಯದಾದ **ಪ್ರಥಮಾನುಯೋಗ**ದಲ್ಲಿ ೨೪ ತೀರ್ಥಂಕರರು, ೧೨ ಚಕ್ರವರ್ತಿಗಳು, ೯ ಬಲದೇವರು, ೯ ವಾಸುದೇವರು, ೯ ಪ್ರತಿವಾಸುದೇವರು—ಈ ಅರವತ್ತು ಮೂವರು **ಶಲಾಕಾ ಪುರುಷರ** (ಮಹಾಪುರುಷರ) ಚರಿತ್ರೆಗಳನ್ನು ವಿವರಿಸಿದೆ. ಮಹಾಪುರಾಣ ಮೊದಲಾದ ಪುರಾಣಗ್ರಂಥಗಳು ಪ್ರಥಮಾನುಯೋಗಕ್ಕೆ ಸೇರಿದವು. ಎರಡನೆಯದು **ಕರಣಾನುಯೋಗ**. ಇದರಲ್ಲಿ ಮೂರು ಲೋಕಗಳ ಕ್ಷೇತ್ರಪರಿಮಾಣ ಮೊದಲಾದ ವಿವರಗಳು ದೊರೆಯುತ್ತವೆ. ಸೂರ್ಯಪ್ರಜ್ಞಪ್ತಿ, ಚಂದ್ರಪ್ರಜ್ಞಪ್ತಿ, ಜಯಧವಳ, ಮೊದಲಾದ ಗ್ರಂಥಗಳು ಕರಣಾನುಯೋಗಕ್ಕೆ ಸೇರಿದವು. ಮೂರನೆಯದು **ಚರಣಾನುಯೋಗ**. ಈ ಅನುಯೋಗದಲ್ಲಿ ಜೈನಮುನಿಗಳೂ ಶ್ರಾವಕರೂ ಅನುಸರಿಸಬೇಕಾದ

ಆಚಾರಶುದ್ಧಿ ವರ್ಣಿತವಾಗಿದೆ. ನಾಲ್ಕನೆಯದು **ದ್ರವ್ಯಾನುಯೋಗ.** ಇದರಲ್ಲಿ ಜೀವಾದಿ ದ್ರವ್ಯಗಳನ್ನು ವಿವರಿಸಿದೆ. ತತ್ತ್ವಾರ್ಥಸೂತ್ರ, ಗೊಮ್ಮಟ ಸಾರ, ಮೊದಲಾದವು ದ್ರವ್ಯಾನುಯೋಗಕ್ಕೆ ಸೇರಿದ ಗ್ರಂಥಗಳು. ಪ್ರಥಮಾನುಯೋಗಕ್ಕೆ ಸೇರಿದ ಪುರಾಣಗ್ರಂಥಗಳಲ್ಲಿ ಉಳಿದ ಮೂರು ಅನುಯೋಗಗಳ ಮುಖ್ಯವಿಷಯಗಳನ್ನೂ ಅಲ್ಲಲ್ಲೆ ಪ್ರತಿಪಾದಿಸಿರುವುದು ಕಂಡುಬರುತ್ತದೆ.

ಈ ನಾಲ್ಕು ಅನುಯೋಗಗಳಲ್ಲಿ ವಿವರಿಸಿರುವ ವಿಷಯಗಳನ್ನೆ ತೀರ್ಥಂಕರರು ಮೊದಲು **ದ್ವಾದಶಾಂಗ ಚತುರ್ದಶಪೂರ್ವ**ಗಳಲ್ಲಿ ಉಪದೇಶಿಸಿದ್ದರು. ಅವುಗಳಲ್ಲಿ ಪೂರ್ವಗ್ರಂಥಗಳು ಬಹಳ ಹಿಂದೆಯೆ ಖಿಲವಾಗಿ ಹೋದವು. ೧೨ ಅಂಗಗಳಲ್ಲಿ ೧೧ ಮಾತ್ರ ಕೆಲವು ಕಾಲ ಪ್ರಚಾರದಲ್ಲಿದ್ದವು. ಕಾಲಕ್ರಮ ದಲ್ಲಿ ಅವೂ ಖಿಲವಾಗುತ್ತ ಬಂದು ಪೂರ್ತಿ ನಷ್ಟವಾದವೆಂದು ದಿಗಂಬರರು ಹೇಳುತ್ತಾರೆ. ಶ್ವೇತಾಂಬರ ಸಂಪ್ರದಾಯದವರಾದರೊ ಆ ೧೧ ಅಂಗಗಳೂ ಉಳಿದು ಬಂದಿವೆಯೆಂದೂ ೧೪ ಪೂರ್ವಶಾಸ್ತ್ರಗಳನ್ನೂ ಇತರ ಕೆಲವು ಗ್ರಂಥ ಗಳೊಡನೆ ಕಳೆದುಳಿದ ೧೨ನೆಯ ಅಂಗದಲ್ಲಿ ಸೇರಿಸಲಾಯಿತೆಂದೂ ಅಭಿಪ್ರಾಯ ಪಡುತ್ತಾರೆ.

ಅಂಗಗಳು : ೧ ಆಚಾರಾಂಗ ಯತ್ಯಾಚಾರಗಳನ್ನು ವಿವರಿಸುವುದು. ೨ ಸೂತ್ರ ಕೃತಾಂಗ ಜ್ಞಾನ, ವಿನಯ, ಮೊದಲಾದುವನ್ನೂ ಧಾರ್ಮಿಕ ಕ್ರಿಯೆಗಳನ್ನೂ ಬೋಧಿ ಸುವುದು. ೩ ಸ್ಥಾನಾಂಗ ಜೀವ, ಪುದ್ಗಲ, ಮೊದಲಾದ ದ್ರವ್ಯಗಳ ಹಲವು ನೆಲೆ ಗಳನ್ನು ವಿವರಿಸುವುದು. ೪ ಸಮವಾಯಾಂಗ ದ್ರವ್ಯ ಕಾಲ ಕ್ಷೇತ್ರಭಾವಗಳ ದೃಷ್ಟಿ ಭೇದಗಳಿಂದ ತೋರುವ ಸಾಮ್ಯಗಳನ್ನು ವಿವರಿಸುತ್ತದೆ. ೫ ವ್ಯಾಖ್ಯಾಪ್ರಜ್ಞಪ್ತಿ ಗಣ ಧರರು ಕೇಳಿದ ಹಲವು ಪ್ರಶ್ನೆಗಳನ್ನೂ ಅವಕ್ಕೆ ತೀರ್ಥಂಕರರ ಉತ್ತರಗಳನ್ನೂ ವಿವರಿಸುತ್ತದೆ. ೬ ಜ್ಞಾತೃಧರ್ಮಕಥಾಂಗದಲ್ಲಿ ಧರ್ಮಸಂಬಂಧವಾದ ಹಲವು ಕಥೆ ಗಳೂ ಗಣಧರ ತೀರ್ಥಂಕರರ ಪಶ್ನೋತ್ತರಗಳೂ ಇವೆ. ೭ ಉಪಾಸಕಾಧ್ಯಾಯಾಂಗ ಶ್ರಾವಕಾಚಾರಗಳನ್ನು ಬೋಧಿಸುತ್ತದೆ. ೮ ಅಂತಕೃದ್ದಶಾಂಗದಲ್ಲಿ ಪ್ರತಿ ತೀರ್ಥಂಕರನ ಕಾಲದಲ್ಲೂ ದುಸ್ಸಾಧ್ಯವಾದ ಉಪಸರ್ಗಗಳನ್ನು ಸಹಿಸಿ ಕರ್ಮಬಂಧದಿಂದ ಬಿಡುಗಡೆ ಹೊಂದಿದ ಹತ್ತು ಹತ್ತು ಮುನಿಗಳ ಚರಿತ್ರೆ ವರ್ಣಿತವಾಗಿದೆ. ೯ ಅನುತ್ತರೌಪಪಾದಿಕ ದಶಾಂಗದಲ್ಲಿ ಪ್ರತಿ ತೀರ್ಥಂಕರನ ಕಾಲದಲ್ಲೂ ತೀವ್ರ ತಪಶ್ಚರ್ಯೆಯಿಂದ ಐದು ಅನುತ್ತರ ವಿಮಾನಗಳಲ್ಲಿ ಹುಟ್ಟಿದ ಹತ್ತು ಹತ್ತು ಮುನಿಗಳ ಚರಿತ್ರೆ ವರ್ಣಿತವಾಗಿದೆ. ೧೦ ಪ್ರಶ್ನವ್ಯಾಕರಣಾಂಗ ಪ್ರಾಣಿಗಳ ಸುಖದುಃಖ ಸಂಬಂಧವಾದ ಪ್ರಶ್ನೆಗಳಿಗೆ ಉತ್ತರಕೊಡುವ ರೀತಿಯನ್ನು ವಿವರಿಸುತ್ತದೆ. ೧೧ ವಿಪಾಕಸೂತ್ರಾಂಗ ಪುಣ್ಯ ಪಾಪ

ರೂಪವಾದ ಕರ್ಮಗಳ ಪರಿಪಾಕಸ್ವರೂಪವನ್ನು ವಿವರಿಸುತ್ತದೆ. ೧೨ ದೃಷ್ಟಿವಾದಾಂಗ ದರ್ಶನ ಭೇದಗಳನ್ನು ಚೆನ್ನಾಗಿ ವಿವರಿಸಿ ಸಮ್ಯಗ್ದರ್ಶನವನ್ನು ಬೆಳಗುತ್ತದೆ.

ಹನ್ನೆರಡನೆಯ ಈ ದೃಷ್ಟಿವಾದಾಂಗದಲ್ಲಿ ಐದು ಭಾಗಗಳಿವೆ: ೧ ಚಂದ್ರಪ್ರಜ್ಞಪ್ತಿ, ಸೂರ್ಯಪ್ರಜ್ಞಪ್ತಿ, ಜಂಬೂದ್ವೀಪಪ್ರಜ್ಞಪ್ತಿ, ದ್ವೀಪಪ್ರಜ್ಞಪ್ತಿ ಮತ್ತು ವ್ಯಾಖ್ಯಾಪ್ರಜ್ಞಪ್ತಿ ಎಂಬ ಐದು ಪರಿಕ್ರಮಗಳು ; ೨ ಹಲವು ಮಿಥ್ಯಾದರ್ಶನಗಳನ್ನು ವಿವರಿಸಿ ಅವನ್ನು ಖಂಡಿಸುವ ಸೂತ್ರ ; ೩ ತ್ರಿಷಷ್ಟಿ ಶಲಾಕಾ ಪುರುಷರ ಚರಿತ್ರರೂಪವಾದ ಪ್ರಥಮಾನು ಯೋಗ ; ೪ ಚತುರ್ದಶ ಪೂರ್ವಗಳು ; ೫ ಜಲಗತ ಚೂಲಿಕಾ, ಸ್ಥಲಗತ ಚೂಲಿಕಾ, ಮಾಯಾಗತ ಚೂಲಿಕಾ, ರೂಪಗತ ಚೂಲಿಕಾ, ಆಕಾಶಗತ ಚೂಲಿಕಾ ಎಂಬ ಐದು ಚೂಲಿಕೆಗಳು.

ಚತುರ್ದಶ ಪೂರ್ವಗಳು ಯಾವುವೆಂದರೆ: ೧ ಉತ್ಪಾದ ಪೂರ್ವ, ೨ ಅಗ್ರಾಯಣೀ ಪೂರ್ವ, ೩ ವಿರ್ಯಾನುವಾದ ಪೂರ್ವ, ೪ ಅಸ್ತಿ ನಾಸ್ತಿ ಪ್ರವಾದ ಪೂರ್ವ, ೫ ಜ್ಞಾನ ಪ್ರವಾದ ಪೂರ್ವ, ೬ ಸತ್ಯಪ್ರವಾದ ಪೂರ್ವ, ೭ ಆತ್ಮಪ್ರವಾದ ಪೂರ್ವ, ೮ ಕರ್ಮ ಪ್ರವಾದ ಪೂರ್ವ, ೯ ಪ್ರತ್ಯಾಖ್ಯಾನ ಪೂರ್ವ, ೧೦ ವಿದ್ಯಾನುವಾದ ಪೂರ್ವ, ೧೧ ಕಲ್ಯಾಣವಾದ ಪೂರ್ವ, ೧೨ ಪ್ರಾಣವಾದ ಪೂರ್ವ, ೧೩ ಕ್ರಿಯಾವಿಶಾಲ ಪೂರ್ವ, ೧೪ ತ್ರಿಲೋಕಬಿಂದುಸಾರ ಪೂರ್ವ. ಈ ಪೂರ್ವಶಾಸ್ತ್ರಗಳನ್ನೆ ಚತುರ್ದಶ ಮಹಾ ವಿದ್ಯೆಗಳೆಂದೂ ಕರೆಯುತ್ತಾರೆ.

ಮೇಲೆ ಹೇಳಿದವುಗಳಲ್ಲದೆ ಅಂಗಬಾಹ್ಯಗಳೆಂಬ ಬೇರೆಯ ೧೪ ಗ್ರಂಥಗಳೂ ಅಂಗೀಕೃತವಾಗಿವೆ.

ಈ ಗ್ರಂಥಸಮುದಾಯವನ್ನೆಲ್ಲ ಈಗ ಇರುವುವನ್ನು ದೃಷ್ಟಿಯಲ್ಲಿಟ್ಟುಕೊಂಡು ೧ ಹನ್ನೊಂದು ಅಂಗಗಳು, ೨ ಹನ್ನೆರಡು ಉಪಾಂಗಗಳು, ೩ ಹತ್ತು ಪ್ರಕೀರ್ಣ ಕಗಳು, ೪ ಆರು ಛೇದಸೂತ್ರಗಳು, ೫ ಎರಡು ಸೂತ್ರಗಳು, ಮತ್ತು ೬ ನಾಲ್ಕು ಮೂಲಸೂತ್ರಗಳು—ಎಂದು ವಿಂಗಡಿಸಿ ವಿವರಿಸುವುದು ಹೆಚ್ಚು ವಾಡಿಕೆಯಾಗಿದೆ.

## ಜೈನಧರ್ಮಸಾರ

ಈ ಸಮಸ್ತ ಶಾಸ್ತ್ರಗಳೂ ವಿವರವಾಗಿ ಬೋಧಿಸುವ ಜೈನಧರ್ಮದ ಸಾರ ವನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು :

"ಜೀವ ಚೈತನ್ಯಸ್ವರೂಪವಾದದ್ದು; ಶಾಶ್ವತವಾದದ್ದು. ಅನಂತಜ್ಞಾನ, ಅನಂತ ದರ್ಶನ, ಅನಂತ ವೀರ್ಯ, ಅನಂತ ಸುಖಗಳಿಂದ ಕೂಡಿರುವುದು ಜೀವದ ಸ್ವಭಾವ. ಈ ಜೀವ ಅಜೀವದೊಡನೆ ಹೇಗೋ ಸೇರಿಕೊಂಡು ಕರ್ಮದ ಕಟ್ಟಿನಲ್ಲಿ ಸಿಕ್ಕಿಬಿದ್ದಾಗ ಈ ಅನಂತಜ್ಞಾನಾದಿಗಳ ಮೇಲೆ ಒಂದು

ಆವರಣ ಕವಿದುಕೊಳ್ಳುತ್ತದೆ. ಆಗ ಜೀವ ತನ್ನ ನಿಜಸ್ವರೂಪವನ್ನು ಮರೆತು ಚತುರ್ಗತಿರೂಪವಾದ ಸಂಸಾರದಲ್ಲಿ ತೊಳಲುತ್ತಿರುತ್ತದೆ. ಶುಭಾಶುಭ ಕರ್ಮಗಳನ್ನು ಮಾಡಿ ಮನುಷ್ಯನಾಗಿ, ದೇವತೆಯಾಗಿ, ತಿರ್ಯಕ್‌ಪ್ರಾಣಿಯಾಗಿ, ನಾರಕಿಯಾಗಿ ಮತ್ತೆ ಮತ್ತೆ ಹುಟ್ಟುತ್ತಲೇ ಇರುತ್ತದೆ. ಹೀಗೆ ಹುಟ್ಟುಸಾವುಗಳ ಚಕ್ರದಲ್ಲಿ ಸುತ್ತುತ್ತ ಮಿಥ್ಯಾಜ್ಞಾನಮೋಹಾದಿಗಳಿಂದ ಕರ್ಮದ ಕಟ್ಟನ್ನು ಗಟ್ಟಿಗೊಳಿಸುತ್ತ ಸಂಸಾರದಲ್ಲೆ ಸಿಕ್ಕಿ ತೊಳಲುತ್ತಿರುವಾಗ ಹಲವು ಪುಣ್ಯಕರ್ಮಗಳ ಫಲದಿಂದ ಕ್ರಮಕ್ರಮವಾಗಿ ಸಂಸಾರದ ತೊಡರುಗಳನ್ನು ಬಿಡಿಸಿಕೊಳ್ಳಬೇಕೆಂಬ ಬಯಕೆಯುಂಟಾಗುತ್ತದೆ. ಆ ಭವ್ಯಜೀವಿಗೆ ಕಾಲಲಬ್ಧಿ ದೊರೆತಾಗ, ಎಂದರೆ ಪಕ್ವಕಾಲ ಬಂದಾಗ, ಸಮ್ಯಕ್ ದರ್ಶನ ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರರೂಪವಾದ ರತ್ನತ್ರಯದಲ್ಲಿ ಮನಸ್ಸು ಹೋಗಲು ಅವಕಾಶವಾಗುತ್ತದೆ. ರತ್ನತ್ರಯವನ್ನಾಶ್ರಯಿಸಿದ ಜೀವಕ್ಕೆ ತತ್ತ್ವಸ್ವರೂಪ ಚೆನ್ನಾಗಿ ಗೊತ್ತಾಗುತ್ತದೆ. ಆ ಬಳಿಕ ಜೀವ ತನ್ನೆಡೆಗೆ ಹರಿದು ಬಂದು ಸಂಸಾರಕ್ಕೆ ಬಂಧಿಸುವ ಕರ್ಮಗಳನ್ನು ಬರಗೊಡದೆ ತಡೆದು ಆ ಮೊದಲೆ ಬಂದು ಮೈಗೂಡಿರುವ ಕರ್ಮಗಳನ್ನು ತಪಸ್ಸಿನಿಂದ ನಿಶ್ಶೇಷವಾಗಿ ನಾಶಮಾಡಿ ಸಂಸಾರದ ಬಲೆಯಿಂದ ಬಿಡಿಸಿಕೊಂಡು ಬೇರೆಯಾಗುತ್ತದೆ. ಹೀಗೆ ಕರ್ಮಬಂಧನದಿಂದ ಬಿಡುಗಡೆ ಹೊಂದಿದ ಮುಕ್ತಾತ್ಮ ತನ್ನ ಸಹಜ ಸ್ವರೂಪವನ್ನು ಪಡೆದು ಅನಂತಜ್ಞಾನಾದಿಗಳಿಂದ ಬೆಳಗುತ್ತ ಶಾಶ್ವತವಾದ ಮೋಕ್ಷಸುಖದಲ್ಲಿ ಲೋಕಾಗ್ರದಲ್ಲಿ ನೆಲೆಗೊಳ್ಳುತ್ತದೆ."

## ವಿವರಣೆಗಳು

ಮೇಲೆ ಸಂಗ್ರಹವಾಗಿ ಹೇಳಿರುವ ಜೈನಧರ್ಮವೂ ಅದನ್ನು ದೃಷ್ಟಾಂತಗಳೊಡನೆ ನಿರೂಪಿಸುವ ಈ ಪುರಾಣದ ಹಲವು ಸಂದರ್ಭಗಳೂ ಸ್ಪಷ್ಟವಾಗಬೇಕಾದರೆ ಕೆಲವು ವಿವರಗಳನ್ನು ತಿಳಿದುಕೊಳ್ಳುವುದು ಅತ್ಯಾವಶ್ಯಕ. ಆದ್ದರಿಂದ ನವತತ್ತ್ವಗಳು, ಷಡ್ದ್ರವ್ಯಗಳು, ಪಂಚಾಸ್ತಿಕಾಯಗಳು, ಚತುರ್ಗತಿಗಳು, ಲೋಕಸ್ಥಿತಿ, ಸಂಸಾರಕ್ಕೆ ಕಾರಣವಾದ ಕರ್ಮ, ಮುಕ್ತಿಸಾಧಕವಾದ ರತ್ನತ್ರಯ—ಇವೇ ಮೊದಲಾದುವನ್ನು ಕುರಿತು ಕೆಲವು ವಿವರಣೆಗಳನ್ನು ಇಲ್ಲಿ ಕೊಡಲಾಗಿದೆ.

**ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ** —ಇವು ಸಪ್ತ ತತ್ತ್ವಗಳು. ಈ ಏಳರ ಜೊತೆಗೆ **ಪುಣ್ಯ, ಪಾಪ** ಎಂಬೆರಡು ಸೇರಿ ಒಟ್ಟು ತತ್ತ್ವಗಳು ಒಂಬತ್ತು. ಇವನ್ನು 'ನವ ಪದಾರ್ಥಗಳು' ಎಂದೂ ಹೇಳುತ್ತಾರೆ.

ಈ ನವತತ್ತ್ವಗಳಲ್ಲಿ **ಜೀವ** ಮತ್ತು ಅಜೀವದ ಐದು ಬಗೆಗಳಾದ **ಧರ್ಮ, ಅಧರ್ಮ, ಆಕಾಶ, ಪುದ್ಗಲ, ಕಾಲ**—ಇವು ಆರು ದ್ರವ್ಯಗಳು.

ಈ ಷಡ್ ದ್ರವ್ಯಗಳಲ್ಲಿ ಕಾಲ ಒಂದು ಹೊರತು ಉಳಿದ ಐದು ಪಂಚ **ಅಸ್ತಿಕಾಯಗಳು.**

ಜೀವ

ದೇವ, ಮನುಷ್ಯ, ಪಶು, ಪಕ್ಷಿ, ಗಿಡ, ಮರ, ಮೊದಲಾದವುಗಳಲ್ಲೆಲ್ಲ ಚೈತನ್ಯರೂಪವಾಗಿರುವುದು ಜೀವ. ಜೀವ ಸ್ವಭಾವವಾಗಿ ಪರಿಶುದ್ಧ ವಾದದ್ದು. ಅದಕ್ಕೆ ನಾಶವಿಲ್ಲ. ಜೀವಗಳು ಎಷ್ಟೆಂದು ಎಣಿಸಲಾಗುವುದಿಲ್ಲ. ಶಾಶ್ವತವಾಗಿ ಅಗಣಿತವಾಗಿರುವ ಈ ಜೀವಗಳಲ್ಲಿ ಮುಕ್ತ ಜೀವ, ಸಂಸಾರಿ ಜೀವ ಎಂದು ಎರಡು ವಿಧ. ಸಿದ್ಧರೂ ಕೇವಲಿಗಳೂ ಮುಕ್ತರು. ಈ ಮುಕ್ತ ಜೀವರಿಗೆ ಅನಂತವಾದ ಜ್ಞಾನ, ದರ್ಶನ, ವೀರ್ಯ, ಸುಖಗಳುಂಟು. ಹೀಗೆ ಶಾಶ್ವತ ಸುಖಕ್ಕೆ ನೆಲೆಯಾದ ಜೀವ ಹೇಗೋ ಅಜೀವದೊಡನೆ ಸೇರಿಕೊಂಡು ಕರ್ಮದ ಕಟ್ಟಿಗೆ ಸಿಕ್ಕಿಬಿದ್ದು ಸಂಸಾರಿಯಾಗುತ್ತದೆ. ಇಂಥ ಬದ್ಧಜೀವಕ್ಕೆ ಅನಂತ ಜ್ಞಾನಾದಿಗಳು ಮಾಸಿಹೋಗುತ್ತವೆ.

ಸಂಸಾರಿ ಜೀವ ಒಳ್ಳೆಯ ಕರ್ಮಮಾಡಿ ದೇವತೆಯಾಗುತ್ತದೆ; ಕೆಟ್ಟ ಕರ್ಮ ಮಾಡಿ ಪಶು, ಪಕ್ಷಿ, ಮೊದಲಾದ ತಿರ್ಯಕ್ ಪ್ರಾಣಿಯಾಗುತ್ತದೆ ಅಥವಾ ನರಕದಲ್ಲಿ ಹುಟ್ಟಿ ದುಃಖವನ್ನು ಅನುಭವಿಸುತ್ತದೆ; ಶುಭಾಶುಭ ಕರ್ಮಗಳ ಮಿಶ್ರ ದಿಂದ ಮನುಷ್ಯಜನ್ಮಕ್ಕೆ ಬರುತ್ತದೆ. ಹೀಗೆ ಎಡೆಬಿಡದೆ ಜೀವ ಅಲೆದಾಡು ತ್ತಿರುವ ದೇವ, ಮನುಷ್ಯ, ತಿರ್ಯಕ್, ನಾರಕ—ಎಂಬ ನಾಲ್ಕು ನೆಲೆಗಳೇ **ಚತುರ್ಗತಿಗಳು.** ಈ ಅಲೆದಾಟವೇ **ಸಂಸಾರ.** ಒಳ್ಳೆಯ ಮತ್ತು ಕೆಟ್ಟ ಕರ್ಮಗಳೆರಡನ್ನೂ ಪೂರ್ತಿಯಾಗಿ ನಾಶಮಾಡಿದರೆ ಜೀವ ಸಂಸಾರದ ಅಲೆತ ವನ್ನು ತಪ್ಪಿಸಿಕೊಂಡು ಶಾಶ್ವತಸುಖ ಪಡೆಯುತ್ತದೆ. ಈ ಬಿಡುಗಡೆಯೇ **ಮುಕ್ತಿ, ಮೋಕ್ಷ.** ಇದನ್ನು **ಪಂಚಮಗತಿ**ಯೆಂದೂ ಕರೆಯುತ್ತಾರೆ.

ಸಂಸಾರದಲ್ಲಿರುವಾಗ ಜೀವಕ್ಕೆ ಒಂಬತ್ತು ಗುಣಗಳುಂಟು: ೧ ಅದು ಜೀವಿಸುತ್ತದೆ; ಎಂದರೆ ಅದು ಹಿಂದೆ ಜೀವಿಸಿತ್ತು, ಈಗ ಜೀವಿಸಿದೆ, ಮುಂದೂ ಜೀವಿಸಿರುತ್ತದೆ. ೨ ಅದಕ್ಕೆ ಜ್ಞಾನದರ್ಶನಗಳುಂಟು. ೩ ಅದು ಅಮೂರ್ತವಾದ್ದು; ಅದಕ್ಕೆ ಸ್ಪರ್ಶ, ರುಚಿ, ಗಂಧ, ವರ್ಣಗಳಿಲ್ಲ. ೪ ಅದು ಕರ್ತೃ, ಎಂದರೆ ಕರ್ಮ ಮಾಡುತ್ತದೆ. ೫ ತಾನು ಧರಿಸುವ ದೇಹದಷ್ಟು ಅಳತೆಯುಳ್ಳದ್ದು; ಯಾವ ದೇಹವನ್ನು ಪಡೆದರೂ ಅದರ ತುಂಬ ಹರಡಿಕೊಳ್ಳುತ್ತದೆ. ೬ ಅದು ಭೋಕ್ತೃ, ತಾನು ಮಾಡಿದ ಕರ್ಮಗಳ ಫಲವನ್ನು ತಾನು ಅನುಭವಿಸುತ್ತದೆ. ೭ ಸಂಸಾರದಲ್ಲಿ ಸುತ್ತುತ್ತಿರುತ್ತದೆ. ೮ ಕರ್ಮಗಳನ್ನು ಕಳೆದುಕೊಂಡು ಶುದ್ಧಸ್ವರೂಪ ಪಡೆದು ಸಿದ್ಧನಾಗಬಲ್ಲದು. ೯ ಅದು ಊರ್ಧ್ವಗತಿಯುಳ್ಳದ್ದು; ಎಂದರೆ, ಮೇಲುಮೇಲಕ್ಕೆ ಹೋಗುತ್ತಿರುವುದೇ ಅದರ ಸ್ವಭಾವ.

ಸಂಸಾರಿ ಜೀವರನ್ನು ಮುಖ್ಯವಾಗಿ **ಸ್ಥಾವರ, ತ್ರಸ** ಎಂದು ಎರಡು ಗುಂಪಾಗಿ ವಿಂಗಡಿಸುತ್ತಾರೆ. ತಾವಾಗಿ ಒಂದು ಕಡೆಯಿಂದ ಒಂದು ಕಡೆಗೆ ಚಲಿಸಲಾರದೆ ಇದ್ದಲ್ಲೆ ಇರುವ ಜೀವಗಳು ಸ್ಥಾವರಗಳು. ತಾವಾಗಿ ಬೇರೆ ಕಡೆಗೆ ಹೋಗಬಲ್ಲವು ತ್ರಸ ಜೀವಗಳು.

ಸ್ಥಾವರಗಳು ಏಕೇಂದ್ರಿಯಗಳು; ಸ್ಪರ್ಶವನ್ನು ಮಾತ್ರ ಅರಿಯಬಲ್ಲ ಒಂದು ಇಂದ್ರಿಯದ ಜೀವಗಳು. ಇವುಗಳಲ್ಲಿ ಐದು ವಿಧ: ೧ ಪೃಥ್ವೀಕಾಯ—ಕಲ್ಲು ನೆಲಗಳಲ್ಲಿರುವ ಜೀವ. ೨ ಅಪ್‌ಕಾಯ—ನೀರಿನಲ್ಲಿರುವ ಜೀವ. ೩ ತೇಜಃಕಾಯ—ಬೆಂಕಿಯಲ್ಲಿರುವ ಜೀವ. ೪ ವಾಯುಕಾಯ—ಗಾಳಿಯಲ್ಲಿರುವ ಜೀವ. ೫ ವನಸ್ಪತಿಕಾಯ—ಗಿಡಮರಗಳಲ್ಲಿರುವ ಜೀವ.

ತ್ರಸ ಜೀವಗಳಲ್ಲಿ ನಾಲ್ಕು ಬಗೆ: ೧ ದ್ವೀಂದ್ರಿಯಗಳು ಸ್ಪರ್ಶ, ರಸಗಳನ್ನು ಮಾತ್ರ ಅರಿಯಬಲ್ಲ ಎರಡು ಇಂದ್ರಿಯದ ಜೀವಗಳು—ಶಂಖ, ಮೊದಲಾದವು. ೨ ತ್ರೀಂದ್ರಿಯಗಳು ಸ್ಪರ್ಶ, ರಸ, ಗಂಧಗಳನ್ನು ತಿಳಿಯಬಲ್ಲ ಮೂರು ಇಂದ್ರಿಯದ ಜೀವಗಳು—ಇರುವೆ, ಮೊದಲಾದವು. ೩ ಚತುರಿಂದ್ರಿಯಗಳು ಸ್ಪರ್ಶ, ರಸ, ಗಂಧ ಮತ್ತು ರೂಪಗಳನ್ನು ತಿಳಿಯಬಲ್ಲ ನಾಲ್ಕು ಇಂದ್ರಿಯದ ಜೀವಗಳು—ಜೇನು ಮೊದಲಾದವು. ೪ ಪಂಚೇಂದ್ರಿಯಗಳು ಸ್ಪರ್ಶ, ರಸ, ಗಂಧ, ರೂಪ, ಶಬ್ದಗಳನ್ನು ಅರಿಯಬಲ್ಲ ಐದು ಇಂದ್ರಿಯಗಳೂ ಉಳ್ಳ ಜೀವಗಳು—ಮನುಷ್ಯ ಮೊದಲಾದವು.

ಸ್ಥಾವರಜೀವಗಳು ಲೋಕದಲ್ಲೆಲ್ಲ ಹರಡಿವೆ. ತ್ರಸ ಜೀವಗಳು ಮಧ್ಯಲೋಕವೆಂಬ ಭೂಲೋಕ, ಮೇಲಿನ ದೇವಲೋಕ, ಕೆಳಗಿನ ನರಕಲೋಕ—ಇವುಗಳಲ್ಲಿ ನಡುವೆ ವ್ಯಾಪಿಸಿರುವ ತ್ರಸನಾಡಿಯಲ್ಲಿ ವಾಸಿಸುತ್ತವೆ. ಮನುಷ್ಯರೂ ಪಶು ಪಕ್ಷಿ ಪ್ರಾಣಿಗಳೂ ಹುಟ್ಟಿಬರುವುದು ಮಧ್ಯಲೋಕದಲ್ಲಿ. ಜೀವಗಳು ಪಾಪಫಲವಾದ ದುಃಖವನ್ನು ಅನುಭವಿಸುವುದು ಮಧ್ಯಲೋಕದ

ಅಡಿಯಲ್ಲಿ ಒಂದರ ಕೆಳಗೊಂದರಂತೆ ಇರುವ ಏಳು ನರಕಗಳಲ್ಲಿ; ಸುಖಾನುಭವಕ್ಕಾಗಿ ದೇವರಾಗಿ ಹುಟ್ಟುವುದು ಮಧ್ಯಲೋಕದ ಮೇಲುಗಡೆ ಇರುವ ಊರ್ಧ್ವಲೋಕದಲ್ಲಿ. (ಲೋಕಸ್ವರೂಪ ವಿವರಣೆಯನ್ನು ನೋಡಿ).

ದೇವತೆಗಳಲ್ಲಿ ಭವನಪತಿ, ವ್ಯಂತರಿಕ, ಜ್ಯೋತಿಷ್ಕ ಮತ್ತು ವಿಮಾನವಾಸಿಗಳೆಂದು ನಾಲ್ಕು ಬಗೆ. ಇವರೇ ಚತುರ್ನಿಕಾಯ ಅಮರರು. ಭೂಲೋಕಕ್ಕೂ ಅದರ ಕೆಳಗಿನ ಮೊದಲನೆಯ ನರಕಕ್ಕೂ ನಡುವೆ ಇರುವ ಅಕೃತ್ರಿಮ ಭವನಗಳಲ್ಲಿ ವಾಸ ಮಾಡುವ ದೇವತೆಗಳು ಭವನಪತಿಗಳು. ಗಿರಿ, ಗುಹೆ, ಸಮುದ್ರ ಮೊದಲಾದ ವಿವಿಧ ಪ್ರದೇಶಗಳಲ್ಲಿ ವಾಸಿಸುವ ಕಿನ್ನರ, ಕಿಂಪುರಷ, ಯಕ್ಷರೇ ಮೊದಲಾದವರು ವ್ಯಂತರ ದೇವತೆಗಳು. ಸೂರ್ಯ, ಚಂದ್ರ ಗ್ರಹನಕ್ಷತ್ರಗಳಲ್ಲಿ ವಾಸಿಸುವವರು ಜ್ಯೋತಿಷ್ಕ ದೇವತೆಗಳು. ಸ್ವರ್ಗವಿಮಾನಗಳಲ್ಲಿ ವಾಸಮಾಡುವವರು ವಿಮಾನವಾಸಿಗಳು. ವಿಮಾನವಾಸಿಗಳಲ್ಲಿ ಕಲ್ಪವಾಸಿಗಳೆಂದೂ ಕಲ್ಪಾತೀತರೆಂದೂ ಎರಡು ಬಗೆ. ಮೊದಲನೆಯ ಸೌಧರ್ಮಸ್ವರ್ಗದಿಂದ ೧೬ನೆಯ ಅಚ್ಯುತ ಸ್ವರ್ಗದ ವರೆಗೆ ದೇವತೆಗಳಲ್ಲಿ ಇಂದ್ರ, ಸಾಮಾನಿಕ ಮೊದಲಾದ ಕಲ್ಪನೆಗಳಿರುವುದರಿಂದ ಆ ಸ್ವರ್ಗಗಳಿಗೆ ಕಲ್ಪಗಳೆಂದು ಹೆಸರು. ಅಲ್ಲಿ ವಾಸಮಾಡುವವರು ಕಲ್ಪವಾಸಿಗಳು. ಅಲ್ಲಿಂದ ಮೇಲಿನ ಒಂಬತ್ತು ಗ್ರೈವೇಯಕವಿಮಾನಗಳಲ್ಲೂ ಇನ್ನೂ ಮೇಲಿನ ಐದು ಅನುತ್ತರವಿಮಾನಗಳಲ್ಲೂ ವಾಸಿಸುವ ದೇವತೆಗಳಲ್ಲಿ ಇಂದ್ರಾದಿ ಕಲ್ಪನೆಗಳಿಲ್ಲ. ಅವರೆಲ್ಲ ಸಮಾನರು; ಸ್ವಯಂ ಇಂದ್ರರು; ಅಹಮಿಂದ್ರರು. ಕಲ್ಪಗಳನ್ನು ಮೀರಿರುವ ಆ ದೇವತೆಗಳು ಕಲ್ಪಾತೀತರು.

ಸ್ವರ್ಗದಲ್ಲಿ ದೇವತೆಗಳು ವಾಸಮಾಡುವ ಎಡೆಗಳಿಗೆ ವಿಮಾನಗಳೆಂದು ಹೆಸರು. ವಿಮಾನಗಳಲ್ಲಿ ಇಂದ್ರಕ, ಶ್ರೇಣಿಬದ್ಧ, ಪ್ರಕೀರ್ಣಕ—ಎಂದು ಮೂರು ಬಗೆ. ಅವುಗಳಲ್ಲಿ ಇಂದ್ರಕ ವಿಮಾನಗಳು ಪ್ರಧಾನವಾದವು. ಕಲ್ಪ ಮತ್ತು ಕಲ್ಪಾತೀತ ಸ್ವರ್ಗಗಳೆಲ್ಲೆಲ್ಲ ಒಟ್ಟು ಅರುವತ್ತುಮೂರು ಇಂದ್ರಕ ವಿಮಾನಗಳಿವೆ. ಅವುಗಳಿಗೆ ತ್ರಿಷಷ್ಟಿ ಸ್ವರ್ಗ ಪಟಲಗಳೆಂದು ಹೆಸರು.

ವಿಮಾನವಾಸಿ ಮತ್ತು ಭವನವಾಸಿ ದೇವತೆಗಳಲ್ಲಿ ಇಂದ್ರ, ಸಾಮಾನಿಕ, ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ, ಪ್ರಕೀರ್ಣಕ, ಆಭಿಯೋಗ್ಯ ಮತ್ತು ಕಿಲ್ಬಿಷಿಕ ಎಂದು ಹತ್ತು ವರ್ಗಗಳುಂಟು. ವ್ಯಂತರ ಮತ್ತು ಜ್ಯೋತಿಷ್ಕ ದೇವತೆಗಳಲ್ಲಿ ತ್ರಾಯಸ್ತ್ರಿಂಶ ಲೋಕಪಾಲರುಗಳಿಲ್ಲ. ಅಣಿಮಾದಿ ಅಷ್ಟಗುಣಗಳಿಂದ ಕೂಡಿ ದೇವತೆಗಳ ಅಧಿಪತಿಗಳಾಗಿರುವವರು ಇಂದ್ರರು. ಆಜ್ಞೆ ಐಶ್ವರ್ಯಗಳಲ್ಲಿ ಹೊರತು ಉಳಿದ ಗುಣಗಳಲ್ಲಿ ಇಂದ್ರರಿಗೆ ಸಮಾನರಾಗಿ ಅವರಿಗೆ ತಾಯಿ ತಂದೆ ಗುರುಗಳಂತಿರುವವರು ಸಾಮಾನಿಕರು. ಇಂದ್ರರಿಗೆ ಮಂತ್ರಿ ಪುರೋಹಿತರಂತಿರುವವರು ತ್ರಾಯಸ್ತ್ರಿಂಶ ದೇವತೆಗಳು; ಸಂಗಡಿಗರಂತಿರುವವರು ಪಾರಿಷದರು; ಮೈಗಾವಲಾಗಿರುವವರು ಆತ್ಮರಕ್ಷದೇವತೆಗಳು. ದುರ್ಗರಕ್ಷಕರಂತಿರುವವರು ಲೋಕಪಾಲರು.

ದೇವರಾಯನ ಏಳು ಬಗೆಯ ಸೈನ್ಯದವರೇ ಅನೀಕದೇವತೆಗಳು. ಪೌರರಂತೆ, ನಾಡಿನ ಪ್ರಜೆಗಳಂತೆ ಇರುವವರು ಪ್ರಕೀರ್ಣಕರು. ದಾಸರಂತೆ ಸೇವಾಕರ್ಮ ಮಾಡುವವರು ಆಭಿಯೋಗ್ಯರು. ಸ್ವರ್ಗದಲ್ಲೂ 'ಬಾಹ್ಯ ಪ್ರಜೆ'ಗಳಂತಿರುವ ಅಲ್ಪಪುಣ್ಯರಾದ ಅತ್ಯಂತ ಕೆಳತರಗತಿಯ ದೇವತೆಗಳು ಕಿಲ್ಬಿಷಿಕರು.

ಈ ಚತುರ್ಗತಿರೂಪವಾದ ಸಂಸಾರದಲ್ಲಿ ತೊಳಲುತ್ತಿರುವ ಜೀವ ಅಜ್ಞಾನ ಮುಸುಕಿ ತನ್ನ ನಿಜಸ್ವರೂಪವನ್ನು ಮರೆತಿದ್ದರೂ ಸದಾ ಸುಖವನ್ನರಸುತ್ತ ದುಃಖವನ್ನು ದೂರಮಾಡಲು ಯತ್ನಿಸುತ್ತಿರುತ್ತದೆ. ಕರ್ಮದ ಬಂಧ ಎಷ್ಟೇ ಗಟ್ಟಿಯಾಗಿದ್ದರೂ ಅದು ಜೀವವನ್ನು ಪೂರ್ತಿಯಾಗಿ ನಾಶಮಾಡಲಾರದು. ತನ್ನನ್ನು ಸಂಸಾರಕ್ಕೆ ಕಟ್ಟಿಹಾಕಿರುವ ಕರ್ಮಬಂಧದ ಬಿಗುಪನ್ನು ಹೆಚ್ಚಿಸಿ ಕೊಳ್ಳುವುದೂ ಅಥವಾ ಅದನ್ನು ಸಡಿಲಿಸಿ, ತಡೆದು, ನಾಶಮಾಡಿ ಬಿಡುಗಡೆ ಹೊಂದುವುದೂ ಜೀವದ ಇಚ್ಛೆಗೆ ಸೇರಿದ್ದು; ಅದರ ಶಕ್ತಿಗೆ ಒಳಪಟ್ಟದ್ದು. ಆದರೆ ಒಮ್ಮೆ ಕರ್ಮಮಾಡಿದರೆ ಆ ಕರ್ಮಫಲವನ್ನು ಅನುಭವಿಸಿ ಮುಗಿಸುವ ವರೆಗೂ ಬಿಡುಗಡೆಯಿಲ್ಲ.

### ಅಜೀವ

ಜೀವವಲ್ಲದ್ದು ಅಜೀವ. ಅಜೀವಕ್ಕೆ ಚೈತನ್ಯವಿಲ್ಲ. ಅಚೇತನತ್ವವೇ ಅದರ ಲಕ್ಷಣ. ಹಿಂದೆ ಹೇಳಿರುವ ಧರ್ಮ, ಅಧರ್ಮ, ಆಕಾಶ, ಪುದ್ಗಲ, ಕಾಲ— ಈ ಐದೂ ಅಜೀವಗಳು. ಜೀವಕ್ಕೆ ಸಂಸಾರಬಂಧನವಾಗುವುದು ಈ ಅಜೀವದ ಸಂಪರ್ಕದಿಂದಲೇ.

ಅಜೀವಗಳಲ್ಲಿ ಮೂರ್ತ, ಅಮೂರ್ತ (ಆಕೃತಿಯುಳ್ಳದ್ದು, ಇಲ್ಲದ್ದು) ಎಂದು ಎರಡು ವಿಧ. ಪುದ್ಗಲವೊಂದು ಮೂರ್ತ; ಉಳಿದ ನಾಲ್ಕೂ ಅಮೂರ್ತ ಗಳು.

### ೧ ಪುದ್ಗಲ

ಅಜೀವಗಳಲ್ಲೆಲ್ಲ ಪುದ್ಗಲವೇ ಬಹು ಮುಖ್ಯವಾದದ್ದು. ಈ ಪುದ್ಗಲ ಜೀವದೊಡನೆ ಕೂಡಿಕೊಂಡಿರುತ್ತದೆ. ಇದರ ಗುಣಗಳೆಲ್ಲ ಜೀವದ ಗುಣಗಳಿಗೆ ವಿರುದ್ಧವಾದವು. ಜೀವ ಚೇತನವುಳ್ಳದ್ದು, ಅಮೂರ್ತ. ಪುದ್ಗಲ ಅಚೇತನ, ಮೂರ್ತ. ಪುದ್ಗಲಕ್ಕೆ ಸ್ಪರ್ಶ, ರಸ, ಗಂಧ, ವರ್ಣಗಳುಂಟು. ಎಂದರೆ ಅದನ್ನು ಮುಟ್ಟಬಹುದು, ರುಚಿ ನೋಡಬಹುದು, ಮೂಸಬಹುದು, ನೋಡ ಬಹುದು. ಪುದ್ಗಲವನ್ನು ನಾಶಮಾಡಬಹುದು, ಅಥವಾ ಅದರ ರೂಪವನ್ನು

ಮಾರ್ಪಡಿಸಬಹುದು. ಶರೀರ, ಇಂದ್ರಿಯಗಳು, ಇಂದ್ರಿಯಗಳ ಮೂಲಕ ಅನುಭವಿಸುವ ವಿಷಯಗಳು, ಮನಸ್ಸು, ಕರ್ಮ—ಇವೆಲ್ಲ ಪುದ್ಗಲಗಳು.

ಪುದ್ಗಲಕ್ಕೆ ಅಣು, ಸ್ಕಂಧ, ಎಂದು ಎರಡು ರೂಪಗಳುಂಟು. ಒಂದು ಪ್ರದೇಶ (ಸ್ಥಳದ ಏಕಮಾನ) ಉಳ್ಳ ಪುದ್ಗಲಕ್ಕೆ ಅಣುವೆಂದು ಹೆಸರು. ಅಂಥ ಅಣುಗಳು ಒಂದುಗೂಡಿ 'ಸ್ಕಂಧ'ವಾಗುತ್ತದೆ. ಈ ಸ್ಕಂಧಗಳಿಂದ ವಸ್ತುಗಳು ರೂಪುಗೊಳ್ಳುತ್ತವೆ.

ಪುದ್ಗಲವನ್ನು ಆರು ಬಗೆಯಾಗಿ ವಿಂಗಡಿಸುತ್ತಾರೆ. ೧ ಅತಿಸ್ಥೂಲ—ಮಣ್ಣು, ಬೆಟ್ಟ, ಕಬ್ಬಿಣದ ಕಂಬ ಮೊದಲಾದುವು. ೨ ಸ್ಥೂಲ—ನೀರು, ಎಣ್ಣೆ, ತುಪ್ಪ ಮೊದಲಾದುವು. ೩ ಸ್ಥೂಲ ಸೂಕ್ಷ್ಮ (ಸ್ಥೂಲತೆ ಹೆಚ್ಚು, ಸೂಕ್ಷ್ಮತೆ ಕಡಮೆ)—ನೆರಳು, ಬಿಸಿಲು ಮೊದಲಾದುವು. ೪ ಸೂಕ್ಷ್ಮಸ್ಥೂಲ (ಸೂಕ್ಷ್ಮತೆ ಹೆಚ್ಚು, ಸ್ಥೂಲತೆ ಕಡಮೆ)—ವಾಸನೆ, ಶಬ್ದ, ರುಚಿ, ಸ್ಪರ್ಶ ಮೊದಲಾದುವು. ೫ ಸೂಕ್ಷ್ಮ—ಪಾಪ ಪುಣ್ಯ ರೂಪವಾದ ಕರ್ಮ ಪುದ್ಗಲ ಈ ತರಗತಿಯದು. ಇದು ಇಂದ್ರಿಯಗೋಚರವಾದ್ದಲ್ಲ. ೬ ಅತಿ ಸೂಕ್ಷ್ಮ—ಸೂಕ್ಷ್ಮಕ್ಕಿಂತ ಸೂಕ್ಷ್ಮವಾದ್ದು.

### ೨ ಧರ್ಮ

ಧರ್ಮವೆಂಬುದು ಒಂದು ಶಕ್ತಿ. ಮೀನುಗಳು ಸಂಚರಿಸುವುದಕ್ಕೆ ನೀರು ಹೇಗೆ ಸಹಾಯಕವಾಗುವುದೊ ಹಾಗೆ ಜೀವಪುದ್ಗಲಗಳ ಓಡಾಟಕ್ಕೆ ಧರ್ಮ ದ್ರವ್ಯ ಸಹಾಯಕವಾಗುತ್ತದೆ. ಅದು ಜೀವ ಪುದ್ಗಲಗಳನ್ನು ಚಲಿಸುವಂತೆ ಪ್ರೇರಿಸಲಾರದು, ನಿರ್ಬಂಧಿಸಲಾರದು. ಆದರೆ ಅವು ಚಲಿಸಬೇಕಾದರೆ ಧರ್ಮ ಇದ್ದೇ ತೀರಬೇಕು. ಅದಿಲ್ಲದಿದ್ದರೆ ಯಾವ ಚಲನೆಯೂ ಸಾಧ್ಯವಿಲ್ಲ. ಆದ್ದರಿಂದಲೆ ಸದಾ ಊರ್ಧ್ವಗತಿಯುಳ್ಳದ್ದಾಗಿ ಮೇಲುಮೇಲಕ್ಕೆ ಹೋಗುವ ಜೀವ ಮುಕ್ತಿಪಡೆದು ಸಿದ್ಧಶಿಲೆಯನ್ನು ಸೇರಿದ ಮೇಲೆ ಲೋಕಾಂತದ ಆ ಬಳಿಯಲ್ಲಿ ಧರ್ಮದ್ರವ್ಯವಿಲ್ಲದಿರುವುದರಿಂದ ಮುಂದಕ್ಕೆ ಹೋಗದೆ ಅಲ್ಲೆ ನಿಂತುಬಿಡುತ್ತದೆ.

### ೩ ಅಧರ್ಮ

ಧರ್ಮದ್ರವ್ಯ ಜೀವಪುದ್ಗಲಗಳ ಚಲನೆಗೆ ಸಹಾಯಕವಾಗುವಂತೆ ಅಧರ್ಮ ದ್ರವ್ಯ ಅವುಗಳ ವಿಶ್ರಾಂತಿಗೆ—ಅವು ಓಡಾಟವನ್ನು ಬಿಟ್ಟು ಒಂದು ಕಡೆ ನಿಲ್ಲುವುದಕ್ಕೆ—ಸಹಾಯಕವಾಗುತ್ತದೆ. ಧರ್ಮದಂತೆ ಇದೂ ಕೂಡ ವಿಶ್ರಾಂತಿಗೆ ಪ್ರೇರಕವಲ್ಲ; ಸಹಾಯಕ ಮಾತ್ರ. ವಸ್ತುಗಳು ನಿಲ್ಲಲು ಭೂಮಿ ಹೇಗೋ ಹಾಗೆ.

ಜೀವ ತಾನು ಚಲಿಸಬೇಕೆಂದರಾಗಲಿ ತನ್ನೊಡನೆ ಕೂಡಿಕೊಂಡಿರುವ ಪುದ್ಗಲವನ್ನು ಚಲಿಸುವಂತೆ ಮಾಡಬೇಕೆಂದರಾಗಲಿ ಧರ್ಮದ್ರವ್ಯ ನೆರವಿಗೆ ಬರುತ್ತದೆ. ಅದೇ ಜೀವ ತನ್ನ ಓಡಾಟವನ್ನು ನಿಲ್ಲಿಸಬಯಸಿದರಾಗಲಿ ಕರ್ಮ ಪರಿಪಕ್ವವಾದ್ದರಿಂದ ಪುದ್ಗಲದ ಹಿಡಿತ ಸಡಿಲವಾಗಿ ಅದು ಕಳಚಿಬೀಳುವ ಸಂದರ್ಭದಲ್ಲಾಗಲಿ ಅಧರ್ಮದ್ರವ್ಯ ನೆರವಿಗೆ ಬರುತ್ತದೆ.

ಧರ್ಮ ಅಧರ್ಮಗಳೆರಡೂ ಲೋಕದಲ್ಲೆಲ್ಲ ಹರಡಿವೆ; ಲೋಕದ ಹೊರಗೆ (ಅಲೋಕದಲ್ಲಿ) ಇಲ್ಲ. ಇವು ಅನಾದಿ ಅನಂತಗಳು. ಇವಕ್ಕೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಲ್ಲ.

### ೪ ಆಕಾಶ

ಜೀವಗಳಿಗೂ ಉಳಿದ ಎಲ್ಲ ಅಜೀವಗಳಿಗೂ ಲೋಕದಲ್ಲಿ ಇರಲು ಸ್ಥಳ ಕೊಡುವುದೇ ಆಕಾಶ. ಆಕಾಶದಲ್ಲಿ ಲೋಕ, ಅಲೋಕ ಎಂದು ಎರಡು ಭಾಗಗಳುಂಟು. ಲೋಕದಲ್ಲಿ ಜೀವ, ಪುದ್ಗಲ, ಆಕಾಶ, ಕಾಲ, ಧರ್ಮ, ಅಧರ್ಮ—ಈ ಆರು ದ್ರವ್ಯಗಳೂ ಇರುವುವು. ಅಲೋಕದಲ್ಲಿರುವುದು ಅನಂತ ವಾದ ಆಕಾಶವೊಂದೇ.

ಲೋಕದಲ್ಲೂ ಜೀವಗಳಿರುವ ಸ್ಥಳ ಬಹು ಕಡಮೆ. ಅದರಲ್ಲಿ ಕೂಡ ಮನುಷ್ಯರು ವಾಸಮಾಡುವ ಸ್ಥಳ ಮಧ್ಯಲೋಕದ ಅತ್ಯಲ್ಪ ಭಾಗದಲ್ಲಿ (ಮಧ್ಯ ಲೋಕವನ್ನು ನೋಡಿ).

### ೫ ಕಾಲ

ಜೀವಾಜೀವಗಳ ಹಲವು ಪರಿವರ್ತನೆಗಳಿಗೆ ಕಾರಣವಾಗಿ ಅವುಗಳ ರೂಪಾಂತರಕ್ಕೆ ನೆರವಾಗುವುದು ಕಾಲ. ಕಾಲ ಅನಾದಿಯಾದ್ದು, ಅನಂತ ವಾದ್ದು.

ಕಾಲವನ್ನು ಸಾಮಾನ್ಯವಾಗಿ ಸಮಯ, ನಿಮಿಷ, ಮಾಸ, ವರ್ಷ ಮೊದ ಲಾಗಿ ಗಣಿಸುವುದು ಸರಿಯಷ್ಟೆ. ಅನಂತವಾದ ಕಾಲವನ್ನು ಹೀಗೆ ಗಣಿಸ ಲಾಗುವುದಿಲ್ಲ. ಈ ಅನಂತಕಾಲವನ್ನು ಅಸಂಖ್ಯ ಕಲ್ಪಗಳಾಗಿ ವಿಭಾಗಿಸು ತ್ತಾರೆ. ಒಂದೊಂದು ಕಲ್ಪದಲ್ಲಿಯೂ **ಉತ್ಸರ್ಪಿಣಿ, ಅವಸರ್ಪಿಣಿ,** ಎಂದು ಎರಡು ಭೇದ. ಉತ್ಸರ್ಪಿಣಿಯ ಕಾಲದಲ್ಲಿ ಧರ್ಮ, ಸತ್ಯ, ನ್ಯಾಯ, ಜನರ ಆಯುಸ್ಸು, ಸುಖ, ಮುಂತಾದವು ಕ್ರಮಕ್ರಮವಾಗಿ ಹೆಚ್ಚುತ್ತ ಹೋಗು ತ್ತವೆ. ಅವಸರ್ಪಿಣಿಯಲ್ಲಿ ಅವು ಕ್ರಮಕ್ರಮವಾಗಿ ಕಡಮೆಯಾಗುತ್ತ ಬಂದು

ಕಡೆಗೆ ಅಧರ್ಮ ಅನ್ಯಾಯಾದಿಗಳು ತಾವೇ ತಾವಾಗುತ್ತವೆ. ಆ ಬಳಿಕ ಮತ್ತೆ ಉತ್ಸರ್ಪಿಣಿ ಮೊದಲಾಗಿ, ಅಧರ್ಮ ಅನ್ಯಾಯಗಳು ಕಡಮೆಯಾಗುತ್ತ ಆಗುತ್ತ ಧರ್ಮ ನ್ಯಾಯಗಳಿಗೆ ಎಡೆ ಕೊಡುತ್ತವೆ. ಈ ಬಗೆಯ ಏರುಗಾಲ ಇಳಿಗಾಲಗಳು ಒಂದನ್ನೊಂದು ಎಡೆಬಿಡದೆ ಹಿಂಬಾಲಿಸುತ್ತಲೇ ಇರುತ್ತವೆ. ಇದೇ ಕಾಲಚಕ್ರ.

ಅವಸರ್ಪಿಣಿ ಉತ್ಸರ್ಪಿಣಿಗಳೆರಡನ್ನೂ ಆರಾರು ಕಾಲಗಳಾಗಿ ವಿಭಾಗಿಸುತ್ತಾರೆ. ಅವಸರ್ಪಿಣಿಯಲ್ಲಿ ೧ ಸುಷಮ ಸುಷಮ (ಪೂರ್ಣ ಸುಖದ ಕಾಲ), ೨ ಸುಷಮ (ಸಾಮಾನ್ಯ ಸುಖ ಕಾಲ), ೩ ಸುಷಮ ದುಷ್ಷಮ (ಹೆಚ್ಚು ಸುಖ ಮತ್ತು ಸ್ವಲ್ಪ ದುಃಖ ಇರುವ ಕಾಲ), ೪ ದುಷ್ಷಮ ಸುಷಮ (ಹೆಚ್ಚು ದುಃಖ ಮತ್ತು ಸ್ವಲ್ಪ ಸುಖ ಇರುವ ಕಾಲ), ೫ ದುಷ್ಷಮ (ಬರಿಯ ದುಃಖದ ಕಾಲ), ೬ ದುಷ್ಷಮ ದುಷ್ಷಮ (ಅತ್ಯಂತ ದುಃಖದ ಕಾಲ)—ಎಂದು ಆರು ಭೇದಗಳು. ಉತ್ಸರ್ಪಿಣಿಯಲ್ಲಿಯೂ ಇದೇ ಭೇದಗಳುಂಟು. ಆದರೆ ಅದು ದುಷ್ಷಮ ದುಷ್ಷಮದಿಂದ ಮೊದಲಾಗಿ ಸುಷಮ ಸುಷಮದಲ್ಲಿ ಕೊನೆಯಾಗುತ್ತದೆ. ಈ ಒಳ ಭೇದಗಳನ್ನು ಯುಗಗಳೆಂದೂ ಕರೆಯುತ್ತಾರೆ.

ಅವಸರ್ಪಿಣಿಯ ಮೊದಲ ಮೂರು ಕಾಲಗಳೂ ಉತ್ಸರ್ಪಿಣಿಯ ಕಡೆಯ ಮೂರು ಕಾಲಗಳೂ ಸುಖ ಕಾಲಗಳು. ಆಗಿನ ಜನ ಬಯಸಿದ್ದನ್ನು ಕೊಡುವ **ಕಲ್ಪವೃಕ್ಷ**ಗಳಿಂದ ಇಷ್ಟಾರ್ಥಗಳನ್ನು ಪಡೆದು ಸುಖಿಸುತ್ತಿರುತ್ತಾರೆ. ಆ ಕಾಲಕ್ಕೆ **ಭೋಗಭೂಮಿ** ಎಂದು ಹೆಸರು. ಕಲ್ಪವೃಕ್ಷಗಳ ಸಹಾಯವಿಲ್ಲದೆ ಮನುಷ್ಯರು ಕಷ್ಟಪಟ್ಟು ದುಡಿದು ಜೀವಿಸಬೇಕಾದ ಉಳಿದ ಮೂರು ಕಾಲಗಳಿಗೂ **ಕರ್ಮಭೂಮಿ**ಯೆಂದು ಹೆಸರು.

ಈಗ ನಾವಿರುವುದು ಅವಸರ್ಪಿಣಿಯಲ್ಲಿ. ವೃಷಭ ಮೊದಲಾದ ೨೪ ತೀರ್ಥಂಕರರು ಅವತರಿಸಿ ಧರ್ಮೋಪದೇಶ ಮಾಡಿದ್ದು ಈ ಅವಸರ್ಪಿಣಿಯ ದುಷ್ಷಮ ಸುಷಮವೆಂಬ ನಾಲ್ಕನೆಯ ಕಾಲದಲ್ಲಿ.

## ದ್ರವ್ಯ ಮತ್ತು ಅಸ್ತಿಕಾಯ

ಈ ಮೇಲೆ ವಿವರಿಸಿರುವ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ—ಈ ಆರೂ ದ್ರವ್ಯಗಳು. ಬೇರೆ ಬೇರೆ ಹಲವು ಪರ್ಯಾಯಗಳಲ್ಲಿ (ರೂಪಾಂತರಗಳಲ್ಲಿ) ಹರಿದು ಮಾರ್ಪಡುತ್ತ, ಹಾಗೆ ಮಾರ್ಪಡುತ್ತಿದ್ದರೂ

'ಸತ್ತಾ' ಲಕ್ಷಣವುಳ್ಳದ್ದಾದ್ದರಿಂದ ತನ್ನ ಸಹಜ ಸ್ಥಿತಿಯನ್ನು ಕಳೆದುಕೊಳ್ಳದೆ ಇರುವುದು **ದ್ರವ್ಯ.** 'ಸತ್ತಾ' ಲಕ್ಷಣದಲ್ಲಿ ಉತ್ಪಾದ (ಹುಟ್ಟು), ವ್ಯಯ (ನಾಶ), ಧ್ರುವತ್ವ ಅಥವಾ ಧ್ರೌವ್ಯ (ಸ್ಥಿರತೆ)—ಎಂಬ ಮೂರು ಅವಸ್ಥೆಗಳು ಅಡಕವಾಗಿವೆ. ದ್ರವ್ಯಕ್ಕೆ ಉತ್ಪಾದ ಲಕ್ಷಣವಿರುವುದರಿಂದ ಅದು ಹುಟ್ಟಿದಂತೆ ಕಾಣುತ್ತದೆ; ವ್ಯಯವಿರುವುದರಿಂದ ನಾಶವಾದಂತೆ ಕಾಣುತ್ತದೆ; ಧ್ರುವತ್ವವಿರುವುದರಿಂದ ಅದು ತನ್ನ ಸಹಜಸ್ಥಿತಿಯನ್ನು ಕಳೆದುಕೊಳ್ಳದೆ ಒಂದೇ ರೀತಿ ಇರುತ್ತದೆ.

ಉದಾಹರಣೆಗೆ ಜೀವದ್ರವ್ಯವನ್ನು ತೆಗೆದುಕೊಳ್ಳೋಣ. ಜೀವ ಸಂಸಾರದಲ್ಲಿರುವಾಗ ಒಂದು ದೇಹದಲ್ಲಿ ಹುಟ್ಟಿ ಬಂದು ಕೆಲವು ಕಾಲ ಬಾಳಿ ಸತ್ತು ಬೇರೆ ದೇಹದಲ್ಲಿ ಮತ್ತೆ ಹುಟ್ಟಿ ಬರುತ್ತದೆ. ಹೀಗೆ ಬೇರೆ ಬೇರೆ ಜನ್ಮಗಳಲ್ಲಿ ಬಂದಾಗ ಜೀವ ಆಯಾ ದೇಹದ ಗುಣ ಲಕ್ಷಣಗಳನ್ನು ಪಡೆಯುತ್ತದೆ. ಆ ಒಂದೊಂದು ದೇಹವನ್ನೂ ಕುರಿತು ಯೋಚಿಸುವಾಗ ಜೀವ ಹುಟ್ಟಿದಂತೆಯೂ ಸತ್ತಂತೆಯೂ ಕಾಣುತ್ತದೆ. ಇವು ಆ ಜೀವದ ಉತ್ಪಾದವ್ಯಯಗಳು. ಆ ಹಲವು ದೇಹಗಳಲ್ಲಿ ಬಗೆಬಗೆಯ ಗುಣ ಲಕ್ಷಣಗಳನ್ನು ಪಡೆಯುತ್ತ ಅವುಗಳಲ್ಲೆಲ್ಲ ಸುತ್ತುತ್ತಿರುವುದು ಒಂದೇ ಜೀವ. ಆ ಸುತ್ತಾಟದಲ್ಲೆಲ್ಲ ಅದರ ವ್ಯಕ್ತಿತ್ವಕ್ಕೆ, ಜೀವತ್ವಕ್ಕೆ ಸ್ವಲ್ಪವೂ ಚ್ಯುತಿಯಿಲ್ಲ. ಆಗಾಗ ಹಲವು ಶರೀರಗಳನ್ನು ಆಶ್ರಯಿಸುತ್ತಿದ್ದರೂ ತನ್ನ ಸಹಜಗುಣಗಳನ್ನು ಬೆಳಗಿಕೊಂಡು ಮುಕ್ತಿ ಪಡೆಯುವವರೆಗೂ ಆ ಜೀವದ ಜೀವತ್ವ ಒಂದೇ ರೀತಿ ಇರುತ್ತದೆ. ಇದು ಅದರ ಧ್ರುವತ್ವ ಅಥವಾ ಧ್ರೌವ್ಯ. ಇದೇ ರೀತಿ ಉಳಿದ ದ್ರವ್ಯಗಳಿಗೂ ಊಹಿಸಿಕೊಳ್ಳಬೇಕು.

ಇರಲು ಹಲವು ಪ್ರದೇಶಗಳು (ಅತಿ ಸೂಕ್ಷ್ಮ ಸ್ಥಳಾವಕಾಶಕ್ಕೆ ಪ್ರದೇಶವೆಂದು ಸಂಕೇತ) ಬೇಕಾದ ದ್ರವ್ಯಕ್ಕೆ 'ಕಾಯ' ಎಂದು ಹೆಸರು. ಕಾಲವೊಂದಕ್ಕೆ ಹಲವು ಪ್ರದೇಶಗಳು ಬೇಕಿಲ್ಲ. ಆದ್ದರಿಂದ ಅದು 'ಕಾಯ' ಅಲ್ಲ. ಉಳಿದ ಐದೂ 'ಸತ್ತಾ' ಲಕ್ಷಣವುಳ್ಳವಾಗಿ (ಅಸ್ತಿ) 'ಇವೆ'ಯಾದ್ದರಿಂದಲೂ ಹಲವು ಪ್ರದೇಶಗಳನ್ನಪೇಕ್ಷಿಸುವ 'ಕಾಯ'ಗಳಾದ್ದರಿಂದಲೂ ಅವು **'ಅಸ್ತಿಕಾಯ'**ಗಳು.

ದ್ರವ್ಯಗಳು ಸೃಷ್ಟವಾದವಲ್ಲ. ಅವಕ್ಕೆ ನಾಶವಿಲ್ಲ. ಅವೆಲ್ಲ ಸ್ವತಂತ್ರವಾದವು. ಅವುಗಳ ಪರಸ್ಪರ ಸಹಕಾರದಿಂದ, ಸಂಯೋಗದಿಂದ ಪ್ರಪಂಚ

ವ್ಯಾಪಾರಗಳು ನಡೆಯುತ್ತವೆ. ಎಚ್ಚರಿಕೆ ತಪ್ಪಿದ ಅಥವಾ ಮೋಹಕ್ಕೊಳಗಾದ ಜೀವದ ಮೇಲೆ ಪುದ್ಗಲ ದಾಳಿಯಿಡುತ್ತದೆ. ಆಕಾಶ ಅವುಗಳ ಹೋರಾಟಕ್ಕೆ ಎಡೆಕೊಡುತ್ತದೆ. ಜೀವಪುದ್ಗಲಗಳ ಓಡಾಟಕ್ಕೆ, ಚಟುವಟಿಕೆಗೆ, ಧರ್ಮ ನೆರವಾಗುತ್ತದೆ. ಅವು ಬಳಲಿದಾಗ ಅವುಗಳ ವಿಶ್ರಾಂತಿಗೆ ಅಧರ್ಮ ಸಹಾಯಕ ವಾಗುತ್ತದೆ. ಕಾಲ ಪರಸ್ಪರ ಹೋರಾಟದಲ್ಲಿ ತೊಡಗಿರುವ ಈ ಜೀವಾಜೀವ ಗಳ ರೂಪಾಂತರಕ್ಕೆ ಕಾರಣವಾಗುತ್ತದೆ.

ಹೀಗೆ ಈ ದ್ರವ್ಯಗಳ ಸ್ವಭಾವದಿಂದಲೇ ಪ್ರಪಂಚ ವ್ಯಾಪಾರಗಳು ನಡೆದು ಕೊಂಡು ಹೋಗುತ್ತಿರುವುದು ಸಾಧ್ಯವಾದ್ದರಿಂದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತನಾದ ಈಶ್ವರನೊಬ್ಬನಿದ್ದಾನೆಂದು ನಂಬಬೇಕಾದ ಅಗತ್ಯವಿಲ್ಲ.

### ಪುಣ್ಯ, ಪಾಪ

ಜೀವದ ಶುಭ ಪರಿಣಾಮವೇ ಪುಣ್ಯ, ಅಶುಭ ಪರಿಣಾಮವೇ ಪಾಪ. ಜೀವದ ಒಳ್ಳೆಯ ಅಥವಾ ಕೆಟ್ಟ ಭಾವಗಳಿಗೆ ಅನುಸಾರವಾಗಿ ಪುಣ್ಯ ಅಥವಾ ಪಾಪಕರ್ಮಗಳು ಅದರ ಕಡೆಗೆ ಹರಿದು ಬರುತ್ತವೆ. ಒಳ್ಳೆಯ ಕರ್ಮ, ಮೇಲುಗತಿ ಕೊಡುವಂಥದು, ಪುಣ್ಯ. ಕೆಟ್ಟ ಕರ್ಮ, ಕೆಳಗತಿಗೆ ನಡಸು ವಂಥದು, ಪಾಪ.

ಅರ್ಹದ್ಭಕ್ತಿ ಮುಂತಾದ ಪ್ರಶಸ್ತವಾದ ರಾಗವುಳ್ಳ, ಅನುಕಂಪೆಯಿಂದ ಕೂಡಿದ ಮತ್ತು ಚಿತ್ತದಲ್ಲಿ ಕಲುಷವಿಲ್ಲದ ಜೀವಕ್ಕೆ ಪುಣ್ಯ ಕರ್ಮ ಹರಿದು ಬರುತ್ತದೆ. ಇದು ಪುಣ್ಯಾಸ್ರವ.

ಪ್ರಮಾದ ತುಂಬಿದ ನಡತೆ, ಕಲುಷತೆ, ವಿಷಯಲೋಲುಪತೆ, ಇತರರ ವಿಷಯದಲ್ಲಿ ಕೆಟ್ಟದ್ದಾಡುವುದು, ಹಿಂಸೆ ಮಾಡುವುದು—ಇವು ಜೀವಕ್ಕೆ ಪಾಪ ಹರಿದುಬರುವಂತೆ ಮಾಡುತ್ತವೆ. ಇದು ಪಾಪಾಸ್ರವ.

ಪಾಪ ಜೀವವನ್ನು ಕೆಳಗತಿಗೆ ತಳ್ಳುತ್ತದೆ; ಏಕೇಂದ್ರಿಯಾದಿ ಕೀಳು ನೆಲೆ ಗಳಲ್ಲಿ ಹುಟ್ಟುವಂತೆ ಮಾಡುತ್ತದೆ; ನರಕದುಃಖವನ್ನೂ ಉಂಟುಮಾಡುತ್ತದೆ. ಇದರಿಂದ ಜೀವದ ಒಳ್ಳೆಯ ಗುಣಗಳು ಕುಂದುತ್ತ ಬರುತ್ತವೆ.

ಪುಣ್ಯ ಜೀವವನ್ನು ಮೇಲುಗತಿಗೆ ಒಯ್ಯುತ್ತದೆ. ಪುಣ್ಯದಿಂದ ಆರೋಗ್ಯ, ಸೌಂದರ್ಯ ಮುಂತಾದ ಶುಭಗಳು ಲಭಿಸುತ್ತವೆ. ಪುಣ್ಯಬಲದಿಂದ ಚಕ್ರವರ್ತಿ ಯಾಗಬಹುದು; ದೇವತೆಯಾಗಬಹುದು; ತೀರ್ಥಂಕರನೂ ಆಗಬಹುದು. ಆದರೆ ಇದರಿಂದ ಮುಕ್ತಿ ಮಾತ್ರ ದೊರೆಯುವುದಿಲ್ಲ.

ಪಾಪ ಪುಣ್ಯಗಳೆರಡೂ ಬಂಧಕಾರಣಗಳು.

## ಕರ್ಮ

ಜೀವ ಅಜೀವದೊಡನೆ ಕೂಡಿದಾಗ ಕೆಲಸಮಾಡುತ್ತದೆ. ಈ ಕೆಲಸದ ಫಲವೇ ಕರ್ಮ. ಕರ್ಮ ಪುದ್ಗಲರೂಪವಾದದ್ದು. ಸೂಕ್ಷ್ಮವಾದ ಕರ್ಮ ಪುದ್ಗಲ ಜೀವದ ಮೇಲೆಲ್ಲ ಲೇಪವಾಗಿ ಜೀವಕ್ಕೆ ಬಂಧನವಾಗಿ ಪರಿಣಮಿಸುತ್ತದೆ. ಈ ಕರ್ಮಬಂಧನ ಜೀವದ ಊರ್ಧ್ವಗತಿಯನ್ನು ತಡೆದು, ಕೆಳಗೆಳೆದು, ಅದನ್ನು ಸಂಸಾರದಲ್ಲಿ ಸಿಕ್ಕಿಸುತ್ತದೆ. ಜೀವ ಕರ್ಮದ ಹೊರೆಹೊತ್ತು ತನ್ನ ಅನಂತ ಚತುಷ್ಟಯವನ್ನು ಕಳೆದುಕೊಂಡು ಹುಟ್ಟುಸಾವುಗಳ ಚಕ್ರದಲ್ಲಿ ತೊಳಲುತ್ತಿರಬೇಕಾಗುತ್ತದೆ.

ಕರ್ಮಗಳಲ್ಲಿ **ಘಾತಿ, ಅಘಾತಿ** ಎಂದು ಎರಡು ಬಗೆ. ಜೀವಕ್ಕೆ ಸಹಜವಾಗಿರುವ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ನಾಲ್ಕು ಅನಂತಗುಣಗಳಿಗೆ ಘಾತಿ ಎಂದರೆ ಕೇಡು ಮಾಡುವ ಕರ್ಮಗಳು **ಘಾತಿ ಕರ್ಮಗಳು**. ಹಾಗೆ ಘಾತಿಯುಂಟುಮಾಡದ ಕರ್ಮಗಳು **ಅಘಾತಿ ಕರ್ಮಗಳು.**

ಘಾತಿ ಕರ್ಮಗಳು ಜೀವವನ್ನು ಸಂಸಾರದಲ್ಲೆ ಸಿಲುಕಿಸಿ ಅದು ತನ್ನ ಸಹಜ ಸ್ಥಿತಿಯನ್ನು ಪಡೆಯದಂತೆ ತಡೆದಿಡುತ್ತವೆ. ಅಘಾತಿ ಕರ್ಮಗಳು ಆ ರೀತಿ ಕೇಡುಮಾಡಹೋಗದೆ ಜೀವ ಸಂಸಾರದಲ್ಲಿರುವಾಗ ಅದು ಹುಟ್ಟಿ ಬರುವ ಸಂದರ್ಭ, ಶರೀರ ಮೊದಲಾದುವನ್ನು ಮಾತ್ರ ನಿರ್ಧರಿಸುತ್ತವೆ.

ಘಾತಿ ಕರ್ಮಗಳು ನಾಲ್ಕು: ೧ ಜ್ಞಾನಾವರಣೀಯ—ಅನಂತ ಜ್ಞಾನವನ್ನು ಮರೆ ಮಾಡುವ ಕರ್ಮ. ೨ ದರ್ಶನಾವರಣೀಯ—ಅನಂತ ದರ್ಶನವನ್ನು ಮರೆ ಮಾಡುವ ಕರ್ಮ. ೩ ಅಂತರಾಯ—ಅನಂತವೀರ್ಯಕ್ಕೆ ತಡೆಮಾಡುವ ಕರ್ಮ. ೪ ಮೋಹನೀಯ—ಜೀವವನ್ನು ಮೋಹಗೊಳಿಸಿ ಅದರ ಅನಂತ ಸುಖವನ್ನು ಮುಸುಕಿಸುವ ಕರ್ಮ.

ಅಘಾತಿ ಕರ್ಮಗಳು ನಾಲ್ಕು: ೧ ಆಯುಃಕರ್ಮ—ಜೀವಿಯ ಆಯುಸ್ಸನ್ನು ನಿರ್ಧರಿಸುವ ಕರ್ಮ. ೨ ನಾಮಕರ್ಮ—ದೇಹ, ಎತ್ತರ, ಆಕಾರ, ಬಣ್ಣ ಮೊದಲಾದ ವ್ಯಕ್ತಿತ್ವ ಲಕ್ಷಣಗಳನ್ನು ಗೊತ್ತು ಮಾಡುವ ಕರ್ಮ. ೩ ಗೋತ್ರಕರ್ಮ—ಜೀವಿ ಹುಟ್ಟುವ ಜಾತಿ ಕುಲ ಗೋತ್ರಗಳನ್ನು ನಿರ್ಧರಿಸುವ ಕರ್ಮ. ೪ ವೇದನೀಯ ಕರ್ಮ—ಜೀವಿ ಅನುಭವಿಸುವ ಸುಖ ದುಃಖಗಳನ್ನು ನಿರ್ಣಯಿಸುವ ಕರ್ಮ.

ಮೇಲೆ ಹೇಳಿದ ಎಂಟು ಬಗೆಯ ಕರ್ಮಗಳನ್ನೂ ಒಟ್ಟಿನಲ್ಲಿ ಕರ್ಮಾಷ್ಟಕ ಎನ್ನು

ತ್ತಾರೆ. ಈ ಎಂಟನ್ನು ಇನ್ನೂ ಸೂಕ್ಷ್ಮವಾಗಿ ವಿಮರ್ಶಿಸಿ ೧೪೮ ಬಗೆಯಾಗಿ ವಿಂಗಡಿಸು ತ್ತಾರೆ. ಇವಕ್ಕೆ 'ಕರ್ಮಪ್ರಕೃತಿಗಳು' ಎಂದು ಹೆಸರು.

ಜೀವವನ್ನು ಸಂಸಾರಕ್ಕೆ ಬಂಧಿಸಿರುವುದು ಕರ್ಮವಾದ್ದರಿಂದ ಆ ಕರ್ಮದ ಬಂಧನವನ್ನು ಕತ್ತರಿಸಿದರೆ ಜೀವಕ್ಕೆ ಮೋಕ್ಷ ತಪ್ಪದೆ ದೊರೆಯುತ್ತದೆ. ಜ್ಞಾನಾವರಣವನ್ನು ನಾಶಮಾಡಿದರೆ ಕೇವಲಜ್ಞಾನ ದೊರೆಯುತ್ತದೆ. ದರ್ಶನಾವರಣವನ್ನು ಕತ್ತರಿಸಿದರೆ ಕೇವಲದರ್ಶನವುಂಟಾಗುತ್ತದೆ. ವೇದನೀಯ ಕರ್ಮಗಳ ನಾಶದಿಂದ ಅವ್ಯಾಬಾಧತ್ವವುಂಟಾಗುತ್ತದೆ; ಎಂದರೆ ಯಾವ ಬಾಧೆಯೂ ಇಲ್ಲದ ಅನಂತಸುಖ ದೊರೆಯುತ್ತದೆ. ಮೋಹನೀಯ ಕರ್ಮಗಳನ್ನು ಧ್ವಂಸಮಾಡಿದರೆ ಅಚಲವಾದ ಸಮ್ಯಕ್ತ್ವ ಲಭಿಸುತ್ತದೆ. ಆಯುಃ ಕರ್ಮದ ನಾಶದಿಂದ ಪರಮಸೂಕ್ಷ್ಮತೆ ಬರುತ್ತದೆ. ನಾಮಕರ್ಮಗಳನ್ನು ನಿರ್ಮೂಲಮಾಡುವುದರಿಂದ ಅವಗಾಹನತ್ವ (ಎಂದರೆ, ಒಂದು ಜೀವವಿರುವ ಎಡೆ ಇತರ ಜೀವಗಳೂ ಪ್ರವೇಶಿಸಿ ಅದರ ಜೊತೆಯಲ್ಲೆ ಇರಬಲ್ಲ ಶಕ್ತಿ) ಉಂಟಾಗುತ್ತದೆ. ಗೋತ್ರಕರ್ಮವನ್ನು ನಾಶಮಾಡುವುದರಿಂದ ಅಗುರುಲಘುತ್ವ (ಎಂದರೆ, ಕರ್ಮದಿಂದ ಭಾರವಾಗಿ ಕೆಳಗಿಳಿಯದೆ, ಹಗುರವಾಗಿ ಮೇಲಕ್ಕೆ ಹೋಗದೆ ಅಚಲವಾಗಿ ಸಿದ್ಧಗತಿಯಲ್ಲಿರುವ ಗುಣ) ಉಂಟಾಗುತ್ತದೆ. ಅಂತರಾಯಗಳನ್ನು ನಾಶಮಾಡುವುದರಿಂದ ಅನಂತವೀರ್ಯ ಲಭಿಸುತ್ತದೆ.

## ಲೇಶ್ಯ

ಜೀವ ಮಾಡಿದ ಪುಣ್ಯಪಾಪ ಕರ್ಮಗಳಿಗೆ ಅನುಗುಣವಾಗಿ ಅದಕ್ಕೆ ಒಂದು ಬಗೆಯ ಬಣ್ಣ ಬಳಿದು ಬರುತ್ತದೆ. ಈ ಬಣ್ಣಕ್ಕೆ ಲೇಶ್ಯವೆಂದು ಹೆಸರು. ಕಪ್ಪು, ನೀಲಿ, ಬೂದು, ಕೆಂಪು, ಪದ್ಮ ಮತ್ತು ಶುಕ್ಲ ಎಂದು ಲೇಶ್ಯಗಳು ಆರು. ಇವುಗಳಲ್ಲಿ ಮೊದಲಿನ ಮೂರು ಪಾಪಕರ್ಮದಿಂದಲೂ ಕಡೆಯ ಮೂರು ಪುಣ್ಯಕರ್ಮದಿಂದಲೂ ಉಂಟಾಗುತ್ತವೆ. ಮೊದಲ ಮೂರರಲ್ಲಿ ಪಾಪದ ತೀವ್ರತೆ ಕ್ರಮ ಕ್ರಮವಾಗಿ ತಗ್ಗುತ್ತ ಬರುತ್ತದೆ. ಕಡೆಯ ಮೂರರಲ್ಲಿ ಪುಣ್ಯದ ತೀವ್ರತೆ ಅನುಕ್ರಮವಾಗಿ ಹೆಚ್ಚುತ್ತ ಬರುತ್ತದೆ. ಉದಾಹರಣೆಗೆ, ಕಪ್ಪು ಲೇಶ್ಯದವನು ಪರಮ ಪಾಪಿ. ಶುಕ್ಲಲೇಶ್ಯದವನು ಉತ್ತಮೋತ್ತಮನಾದವನು; ಪರಿಶುದ್ಧನೂ ದಯಾವಂತನೂ ಇತರರಿಗೆ ಸ್ವಲ್ಪವಾದರೂ ಹಿಂಸೆ ಮಾಡದವನೂ ಆಗಿ ಬಾಳುವವನು.

## ಗುಣಸ್ಥಾನಗಳು

ಸಂಸಾರದಲ್ಲಿ ಸಿಕ್ಕಿ ಮಿಥ್ಯಾತ್ವದಲ್ಲಿ ಮುಳುಗಿರುವ ಜೀವ ಕ್ರಮಕ್ರಮವಾಗಿ ಮೇಲೇರುತ್ತ ಕರ್ಮಕ್ಷಯ ಮಾಡಿಕೊಂಡು ಮುಕ್ತಿ ಪಡೆಯುವ ಮಾರ್ಗದಲ್ಲಿ ಹದಿನಾಲ್ಕು ಮೆಟ್ಟಲುಗಳಿವೆ. ಈ ಮೆಟ್ಟಲುಗಳೇ **ಗುಣಸ್ಥಾನಗಳು.** ಕರ್ಮಗಳ ಉದಯ, ಉಪಶಮ (ಶಾಂತ ಸ್ಥಿತಿ), ಕ್ಷಯ, ಕ್ಷಯೋಪಶಮ (ಸ್ವಲ್ಪಮಟ್ಟಿಗೆ ನಾಶವಾಗುವುದು, ಸ್ವಲ್ಪಮಟ್ಟಿಗೆ ಶಾಂತವಾಗುವುದು)—ಇವುಗಳಿಂದ ಆಗುವ ಜೀವದ ಸ್ಥಿತಿಗೆ ಗುಣಸ್ಥಾನವೆಂದು ಹೆಸರು.

ಇವು ಯಾವುವೆಂದರೆ: ೧ ಮಿಥ್ಯಾತ್ವ, ೨ ಸಾಸಾದನ (ಸಾಸ್ವಾದನ), ೩ ಮಿಶ್ರ, ೪ ಅವಿರತ ಸಮ್ಯಕ್ತ್ವ, ೫ ದೇಶ ವಿರತ, ೬ ಪ್ರಮತ್ತವಿರತ, ೭ ಅಪ್ರಮತ್ತ ವಿರತ, ೮ ಅಪೂರ್ವಕರಣ, ೯ ಅನಿವೃತ್ತಿ ಕರಣ, ೧೦ ಸೂಕ್ಷ್ಮ ಸಾಂಪರಾಯ, ೧೧ ಉಪಶಾಂತ ಮೋಹ, ೧೨ ಕ್ಷೀಣ ಮೋಹ, ೧೩ ಸಯೋಗ ಕೇವಲಿ, ೧೪ ಅಯೋಗ ಕೇವಲಿ.

ಈ ಗುಣಸ್ಥಾನಗಳಲ್ಲಿ ಏರುತ್ತಿರುವ ಜೀವಕ್ಕೆ ಕ್ರಮ ಕ್ರಮವಾಗಿ ಮೆಟ್ಟಲು ಮೆಟ್ಟಲಿಗೂ ಅಜೀವದ ಸಂಬಂಧ ಕಡಮೆಯಾಗುತ್ತ ಬರುತ್ತದೆ; ಕರ್ಮದ ಕಟ್ಟು ಸಡಿಲವಾಗುತ್ತ ಬರುತ್ತದೆ. ಕಡೆಗೆ ಹದಿಮೂರನೆಯ ಗುಣಸ್ಥಾನದಲ್ಲಿ ಜೀವ ಅರ್ಹತ್ಪದವಿಯನ್ನು ಪಡೆದು ಹದಿನಾಲ್ಕನೆಯ ಗುಣಸ್ಥಾನದಲ್ಲಿ ಮುಕ್ತಿ ಹೊಂದಿ ಸಿದ್ಧಗತಿಯನ್ನು ಸೇರುತ್ತದೆ.

## ಆಸ್ರವ

ರಾಗದ್ವೇಷಾದಿಗಳಿಗೆ ಒಳಗಾದ ಜೀವದ ಮನೋವಾಕ್ಕಾಯಗಳಲ್ಲಿ (ಮನಸ್ಸು, ಮಾತು, ಮೈಗಳಲ್ಲಿ) ಉಂಟಾಗುವ ಚಲನೆಗಳಿಂದ, ಜೀವದ ಶುಭಾಶುಭಕಾರ್ಯಗಳಿಂದ, ಕರ್ಮಪುದ್ಗಲ ಹುಟ್ಟುತ್ತದೆ. ಈ ಕರ್ಮ ಜೀವದೊಳಕ್ಕೆ ಹರಿದು ಬರುವುದೇ ಆಸ್ರವ.

ಆಸ್ರವದಲ್ಲಿ ಎರಡು ಬಗೆ: ಭಾವಾಸ್ರವ, ದ್ರವ್ಯಾಸ್ರವ. ಕರ್ಮಪುದ್ಗಲ ಜೀವದೊಳಕ್ಕೆ ಹರಿಯಲು ಅನುಕೂಲವಾಗಿರುವ ಜೀವದ ಸ್ಥಿತಿಯೇ ಭಾವಾಸ್ರವ. ಅಂಥ ಅನುಕೂಲಸ್ಥಿತಿ ಒದಗಿರುವಾಗ ಜೀವದೊಳಕ್ಕೆ ಹರಿದು ಬರುವ ನಾನಾ ವರ್ಣಾದಿಗಳಿಂದ ಕೂಡಿದ ಪುದ್ಗಲವೇ ದ್ರವ್ಯಾಸ್ರವ. ಈ ಪುದ್ಗಲ ಬಹು ಸೂಕ್ಷ್ಮವಾದ್ದರಿಂದ ಇಂದ್ರಿಯ ಗೋಚರವಲ್ಲ.

ಐದು ಬಗೆಯ **ಮಿಥ್ಯಾತ್ವ**ದಿಂದ, ಐದು ಬಗೆಯ **ಅವಿರತಿ**ಯಿಂದ, ಹದಿನೈದು **ಪ್ರಮಾದ**ಗಳಿಂದ, ಮೂರು ಬಗೆಯ **ಯೋಗ**ದಿಂದ, ನಾಲ್ಕು

ಕಷಾಯಗಳಿಂದ, ಒಟ್ಟು ಮೂವತ್ತೆರಡು ವಿಧಗಳಿಂದ ಆಸ್ರವವುಂಟಾಗುತ್ತದೆ.

ಮಿಥ್ಯಾತ್ವ (ತಪ್ಪುನಂಬಿಕೆ): ೧ ಏಕಾಂತ—ಏಕಮುಖವಾದ ನಂಬಿಕೆ. ೨ ವಿಪರೀತ—ಸತ್ಯಕ್ಕೆ ವಿರುದ್ಧವಾದ್ದನ್ನು, ವಿಪರೀತವನ್ನು ನಂಬುವುದು. ೩ ವಿನಯ—ಆಚಾರದಲ್ಲಿ ಮಾತ್ರ ಗಮನವಿಟ್ಟು ಸಮ್ಯಗ್ದರ್ಶನ ಮಿಥ್ಯಾದರ್ಶನಗಳನ್ನೆಲ್ಲ ಗೌರವಿಸುವುದು. ೪ ಸಂಶಯ—ಸಂದೇಹಪಡುವುದು, ನಿಶ್ಚಯ ಜ್ಞಾನವಿಲ್ಲದಿರುವುದು. ೫ ಅಜ್ಞಾನ—ತಿಳಿವಳಿಕೆಯಿಲ್ಲದೆ ಸಮ್ಯಗ್ದರ್ಶನದಲ್ಲಿ ಉದಾಸೀನವಾಗಿರುವುದು.

ಅವಿರತಿ: (ವ್ರತ, ವೈರಾಗ್ಯ ಇಲ್ಲದಿರುವುದು): ೧ ಹಿಂಸೆ—ಜೀವಗಳಿಗೆ ಹಿಂಸೆ ಮಾಡುವುದು, ಕೊಲ್ಲುವುದು. ೨ ಅಸತ್ಯ—ಸುಳ್ಳಾಡುವುದು. ೩ ಸ್ತೇಯ—ಕಳವು. ೪ ಅಬ್ರಹ್ಮಚರ್ಯ—ಬ್ರಹ್ಮಚರ್ಯವಿಲ್ಲದಿರುವುದು. ೫ ಪರಿಗ್ರಹ—ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿ.

ಪ್ರಮಾದಗಳು: ೧ ಸ್ತ್ರೀ ಕಥೆ—ಹೆಂಗಸರ ವಿಷಯವಾದ ಹರಟೆ. ೨ ಭೋಜನ ಕಥೆ—ಊಟಕ್ಕೆ ಸಂಬಂಧಿಸಿದ ಮಾತು ಕಥೆ. ೩ ರಾಷ್ಟ್ರಕಥೆ—ರಾಜಕೀಯದ ಮಾತು. ೪ ಅವನೀಪಾಲ ಕಥೆ—ದೊರೆಗಳ ವಿಷಯವಾದ ಮಾತು. ೫—೮ ನಾಲ್ಕು ಕಷಾಯಗಳು: (೧) ಕ್ರೋಧ—ಅತಿ ಕೋಪ; (೨) ಮಾನ—ಅಹಂಕಾರ; ತನ್ನ ಕ , ವಿದ್ಯೆ, ಮೊದಲಾದವುಗಳಲ್ಲಿ ಪ್ರತಿಷ್ಠೆ; (೩) ಮಾಯೆ—ಮೋಸ ಮಾಡುವುದು; (೪) ಲೋಭ—ದುರಾಸೆ. ೯–೧೩ ಪಂಚೇಂದ್ರಿಯಗಳಿಂದ ಆಗುವ ಪ್ರಮಾದಗಳು. ೧೪ ನಿದ್ರೆ. ೧೫ ಸ್ನೇಹ (ಆಸಕ್ತಿ, ಪ್ರೀತಿ),

ಯೋಗ: ಮನಸ್ಸು, ಮಾತು, ಮೈ—ಈ ಮೂರರ ಚಲನಕ್ಕೆ ಯೋಗವೆಂದು ಸಂಜ್ಞೆ.

ಕಷಾಯಗಳು: ಕ್ರೋಧ, ಮಾನ, ಮಾಯಾ, ಲೋಭ, (ಪ್ರಮಾದಗಳಲ್ಲಿ ಹೇಳಿರುವವಕ್ಕೂ ಇಲ್ಲಿ ಹೇಳಿರುವವಕ್ಕೂ ಗುಣದಲ್ಲಿ ವ್ಯತ್ಯಾಸವುಂಟು).

## ಬಂಧ

ಹರಿದು ಬಂದ ಕರ್ಮ ಜೀವಕ್ಕೆ ಅಂಟಿಕೊಳ್ಳುವುದಕ್ಕೆ ಬಂಧ ಎಂದು ಹೆಸರು. ಬಂಧವೂ ಭಾವಬಂಧ, ದ್ರವ್ಯಬಂಧ ಎಂದು ಎರಡು ಬಗೆ. ಕರ್ಮ ಜೀವವನ್ನು ಬಂಧಿಸಲು ಸಾಧ್ಯವಾಗುವಂತಿರುವ ಜೀವದ ಸ್ಥಿತಿಗೆ ಭಾವಬಂಧವೆಂದೂ ಕರ್ಮಪುದ್ಗಲ ಜೀವದಲ್ಲೆಲ್ಲ ವ್ಯಾಪಿಸಿ ಅದಕ್ಕೆ ಅಂಟಿಕೊಳ್ಳುವುದಕ್ಕೆ ದ್ರವ್ಯಬಂಧವೆಂದೂ ಸಂಜ್ಞೆ.

ಕರ್ಮದ ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶಗಳನ್ನನುಸರಿಸಿ ಬಂಧ ನಾಲ್ಕು ಬಗೆ: ೧ ಕೆಲವು ಕರ್ಮ ಹಿತ; ಕೆಲವು ಅಹಿತ. ಈ ಸ್ವಭಾವವೇ 'ಪ್ರಕೃತಿ'. ೨ ಕೆಲವು ಕರ್ಮ ಬೇಗ ಸವೆಯುತ್ತವೆ; ಕೆಲವು ಬಹು ಕಾಲ ನಿಲ್ಲುತ್ತವೆ. ಹೀಗೆ

ಕರ್ಮ ಜೀವಕ್ಕೆ ಅಂಟಿಕೊಂಡಿರಬಹುದಾದ ಕಾಲಾವಧಿಯೇ 'ಸ್ಥಿತಿ'. ೩ ಪರಿಣಾಮ ದಲ್ಲಿ ಕೆಲವು ಕರ್ಮಗಳು ಬಹು ಪ್ರಬಲ, ಕೆಲವು ಮೃದು. ಕರ್ಮದ ಈ ರೀತಿಯ ಬಲಾಬಲಗಳಿಗೆ 'ಅನುಭಾಗ' ಎಂದು ಸಂಕೇತ. ೪ ಜೀವಕ್ಕೆ ಅಂಟಿಕೊಳ್ಳುವ ಕರ್ಮ ಪುದ್ಗಲದ ಸಂಖ್ಯೆಯನ್ನನುಸರಿಸಿ ತೆಳುವಾಗಿಯೊ ದಟ್ಟವಾಗಿಯೊ ಹರಡಿರುತ್ತದೆ. ಇದೇ 'ಪ್ರದೇಶ'.

### ಸಂವರ

ಹೊಸ ಕರ್ಮ ಹರಿದು ಬರದಂತೆ ತಡೆಯುವುದೇ ಸಂವರ. ಇಲ್ಲಿ ಕೂಡ ಭಾವಸಂವರ ದ್ರವ್ಯಸಂವರ ಎಂದು ಎರಡು ಬಗೆ. ಆಸ್ರವವನ್ನು ತಡೆಯಲು ಸಹಾಯಕವಾದ ಮನಸ್ಸಿನ ಪರಿಣಾಮಕ್ಕೆ ಭಾವಸಂವರವೆಂದೂ, ಕರ್ಮದ ಒಳ ಹರಿತವನ್ನು ನಿಲ್ಲಿಸುವ ಕಾರ್ಯಕ್ಕೆ ದ್ರವ್ಯಸಂವರವೆಂದೂ ಸಂಜ್ಞೆ.

ಕರ್ಮ ಹರಿದು ಬರುವುದಕ್ಕೆ ಯೋಗಕಷಾಯಗಳು ಕಾರಣವಷ್ಟೆ. ಅವನ್ನು ತಡೆಯುವುದರಿಂದ ಕರ್ಮದ ಹರಿತವನ್ನು ನಿಲ್ಲಿಸಬಹುದು. ಐದು **ವ್ರತ**ಗಳು, ಐದು **ಸಮಿತಿ**ಗಳು, ಮೂರು **ಗುಪ್ತಿ**ಗಳು, ಹತ್ತು **ಧರ್ಮ**ಗಳು, ಹನ್ನೆರಡು **ಅನುಪ್ರೇಕ್ಷೆ**ಗಳು, ಇಪ್ಪತ್ತೆರಡು **ಪರೀಷಹ** ಜಯಗಳು, ಹಲವು ಬಗೆಯ **ಚಾರಿತ್ರ**ಗಳು—ಇವುಗಳಿಂದ ಸಂವರವನ್ನು ಸಾಧಿಸಬಹುದು.

**ಐದು ವ್ರತಗಳು:** ೧ ಅಹಿಂಸೆ—ಮನೋವಾಕ್ ಕಾಯಗಳಿಂದ ಯಾವ ಪ್ರಾಣಿಗೂ ಹಿಂಸೆ ಮಾಡದಿರುವುದು. ೨ ಸತ್ಯ—ಯಾವಾಗಲೂ ನಿಜವನ್ನೇ ಆಡು ವುದು. ೩ ಅಸ್ತೇಯ—ಕದಿಯದಿರುವುದು; ತನಗಾಗಿ ಕೊಟ್ಟದ್ದು ಹೊರತು ಬೇರೆ ವಸ್ತುಗಳನ್ನು ತೆಗೆದುಕೊಳ್ಳದಿರುವುದು. ೪ ಬ್ರಹ್ಮಚರ್ಯ—ಮನೋವಾಕ್ ಕಾಯ ಗಳಿಂದ ಸ್ತ್ರೀಸಂಗ, ಪುರುಷಸಂಗ ಮಾಡದಿರುವುದು. ೫ ಅಪರಿಗ್ರಹ—ಪ್ರಾಪಂಚಿಕ ವಿಷಯಗಳಲ್ಲಿ ಸ್ವಲ್ಪವೂ ಮನಸ್ಸುಕೊಡದೆ ಅವನ್ನು ತ್ಯಾಗಮಾಡುವುದು. ಇವೇ ಪಂಚ ಮಹಾ ವ್ರತಗಳು.

**ಐದು ಸಮಿತಿಗಳು:** ೧ ಈರ್ಯಾ ಸಮಿತಿ—ನಡೆಯುವಾಗ ಯಾವ ಪ್ರಾಣಿಗೂ ನೋವಾಗದಂತೆ ನೋಡಿಕೊಂಡು ನಡೆಯುವುದು. ೨ ಭಾಷಾ ಸಮಿತಿ—ಯಾರೊಬ್ಬರ ಮನಸ್ಸನ್ನೂ ನೋಯಿಸದಂತೆ ಯುಕ್ತವಾಗಿ ಮಾತಾಡುವುದು. ಏಷಣಾ ಸಮಿತಿ— ತನಗಾಗಿಯೇ ಸಿದ್ಧಮಾಡಿರದ ಮತ್ತು ಪರಿಶುದ್ಧವಾದ ಆಹಾರವನ್ನು ಮಾತ್ರ ತೆಗೆದು ಕೊಳ್ಳುವುದು. ೪ ಆದಾನ ಸಮಿತಿ—ನೀರಿನ ಪಾತ್ರೆ, ಪುಸ್ತಕ ಮೊದಲಾದವನ್ನು ಇಡು ವಾಗಲೂ ತೆಗೆದುಕೊಳ್ಳುವಾಗಲೂ ಜೀವಹಿಂಸೆಯಾಗದಂತೆ ಜಾಗರೂಕತೆಯಿಂದಿರು ವುದು. ೫ ಪ್ರತಿಷ್ಠಾನ ಅಥವಾ ಉತ್ಸರ್ಗಸಮಿತಿ—ಆಹಾರದಲ್ಲಿ ಮಿಕ್ಕದ್ದು ಮುಂತಾದ ಕೊಳೆ ಕಶ್ಮಲಗಳನ್ನು ಬಿಸುಡುವಾಗಲೂ ಮಲಮೂತ್ರ ವಿಸರ್ಜನೆ ಮೊದಲಾದುವು ಗಳಲ್ಲಿಯೂ ಜೀವಹಿಂಸೆಯಾಗದಂತೆ ನೋಡಿಕೊಳ್ಳುವುದು.

ಮೂರು ಗುಪ್ತಿಗಳು : ೧ ಮನೋಗುಪ್ತಿ—ಸುಖದುಃಖಗಳಿಗೆ ಅಮಿತವಾಗಿ ವಶವಾಗದೆ ಸಮತಾಭಾವವನ್ನು ಸರ್ವರಲ್ಲಿಯೂ ತೋರಿ ತನ್ನ ಆತ್ಮಕಲ್ಯಾಣವನ್ನು ನೆನೆಯುವುದು. ೨ ವಚನಗುಪ್ತಿ—ಮೌನದಿಂದಿರುವುದು ಅಥವಾ ಮಿತವಾಗಿ ಮಾತಾಡುವುದು. ೩ ಕಾಯಗುಪ್ತಿ—ಆಗಮಗಳಲ್ಲಿ ಆಪ್ತರು ಹೇಳಿರುವ ಆಚರಣೆಗಳನ್ನು ಆಚರಿಸುವುದು.

ಹತ್ತು ಧರ್ಮಗಳು : ೧ ಕ್ಷಮೆ—ಕೋಪವನ್ನು ಪೂರ್ತಿಯಾಗಿ ತೊರೆದು ಯಾರು ಯಾವ ಕೇಡು ಮಾಡಿದರೂ ತಾಳಿಕೊಳ್ಳುವುದು. ೨ ಮಾರ್ದವ—ಅಹಂಕಾರವನ್ನು ಮೆಟ್ಟಿ ವಿನಯವನ್ನು ಬೆಳಸುವುದು. ೩ ಆರ್ಜವ—ಮರೆ ಮೋಸಗಳನ್ನು ತೊರೆದು ಸರಳತೆಯಿಂದಿರುವುದು. ಶೌಚ—ಕೆಟ್ಟ ಆಲೋಚನೆ, ಕೆಟ್ಟ ಮಾತು, ಕೆಟ್ಟ ಕೆಲಸಗಳಿಲ್ಲದೆ ಶುಚಿಯಾಗಿರುವುದು (ನಿರ್ಲೋಭತೆ—ದುರಾಸೆಯಿಲ್ಲದಿರುವುದು ಎಂದೂ ಹೇಳಿದೆ). ೫ ಸಂಯಮ—ಇಂದ್ರಿಯ ನಿಗ್ರಹ ಮತ್ತು ಪ್ರಾಣಿ ದಯೆ. ೬ ಸತ್ಯ—ನಿಜವನ್ನೆ ಆಡುವುದು; ಸುಳ್ಳಾಡದಿರುವುದು. ೭ ತಪಸ್ಸು—ಉತ್ತಮವಾದ ತಪಸ್ಸುಮಾಡುವುದು. ೮ ತ್ಯಾಗ—ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಿಯನ್ನು ತೊರೆಯುವುದು. ೯ ಅಕಿಂಚನತ್ವ—ತನ್ನದಲ್ಲದ ಯಾವುದನ್ನೂ ತೆಗೆದುಕೊಳ್ಳದಿರುವುದು (ಪ್ರಪಂಚವೂ ಪ್ರಾಪಂಚಿಕ ವಸ್ತುಗಳೂ ಆತ್ಮನದಲ್ಲ ಎಂದೂ ಇದನ್ನು ವಿವರಿಸುತ್ತಾರೆ). ೧೦. ಬ್ರಹ್ಮಚರ್ಯ.

ಹನ್ನೆರಡು (ದ್ವಾದಶ) ಅನುಪ್ರೇಕ್ಷೆಗಳು (ಇವಕ್ಕೆ ದ್ವಾದಶ ಭಾವನೆಗಳೆಂದೂ ಹೆಸರುಂಟು) : ೧ ಅನಿತ್ಯತ್ವ ಭಾವನೆ—ಸುಖ, ಆಯುಸ್ಸು, ಬಲ, ಸಂಪತ್ತು—ಇವೆಲ್ಲ ಅನಿತ್ಯವಾದವೆಂದು ಚಿಂತಿಸುವುದು. ೨ ಅಶರಣತ್ವ ಭಾವನೆ—ಹುಟ್ಟು ಸಾವು ಮುಪ್ಪುಗಳ ಭಯದಿಂದ ಯಾರೂ ತನ್ನನ್ನು ರಕ್ಷಿಸಲಾರರೆಂದು ಭಾವಿಸುವುದು. ೩ ಸಂಸಾರ ಭಾವನೆ—ಕರ್ಮ ಪರಿಪಾಕಹೊಂದಿ ಕಳಚಿಹೋಗುವವರೆಗೂ ಚತುರ್ಗತಿರೂಪವಾದ ಸಂಸಾರ ತಪ್ಪುವುದಿಲ್ಲವೆಂದು ಸಂಸಾರ ಸ್ವರೂಪವನ್ನು ಭಾವಿಸುವುದು. ೪ ಏಕತ್ವ ಭಾವನೆ—ತಾನು ಒಂಟಿ, ತನ್ನ ಇಹಪರ ಜೀವನವನ್ನು ರೂಪುಗೊಳಿಸುವವನೂ ಫಲ ಭೋಗಿಸುವವನೂ ತಾನೊಬ್ಬನೇ ಎಂದು ತನ್ನ ಒಂಟಿತನವನ್ನು ಭಾವಿಸುವುದು. ೫ ಅನ್ಯತ್ವ ಭಾವನೆ—ತಾನು ಬೇರೆ, ದೇಹ, ಧನ, ಬಂಧುಗಳು, ಎಲ್ಲ ಬೇರೆ ಎಂದು ಭಾವಿಸುವುದು. ೬ ಅಶೌಚ ಭಾವನೆ—ಶರೀರ ಅಶುಚಿಯೆಂಬುದನ್ನು ಭಾವಿಸುವುದು. ೭ ಅಸ್ರವ ಭಾವನೆ—ಪುಣ್ಯಪಾಪ ಕರ್ಮಗಳು ಹರಿದುಬಂದು ಹೊಸ ಬಂಧನಗಳನ್ನು ಉಂಟುಮಾಡುವುವೆಂಬುದನ್ನು ಭಾವಿಸುವುದು. ೮ ಸಂವರ ಭಾವನೆ—ಹಾಗೆ ಕರ್ಮ ಹರಿದು ಬರದಂತೆ ತಡೆಯುವ ಮಾರ್ಗಗಳನ್ನು ಭಾವಿಸುವುದು. ೯ ನಿರ್ಜರಾ ಭಾವನೆ—ಜೀವಕ್ಕೆ ಲೇಪಿಸಿರುವ ಕರ್ಮಗಳನ್ನು ತಪಸ್ಸಿನಿಂದ ಕ್ಷಯಗೊಳಿಸಬಹುದೆಂಬುದನ್ನು ಭಾವಿಸುವುದು. ೧೦ ಲೋಕ ಭಾವನೆ—ಲೋಕವೂ ಅದರಲ್ಲಿನ ಷಡ್ದ್ರವ್ಯಗಳೂ ಸ್ಥಿರವಾದವು; ಅದಕ್ಕೆ ಸೃಷ್ಟಿ ಕರ್ತನಿಲ್ಲ ಎಂದು ಲೋಕ ಸ್ವರೂಪವನ್ನು ಭಾವಿಸುವುದು.

೧೧ ಬೋಧಿದುರ್ಲಭತ್ವ ಭಾವನೆ—ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ ಚಾರಿತ್ರಗಳನ್ನು ಪಡೆಯುವುದು ಸುಲಭವಲ್ಲ, ಬಹು ಕಷ್ಟ ಎಂಬುದನ್ನು ಭಾವಿಸುವುದು. ೧೨ ಧರ್ಮ ಭಾವನೆ—ಜಿನಮಾರ್ಗದಲ್ಲಿ ನಡೆದು ಮುಕ್ತಿ ಪಡೆಯುವುದು ಪರಮ ಧರ್ಮವೆಂದು ಭಾವಿಸುವುದು.

ಇಪ್ಪತ್ತೆರಡು ಪರೀಷಹಗಳು : ಗುರಿಸಾಧಿಸುವಾಗ ಬರುವ ಹಸಿವು, ಬಾಯಾರಿಕೆ, ಮೊದಲಾದ ತೊಂದರೆಗಳು ಪರೀಷಹಗಳು. ಅವನ್ನು ಗೆಲ್ಲುವುದೇ ಪರೀಷಹ ಜಯ. ೧ ಹಸಿವು ಸಹಿಸುವುದು. ೨ ಬಾಯಾರಿಕೆ ತಡೆಯುವುದು. ೩ ಚಳಿ ಸಹಿಸುವುದು. ೪ ಬಿಸಿ ತಡೆಯುವುದು. ೫ ಸೊಳ್ಳೆ, ನೊಣ ಮೊದಲಾದವುಗಳ ಕಡಿತವನ್ನು ತಡೆದುಕೊಳ್ಳುವುದು. ೬ ಬಟ್ಟೆಯಿಲ್ಲದೆ ಬೆತ್ತಲೆಯಿರುವುದರಿಂದಾಗುವ ತೊಂದರೆಗಳನ್ನು ಸಹಿಸುವುದು. ೭ ಅರತಿ—ಅಪ್ರೀತಿಯ ಬಾಧೆಯನ್ನು ಸಹಿಸುವುದು. ೮ ಹೆಂಗಸರಿಂದಾಗುವ ಬಾಧೆಯನ್ನು ತಡೆದುಕೆಳ್ಳುವುದು (ಸ್ತ್ರೀಸಹವಾಸ ಬಿಡುವುದು). ೯ ಒಂದೇ ಕಡೆ ಹೆಚ್ಚು ಕಾಲ ನಿಲ್ಲದೆ ಸಂಚರಿಸುತ್ತಿರುವುದು; ಆಗ ಉಂಟಾಗುವ ಬಾಧೆಗಳನ್ನು ಸಹಿಸುವುದು. ೧೦ ಮಲಗುವ ಕಡೆ ಆಗುವ ತೊಂದರೆಯನ್ನು ಸಹಿಸುವುದು. ೧೧ ಕುಳಿತಿರುವಾಗ ಆಗುವ ತೊಂದರೆಗಳನ್ನು ತಡೆದುಕೊಳ್ಳುವುದು. ೧೨ ಬೈಗುಳನ್ನು ಸಹಿಸಿಕೊಳ್ಳುವುದು. ೧೩ ಹೊಡೆತವನ್ನು ಸಹಿಸುವುದು. ೧೪ ಯಾಚನೆಯಲ್ಲಿ ಆಗುವ ಕಷ್ಟನಿಷ್ಠುರಗಳನ್ನು ಸಹಿಸಿಕೊಳ್ಳುವುದು. ೧೫ ಬೇಡಿ ಭಿಕ್ಷೆ ಸಿಕ್ಕದಿದ್ದರೆ ಖೇದಪಡದೆ ಸಹಿಸುವುದು. ೧೬ ತನ್ನ ತಪಸ್ಸಿಗೆ ತಕ್ಕ ಮಹಿಮೆಗಳು ಕಾಣಿಸಿಕೊಳ್ಳದಿದ್ದರೂ ಅದನ್ನು ಸಹಿಸುವುದು. ೧೭ ರೋಗ ಬಂದರೆ, ದೇಹದ ಅನಿತ್ಯತೆಯನ್ನು ಭಾವಿಸಿ ಚಿಕಿತ್ಸೆ ಮಾಡಿಕೊಳ್ಳದೆ ಬಾಧೆಯನ್ನು ಸಹಿಸುವುದು. ೧೮ ಮುಳ್ಳು ಕಲ್ಲು ತಾಕಿದ ನೋವನ್ನು ಸಹಿಸುವುದು. ೧೯ ತನ್ನ ಪ್ರಜ್ಞೆಗೆ ಅಹಂಕಾರ ಪಡದೆ ಇರುವುದು. ೨೦ ತನಗೆ ಇನ್ನೂ ಉತ್ತಮ ಜ್ಞಾನ ಬರಲಿಲ್ಲವಲ್ಲಾ ಎಂದು ತನ್ನ ಅಜ್ಞಾನಕ್ಕೆ ಕೊರಗದಿರುವುದು. ೨೧ ಸೂಕ್ಷ್ಮ ಪ್ರಾಣಿಗಳಿಗೆ ತೊಂದರೆಯಾದೀತೆಂದು ಮೈತೊಳೆಯದೆ ಅದರಿಂದಾದ ಬಾಧೆಯನ್ನು ಸಹಿಸುವುದು. ೨೨ ಜನ ತನಗೆ ಪುರಸ್ಕಾರ ಮಾಡದಿದ್ದರೆ ತಾಳಿಕೊಳ್ಳುವುದು.

## ನಿರ್ಜರೆ

ಹೊಸ ಕರ್ಮ ಹರಿದು ಬರುವುದು ತಪ್ಪಿದರೂ ಆ ಮೊದಲೆ ಬಂದು ಜೀವಕ್ಕೆ ಅಂಟಿಕೊಂಡಿರುವ ಕರ್ಮ ಉಳಿದೇ ಇರುತ್ತದೆಯಷ್ಟೆ. ಆ ಕರ್ಮವೂ ಜೀರ್ಣವಾಗಿ ಕಳಚಿ ಬೀಳುವುದಕ್ಕೆ ನಿರ್ಜರೆ ಎಂದು ಹೆಸರು.

ಕರ್ಮ ತಕ್ಕ ಕಾಲ ಬಂದಾಗ ಪರಿಪಕ್ವವಾಗಿ ಅನುಭವಿಸಿದ ಬಳಿಕ ತಾನಾಗಿಯೇ ಸಹಜವಾಗಿ ಕಳಚಿ ಬೀಳುತ್ತದೆ. ಹೀಗೆ ಸಹಜವಾಗಿ ಕರ್ಮಕ್ಷಯವಾಗುವುದಕ್ಕೆ **'ಸವಿಪಾಕ ನಿರ್ಜರೆ'** ಎಂದು ಹೆಸರು. ಕರ್ಮ ತಾನಾ

ಗಿಯೇ ಪಕ್ವವಾಗಲು ಬಹು ಕಾಲ ಹಿಡಿಯಬಹುದು. ಆ ಅಪಕ್ವಕರ್ಮ ಗಳನ್ನು ತಪಸ್ಸಿನಿಂದ ಅವು ಸಹಜವಾಗಿ ಪರಿಪಕ್ವವಾಗುವ ಕಾಲಾವಧಿಗೆ ಮೊದಲೆ ಪಕ್ವವಾಗುವಂತೆ ಮಾಡಬಹುದು; ಮಾವಿನಕಾಯಿ ಮೊದಲಾದ ವನ್ನು ಆಡೆಹಾಕಿ ಹಣ್ಣುಮಾಡುವಂತೆ. ಹೀಗೆ ಪಕ್ವಗೊಳಿಸಿ ಅನುಭವಿಸಿ ಕರ್ಮಕ್ಷಯ ಮಾಡುವುದಕ್ಕೆ '**ಅವಿಪಾಕ ನಿರ್ಜರೆ**' ಎಂದು ಹೆಸರು.

ಕರ್ಮನಿರ್ಜರೆಗೆ ಸಾಧನವಾದ ತಪಸ್ಸು ಎರಡು ಬಗೆ: ೧ ಬಾಹ್ಯ ತಪಸ್ಸು, ೨ ಆಭ್ಯಂತರ ತಪಸ್ಸು.

ಬಾಹ್ಯ ತಪಸ್ಸು ಆರು: ೧ ಅನಶನ ತಪಸ್ಸು—ಆಹಾರವನ್ನೆ ತೆಗೆದುಕೊಳ್ಳದೆ ಉಪವಾಸ ಮಾಡುವುದು. (ಕೆಲವು ವೇಳೆ ಸಾಯುವ ವರೆಗೂ ಅನಶನವ್ರತ ತೊಟ್ಟು ಉಪವಾಸ ಮಾಡಿ ಮಡಿಯುತ್ತಾರೆ. ಇದಕ್ಕೆ 'ಸಲ್ಲೇಖನ' ವೆಂದು ಹೆಸರು). ೨ ಅವಮೋದರ ತಪಸ್ಸು—ಹೊಟ್ಟೆ ತುಂಬುವುದಕ್ಕೆ ಎಷ್ಟು ಬೇಕೋ ಅದಕ್ಕಿಂತ ಕಡಮೆ ತಿನ್ನುವುದು. ೩ ವೃತ್ತಿಸಂಖ್ಯಾನ ತಪಸ್ಸು—ಯಾವುದೋ ಒಂದು ರೀತಿಯಲ್ಲಿ ದೊರೆತರೆ ಮಾತ್ರ ಭಿಕ್ಷೆ ತೆಗೆದುಕೊಳ್ಳುವುದಾಗಿ ಮನಸ್ಸಿನಲ್ಲಿ ನಿರ್ಧರಿಸಿಕೊಂಡು ತನ್ನ ಭಿಕ್ಷಾವೃತ್ತಿಯನ್ನು ಸಂಕೋಚಪಡಿಸಿಕೊಳ್ಳುವುದು. ೪ ರಸತ್ಯಾಗ ತಪಸ್ಸು—ಹಾಲು ತುಪ್ಪ ಮೊದಲಾಗಿ ತನಗೆ ಇಷ್ಟವಾದ ಪದಾರ್ಥಗಳನ್ನು ತಿನ್ನದೆ ಬಿಡುವುದು. ೫ ಕಾಯ ಕ್ಲೇಶ ತಪಸ್ಸು—ಬಿಸಿಲು, ಚಳಿ, ಮಳೆ ಮೊದಲಾದವನ್ನು ಸಹಿಸಿ ಧ್ಯಾನ ಮಾಡುತ್ತ ದೇಹವನ್ನು ದಂಡಿಸುವುದು. ೬ ವಿವಿಕ್ತ ಶಯನಾಸನ ತಪಸ್ಸು—ಏಕಾಂತವಾಗಿ ಕೂರುವುದು ಮಲಗುವುದು.

ಅಭ್ಯಂತರ ತಪಸ್ಸು ಆರು: ೧ ಪ್ರಾಯಶ್ಚಿತ್ತ—ಮಾಡಿದ ತಪ್ಪನ್ನು ಹಿರಿಯರೆದು ರಿಗೆ ಒಪ್ಪಿಕೊಂಡು ಕ್ಷಮೆ ಬೇಡಿ ಅವರು ವಿಧಿಸಿದ ಶಿಕ್ಷೆಯನ್ನು ಸ್ವೀಕರಿಸಿ ಪರಿಹಾರ ಮಾಡಿಕೊಳ್ಳುವುದು. ೨ ವಿನಯ—ಜ್ಞಾನ ದರ್ಶನ ಚಾರಿತ್ರಗಳಲ್ಲಿ ತನಗಿಂತ ಮುಂದು ವರಿದವರಿಗೆ ವಿನೀತನಾಗಿ ವಂದಿಸುವುದು. ೩ ವೈಯಾವೃತ್ಯ—ಮುಪ್ಪಡಸಿದ, ಅಶಕ್ತ ರಾದ, ರೋಗಿಷ್ಠರಾದ ಸಾಧುಗಳಿಗೆ ಸೇವೆ ಮಾಡುವುದು; ದೀನಾನಾಥರನ್ನು ಸೇವಿಸು ವುದು. ೪ ಸ್ವಾಧ್ಯಾಯ—ಆಗಮ ಗ್ರಂಥಗಳನ್ನು ಓದಿಸಿ, ಕೇಳಿ, ಓದಿ, ತಿಳಿದು ಮನನಮಾಡುವುದು. ೫ ವ್ಯುತ್ಸರ್ಗ--ಶರೀರದಲ್ಲಿ ಮಮತೆಯನ್ನು ಬಿಟ್ಟು ಉಪೇಕ್ಷೆ ಯಿಂದಿರುವುದು. ೬ ಧ್ಯಾನ—ಧ್ಯಾನದಲ್ಲಿ (೧) ಅರ್ತಧ್ಯಾನ, (೨) ರೌದ್ರಧ್ಯಾನ, (೩) ಧರ್ಮಧ್ಯಾನ, (೪) ಶುಕ್ಲಧ್ಯಾನ ಎಂದು ನಾಲ್ಕು ಬಗೆ. ಇಷ್ಟ ವಸ್ತು ಹೋಯಿ ತೆಂದೂ ಅನಿಷ್ಟವಾದ್ದು ಬಂತೆಂದೂ ಭೋಗ ದೊರೆಯಲೆಂದೂ ದುಃಖ ಹೋಗಲೆಂದೂ ಸದಾ ಕೊರಗುತ್ತಿರುವುದು ಅರ್ತಧ್ಯಾನ. ಹಿಂಸೆಮಾಡುವುದು, ಸುಳ್ಳಾಡುವುದು, ಕದಿಯುವುದು, ತನ್ನದನ್ನು ರಕ್ಷಿಸಿಕೊಳ್ಳಲು ವಿಶೇಷ ಪ್ರಯತ್ನ ಮಾಡುವುದು, ಇವಕ್ಕಾಗಿ ರಾಗದ್ವೇಷಗಳಿಂದ ಸದಾ ಯೋಚಿಸುತ್ತಿರುವುದು ರೌದ್ರಧ್ಯಾನ. ಅರ್ತ ರೌದ್ರ ಧ್ಯಾನ

ಗಳೆರಡೂ ಕೆಟ್ಟವು; ಸಂಸಾರ ಕಾರಣಗಳು. ಈ ಎರಡನ್ನೂ ಬಿಟ್ಟು ಧರ್ಮವಿಷಯ ಗಳನ್ನು ಸದಾ ನೆನೆಯುತ್ತಿರುವುದು ಧರ್ಮಧ್ಯಾನ. ಧರ್ಮಧ್ಯಾನವನ್ನು ಮುಗಿಸಿ ಮುಕ್ತಿ ಹೊಂದುವುದನ್ನೆ ಕುರಿತು ಚಿಂತಿಸುವುದು ಶುಕ್ಲಧ್ಯಾನ (ಕಷಾಯ ಮಲಗ ಳಿಲ್ಲದೆ ಪರಿಶುದ್ಧವಾದದ್ದು). ಧರ್ಮ ಶುಕ್ಲಧ್ಯಾನಗಳೆರಡೂ ಶುಭಕಾರಿಗಳು. ಶುಕ್ಲ ಧ್ಯಾನ ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುತ್ತದೆ.

## ಮೋಕ್ಷ

ಘಾತಿ ಅಘಾತಿ ಕರ್ಮಗಳೆಲ್ಲವನ್ನೂ ಸಂಪೂರ್ಣವಾಗಿ ಕಳೆದುಕೊಂಡು ಜೀವ ಕರ್ಮಬಂಧನದಿಂದ ಬಿಡುಗಡೆ ಹೊಂದುವುದೇ ಮೋಕ್ಷ. ಕರ್ಮಬಂಧ ಕಳಚಿದ ಮೇಲೆ ಜೀವ ಅಜೀವದಿಂದ ಬೇರೆಯಾಗಿ ತನ್ನ ಸಹಜಸ್ಥಿತಿಯನ್ನು ಪಡೆಯುತ್ತದೆ; ಅನಂತಚತುಷ್ಟಯಗಳಿಂದ ಬೆಳಗುತ್ತದೆ. ಮುಕ್ತಜೀವ ಲೋಕಾಗ್ರದಲ್ಲಿರುವ ಶಾಶ್ವತ ಸುಖಾಸ್ಪದವಾದ ಸಿದ್ಧಶಿಲೆಯಲ್ಲಿ ನೆಲಸಿರುತ್ತದೆ. ಮುಕ್ತಜೀವಕ್ಕೆ ಮತ್ತೆ ಸಂಸಾರದ ಬಂಧನವಿಲ್ಲ.

## ರತ್ನತ್ರಯ

ಮೋಕ್ಷ ಪಡೆಯಲು ಸಾಧನವಾದ **ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ** ಮತ್ತು **ಸಮ್ಯಕ್ ಚಾರಿತ್ರ** — ಈ ಮೂರಕ್ಕೂ **ರತ್ನತ್ರಯ** (ಮೂರು ರತ್ನಗಳು) ಎಂದು ಹೆಸರು.

ಸಂಸಾರದಲ್ಲಿ ಅನಾದಿಕಾಲದಿಂದಲೂ ಬಂಧಿತವಾಗಿರುವ ಜೀವಕ್ಕೆ ಕವಿದಿರುವ ಮೋಹ ಕರಗಿದಲ್ಲದೆ ಸಮ್ಯಗ್‌ದರ್ಶನ ಹುಟ್ಟುವುದಿಲ್ಲ. ಭವ್ಯಜೀವಿಗೆ ಕಾಲ ಲಬ್ಧಿ ಒದಗಿದಾಗ ಗುರೂಪದೇಶ ದೊರೆತು ಸಮ್ಯಗ್‌ದರ್ಶನ (ಒಳ್ಳೆಯ ಕಾಣ್ಕೆ, ನಂಬುಗೆ) ಉಂಟಾಗುತ್ತದೆ. ಸಮ್ಯಗ್‌ದರ್ಶನದಿಂದ ಸಮ್ಯಗ್‌ಜ್ಞಾನ (ಒಳ್ಳೆಯ ತಿಳಿವಳಿಕೆ) ಬರಲು ಅವಕಾಶವಾಗುತ್ತದೆ. ಇವೆರಡರಿಂದಲೂ ಸಮ್ಯಕ್ ಚಾರಿತ್ರ (ಒಳ್ಳೆಯ ನಡವಳಿಕೆ) ದೃಢಗೊಳ್ಳುತ್ತದೆ. ಈ ಮೂರೂ ಒಟ್ಟಾಗಿ ಸ್ವರ್ಗಭೋಗಗಳನ್ನೂ ಮೋಕ್ಷಸುಖವನ್ನೂ ದೊರಕಿಸಿಕೊಡುತ್ತವೆ.

**ಸಮ್ಯಗ್ ದರ್ಶನ:** ಆಪ್ತರಾದ ತೀರ್ಥಂಕರರಲ್ಲಿಯೂ ಅವರು ಬೆಳಗಿರುವ ಆಗಮಗಳಲ್ಲಿಯೂ ಗುರುಗಳಲ್ಲಿಯೂ ಪೂರ್ಣವಾದ ನಂಬಿಕೆಯಿಡುವುದು; ಜೀವ ಮೊದಲಾದ ನವತತ್ತ್ವಗಳಲ್ಲಿ ಶ್ರದ್ಧೆಯಿಡುವುದು—ಈ ಬಗೆಯ ಸರಿಯಾದ ನಂಬಿಕೆಯೇ ಸಮ್ಯಕ್ ದರ್ಶನ.

ಈ ಶಮ್ಯಗ್‌ದರ್ಶನಕ್ಕೆ ಎಂಟು ಅವಯವಗಳುಂಟು: ೧ ಜಿನಮತದಲ್ಲಿ

ಸಂಶಯ ಪಡದಿರುವುದು. ೨ ಭೋಗಗಳನ್ನು ಬಯಸದಿರುವುದು. ೩ ದೇಹವನ್ನು ಪ್ರೀತಿಸದೆ, ದ್ವೇಷಿಸದೆ ಸಮಭಾವದಿಂದಿರುವುದು. ೪ ಮೂರು ಮೂಢತೆಗಳನ್ನು ಬಿಡುವುದು. ೫ ಪೂರ್ಣಶ್ರದ್ಧೆಯಿಲ್ಲದವರ ದೋಷಗಳನ್ನು ತಿದ್ದುವುದು. ೬ ಸಮ್ಯಕ್‌ದರ್ಶನದಲ್ಲಿ ಜೀವಿಗಳನ್ನು ನೆಲೆಗೊಳಿಸುವುದು. ೭ ಸಾಧುಗಳಲ್ಲಿ ವಾತ್ಸಲ್ಯವಿಡುವುದು. ೮ ಜೈನಧರ್ಮದ ಪ್ರಭಾವವನ್ನು ಬೆಳಗುವುದು.

ತನ್ನ ಕುಲ, ಜ್ಞಾತಿಗಳು, ಬಲ, ಸೌಂದರ್ಯ, ಜ್ಞಾನ, ಧನ, ಆಜ್ಞೆ, ತಪಸ್ಸು—ಇವುಗಳಿಗಾಗಿ ಅಹಂಕಾರ ಪಡದಿರುವುದು, ಶಾಂತಿಯಿಂದಿರುವುದು, ಭೂತದಯೆ, ಧರ್ಮಾನುರಾಗ—ಇವೂ ಸಮ್ಯಗ್‌ದರ್ಶನದ ಲಕ್ಷಣಗಳು.

**ಮೂಢತ್ರಯ :** (ಮೂರು ಮೂಢತೆಗಳು) : ೧ ದೇವತಾಮೂಢ—ತನಗೆ ಮೇಲುಂಟಾಗುವುದೆಂದು ಮಿಥ್ಯಾ ದೇವತೆಗಳನ್ನು ಪೂಜಿಸುವುದು. ೨ ಲೋಕಮೂಢ —ಎಲ್ಲ ಸ್ಥಳಗಳೂ ಒಂದೇ ಸಮ; ಪವಿತ್ರತೆಯಲ್ಲಿ ಹೆಚ್ಚು ಕಡಮೆಯಿಲ್ಲ. ಹೀಗಿರುವಲ್ಲಿ ಗಂಗಾಸ್ನಾನಾದಿಗಳಿಂದ ಪಾಪ ಪರಿಹಾರವಾಗುವುದೆಂಬ ಮಿಥ್ಯಾ ಕ್ಷೇತ್ರಗಳ ನಂಬಿಕೆ. ೩ ಪಾಷಂಡಿ ಮೂಢ—ಮಿಥ್ಯಾ ಗುರುಗಳನ್ನು ನಂಬುವುದು.

ಸಮ್ಯಗ್‌ದರ್ಶನ ತಾನಾಗಿಯೇ ಬರಬಹುದು ಅಥವಾ ಇತರರ ಬೋಧನೆಯಿಂದಲಾದರೂ ಬರಬಹುದು.

**ಸಮ್ಯಗ್‌ಜ್ಞಾನ:** ಸಮ್ಯಗ್‌ದರ್ಶನದಿಂದ ಕಂಡು ಗ್ರಹಿಸಿದ್ದನ್ನು ಸ್ವಲ್ಪವೂ ಸಂಶಯವುಳಿಯದಂತೆ ಬುದ್ಧಿಯಿಂದ ಚೆನ್ನಾಗಿ ತಿಳಿದು, ಜೀವಾದಿ ಪದಾರ್ಥಗಳ ಸ್ವರೂಪವನ್ನು ಯಥಾವತ್ತಾಗಿ ಅರಿತುಕೊಳ್ಳುವುದು ಸಮ್ಯಗ್‌ಜ್ಞಾನ.

ಸಮ್ಯಗ್‌ಜ್ಞಾನದಲ್ಲಿ ಐದು ಬಗೆ: ೧ ಮತಿಜ್ಞಾನ, ೨ ಶ್ರುತಜ್ಞಾನ, ೩ ಅವಧಿಜ್ಞಾನ, ೪ ಮನಃಪರ್ಯಯಜ್ಞಾನ, ೫ ಕೇವಲಜ್ಞಾನ.

ಇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ಪಡೆಯುವ ಜ್ಞಾನಕ್ಕೆ **ಮತಿಜ್ಞಾನ**ವೆಂದು ಹೆಸರು. ಓದಿ, ಕೇಳಿ, ತಿಳಿದ ಜ್ಞಾನಕ್ಕೆ **ಶ್ರುತಜ್ಞಾನ**ವೆಂದು ಹೆಸರು. ಮತಿಜ್ಞಾನದ ಆಧಾರದ ಮೇಲೆ ಆ ಮತಿಜ್ಞಾನಕ್ಕೆ ನೇರವಾಗಿ ವಿಷಯವಾಗಿರದ ಬೇರೆ ಬೇರೆ ವಸ್ತುಗಳ ಸಂಗತಿಯನ್ನು ತಿಳಿದುಕೊಳ್ಳುವ ಅರಿವು **ಶ್ರುತಜ್ಞಾನ.** ಉದಾಹರಣೆಗೆ: ಕಣ್ಣೆದುರಿಗೆ ಜರುಗುತ್ತಿರುವ ಒಂದು ಗ್ರಹಣದ ವಿಷಯವನ್ನು ತಿಳಿದುಕೊಳ್ಳುವುದು ಮತಿಜ್ಞಾನದಿಂದ. ಹಿಂದೆ ಒಂದಾನೊಂದು ಕಾಲದಲ್ಲಿ ಆದ ಅಥವಾ ಮುಂದೆ ಒಂದು ಕಾಲದಲ್ಲಿ ಬರುವ ಗ್ರಹಣದ ವಿಷಯವನ್ನು ಅರಿತುಕೊಳ್ಳುವುದು ಶ್ರುತಜ್ಞಾನದಿಂದ. ಶ್ರುತ

ಜ್ಞಾನ ಜೈನರಿಗೆ ವೇದದಂತಿರುವ ಅಂಗಶಾಸ್ತ್ರಗಳನ್ನೊ ಇತರ ಧರ್ಮಗ್ರಂಥ ಗಳನ್ನೊ ಅಭ್ಯಾಸಮಾಡುವುದರಿಂದ ಉಂಟಾಗುತ್ತದೆ. ಕಾಲದೇಶಗಳು ಎಷ್ಟೇ ದೂರವಾಗಿದ್ದರೂ ಅಲ್ಲಿನ ವಿಷಯಗಳನ್ನೆಲ್ಲ (ಕೆಲವು ಮಿತಿಗಳಿಗೊಳ ಪಟ್ಟು) ತಿಳಿಯುವುದಕ್ಕೆ **ಅವಧಿಜ್ಞಾನ** ಎಂದು ಹೆಸರು. ಹಿಂದೆ ನಡೆದ, ಮುಂದೆ ನಡೆಯುವ ಸಂಗತಿಗಳನ್ನೂ ಬೇರೆ ಸ್ಥಳದಲ್ಲಿನ ಸಂಗತಿಗಳನ್ನೂ ಈ ಅವಧಿಜ್ಞಾನದಿಂದ ತಿಳಿಯಬಹುದು. ಇದು ದೇವನಾರಕರಿಗೆ ಸಹಜ ವಾಗಿರುತ್ತದೆ. ಹೀಗೆ ಸಹಜವಾಗಿ ಬರುವ ಅವಧಿಜ್ಞಾನಕ್ಕೆ **ಭವಪ್ರತ್ಯಯು ಜ್ಞಾನ** ಎಂದು ಹೆಸರು. ಮನುಷ್ಯರು ಕರ್ಮಕ್ಷಯ ಮಾಡಿಕೊಂಡು ಈ ಅವಧಿಜ್ಞಾನವನ್ನು ಸಂಪಾದಿಸಬಹುದು. ಇತರರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವ ಜ್ಞಾನಕ್ಕೆ **ಮನಃಪರ್ಯಯಜ್ಞಾನ** ಎಂದು ಹೆಸರು. ಮನಸ್ಸು ಮಾತು ಮೈಗಳನ್ನು ಹಿಡಿತದಲ್ಲಿಟ್ಟುಕೊಂಡಿರುವ ಸಂಯಮಿಗಳಿಗೆ ಈ ಮನಃಪರ್ಯಯಜ್ಞಾನ ಲಭಿಸುತ್ತದೆ. ಪರಿಶುದ್ಧವಾದ, ಪರಿಪೂರ್ಣವಾದ ಮತ್ತು ಸರ್ವ ವ್ಯಾಪಿಯಾದ ಅನಂತಜ್ಞಾನವೇ **ಕೇವಲಜ್ಞಾನ.** ಇದಕ್ಕೆ ಹೊರತಾದ ವಿಷಯವಿಲ್ಲ. ಇದರಲ್ಲಿ ಸ್ವಲ್ಪವೂ ಕುಂದುಕೊರತೆಗಳಿಲ್ಲ. ಕರ್ಮ ಬಂಧನವನ್ನು ಕಳಚಿ ಬಿಸುಟ ಮುಕ್ತಜೀವಕ್ಕೆ ಸಹಜವಾಗಿರುವುದು ಈ ಕೇವಲಜ್ಞಾನ.

**ಸಮ್ಯಕ್ ಚಾರಿತ್ರ :** ಸಮ್ಯಗ್‌ದರ್ಶನದಿಂದ ಕಂಡು ಸಮ್ಯಗ್ ಜ್ಞಾನ ದಿಂದ ತಿಳಿದುಕೊಂಡದ್ದನ್ನು ಆಚರಣೆಗೆ ತರುವುದು, ತನಗೆ ದೊರೆತ ಸರಿಯಾದ ತಿಳಿವಿಗೆ ತಕ್ಕಂತೆ ನಡೆಯುವುದು **ಸಮ್ಯಕ್ ಚಾರಿತ್ರ.** ಇದೇ ಸದಾಚಾರ. "ಅರಿವು ನಡತೆಗಳಲ್ಲಿ ಅಶುಭವಾದ್ದನ್ನು ಬಿಟ್ಟು ಶುಭವಾದ್ದನ್ನು ಹಿಡಿಯು ವುದು, ವ್ರತ ಸಮಿತಿ ಗುಪ್ತಿಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವುದು—ಇದು ವ್ಯಾವಹಾರಿಕವಾದ ಸಮ್ಯಕ್ ಚಾರಿತ್ರ. ಆದರೆ, ಸಂಸಾರಕ್ಕೆ ಯಾವುದು ಕಾರಣವೋ ಅದನ್ನು ಸಂಪೂರ್ಣವಾಗಿ ನಾಶಮಾಡುವುದಕ್ಕಾಗಿ ಬಾಹ್ಯ ಮತ್ತು ಅಭ್ಯಂತರ ಕ್ರಿಯೆಗಳನ್ನೆಲ್ಲ ತಡೆಯುವುದು ಜಿನರು ಹೇಳಿರುವ ಪರಮೋ ತ್ತಮವಾದ ಸಮ್ಯಕ್ ಚಾರಿತ್ರ."

## ಜೈನ ಗೃಹಸ್ಥರು

ಜೈನ ಗೃಹಸ್ಥರಲ್ಲಿ ಗಂಡಸರನ್ನು **ಶ್ರಾವಕ, ಉಪಾಸಕ** ಎನ್ನುತ್ತಾರೆ; ಹೆಂಗಸರನ್ನು **ಶ್ರಾವಿಕೆ, ಉಪಾಸಿಕೆ** ಎನ್ನುತ್ತಾರೆ. ವೈರಾಗ್ಯಹೊಂದಿ

ಸಂನ್ಯಾಸದೀಕ್ಷೆ ವಹಿಸಿದ ಗಂಡಸರನ್ನು **ನಿರ್ಗ್ರಂಥ, ಸಾಧು** ಎಂದೂ, ಹೆಂಗಸರನ್ನು **ನಿರ್ಗ್ರಂಥೀ, ಸಾಧ್ವೀ** ಎಂದೂ ಕರೆಯುತ್ತಾರೆ. ಸಾಧುಗಳನ್ನು **ಮುನಿ**ಗಳೆಂದೂ ಸಾಧ್ವಿಯರನ್ನು **ಆರ್ಯಿಕೆ**ಯರೆಂದೂ ಕರೆಯುವುದುಂಟು.

ಇವರಲ್ಲಿ ಸಂನ್ಯಾಸಿಗಳು ಅನುಸರಿಸಬೇಕಾದ ಆಚಾರ ಬಹು ಕಟ್ಟುನಿಟ್ಟಾದ್ದು, ಕಠಿನವಾದ್ದು. ಗೃಹಸ್ಥರ ಆಚಾರ ಅಷ್ಟು ಕಠಿನವಲ್ಲ, ಸುಲಭ.

ಜೈನ ಗೃಹಸ್ಥರಲ್ಲಿ ವ್ರತಾಚರಣೆಗಳ ತಾರತಮ್ಯದಿಂದ ಹನ್ನೊಂದು ಭೇದಗಳುಂಟು. ಈ ಹನ್ನೊಂದು ನೆಲೆಗಳಿಗೆ **ಏಕಾದಶ ನಿಳಯಗಳು** (ಸ್ಥಾನಗಳು) ಎಂದು ಹೆಸರು.

ಅವು ಯಾವುವೆಂದರೆ:— ೧ ದರ್ಶನ—ಜೈನ ಗೃಹಸ್ಥನಿಗೆ ಜೈನ ಧರ್ಮದಲ್ಲಿ ಪೂರ್ಣ ಶ್ರದ್ಧೆಯೂ ಸರಿಯಾದ ತಿಳಿವಳಿಕೆಯೂ ಇರಬೇಕು. ೨ ವ್ರತಗಳು—ಆತ ಐದು ಅಣುವ್ರತಗಳು, ಮೂರು ಗುಣ ವ್ರತಗಳು, ನಾಲ್ಕು ಶಿಕ್ಷಾ ವ್ರತಗಳು—ಈ ಹನ್ನೆರಡು ವ್ರತಗಳನ್ನು ನಡಸಬೇಕು. [(೧–೫) ಸಂನ್ಯಾಸಿಗಳಂತೆ ಸಂಕಲ್ಪ ಪೂರ್ವಕವಾಗಿ ಬಹು ಸೂಕ್ಷ್ಮವಾಗಿ ಆಚರಿಸದೆ ಸ್ಥೂಲವಾಗಿ ಆಚರಿಸುವ ಅಹಿಂಸೆ, ಸತ್ಯ ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ—ಈ ಐದು ವ್ರತಗಳು **ಅಣುವ್ರತಗಳು.** ಗೃಹಸ್ಥರ ವಿಷಯದಲ್ಲಿ ಪರಸ್ತ್ರೀ ಪರಪುರುಷ ಸಂಗ ಮಾಡದಿರುವುದು ಬ್ರಹ್ಮಚರ್ಯ ವ್ರತ; ತನಗೆ ಬೇಕಾದ್ದಕ್ಕಿಂತ ಹೆಚ್ಚು ವಸ್ತುಗಳನ್ನು ಸಂಗ್ರಹಿಸದಿರುವುದು ಅಪರಿಗ್ರಹ ವ್ರತ. (೬–೮) ದಿಗ್ವ್ರತ—ತಾನು ಇಂಥ ದಿಕ್ಕಿಗೆ ಮಾತ್ರ ಹೋಗುವುದೆಂದು ಗೊತ್ತುಪಡಿಸಿಕೊಳ್ಳುವುದು; ದೇಶವ್ರತ—ಇಂಥ ಸ್ಥಳಕ್ಕೆ ಮಾತ್ರ ಹೋಗುವುದೆಂದು ನೇರೆ ಗೊತ್ತುಪಡಿಸಿಕೊಳ್ಳುವುದು; ದಂಡವಿರತಿವ್ರತ—ಕಠಿನ ದಂಡನೆ ಮಾಡದಿರುವುದು. ಈ ಮೂರು **ಗುಣವ್ರತಗಳು.** ತನ್ನ ಪ್ರತಿದಿನದ ಕೆಲಸ, ಊಟ, ಅನುಭೋಗಗಳನ್ನು ಮಿತಪಡಿಸಿಕೊಳ್ಳುವುದು ಎಂದೂ ಹೇಳುತ್ತಾರೆ. (೯–೧೨) ಸಮತೆ ಅಥವಾ ಸಾಮಾಯಿಕ (ಪ್ರತಿದಿನವೂ ಬೆಳಗ್ಗೆ, ಮಧ್ಯಾಹ್ನ, ಸಂಜೆ—ಈ ಮೂರು ಹೊತ್ತೂ ಆತ್ಮಧ್ಯಾನ ಮಾಡುವುದು), ಪ್ರೋಷಧವ್ರತ (ಪಕ್ಷಕ್ಕೊಂದು ಸಲ ಉಪವಾಸ ಮಾಡುವುದು), ಅತಿಥಿ ಸಂಗ್ರಹ (ಅತಿಥಿಗಳಿಗೆ ಆಹಾರ ಕೊಡುವುದು), ಮರಣ ಕಾಲದಲ್ಲಿ ಸಂನ್ಯಾಸ ಸ್ವೀಕರಿಸುವುದು—ಈ ನಾಲ್ಕು ಶಿಕ್ಷಾವ್ರತಗಳು]. ೩ ಸಾಮಾಯಿಕ. ೪ ಪ್ರೋಷಧವ್ರತ. ೫ ಸಚಿತ್ತತ್ಯಾಗ—ಚಿತ್ತವುಳ್ಳ ವಸ್ತುಗಳನ್ನು ಸೇವಿಸದಿರುವುದು. (ಹೊಸ ಕಾಯಿಪಲ್ಯಗಳಲ್ಲಿ ಜೀವವಿರುವುದರಿಂದ ಅವನ್ನು ತಿನ್ನಕೂಡದು). ೬ ಹಗಲು ಸ್ತ್ರೀಸಂಗ ಮಾಡದಿರುವುದು (ರಾತ್ರಿ ಭುಕ್ತತ್ಯಾಗ—ರಾತ್ರಿ ಊಟ ಮಾಡದಿರುವುದು ಎಂದೂ ಹೇಳುತ್ತಾರೆ). ೭ ಬ್ರಹ್ಮಚರ್ಯ. ೮ ಆರಂಭತ್ಯಾಗ—ಜೀವ ಹಿಂಸೆಯಾಗುವ ಐಹಿಕ ವೃತ್ತಿಗಳನ್ನು ಅವಲಂಬಿಸದಿರುವುದು. ೯–೧೧ ಪರಿಗ್ರಹತ್ಯಾಗ,

ಅನುಮತಿ ತ್ಯಾಗ, ಉದ್ದಿಷ್ಟ ತ್ಯಾಗ—ಈ ಮೂರು ನೆಲೆಗಳಲ್ಲಿ ಗೃಹಸ್ಥ ಐಹಿಕ ಆಸಕ್ತಿಯನ್ನು ಕ್ರಮಕ್ರಮವಾಗಿ ತೊರೆಯುತ್ತ ಯಾವುದಾದರೂ ಪ್ರಶಾಂತ ಸ್ಥಳಕ್ಕೆ ಹೋಗಿ ನೆಲಸಿ ತತ್ತ್ವಜ್ಞಾನ ಪಡೆದು ಸಾಧುವಾಗುತ್ತಾನೆ.

### ಪಂಚ ಪರಮೇಷ್ಠಿಗಳು

**ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು**—ಈ ಐವರು ಪಂಚಪರಮೇಷ್ಠಿಗಳು ಎಂದರೆ ಪರಮೇಶ್ವರರು. ಜೈನರು ಪೂಜಿಸುವುದು, ಪ್ರಾರ್ಥಿಸುವುದು ಈ ಪಂಚ ಪರಮೇಷ್ಠಿಗಳನ್ನೆ.

ತಪಸ್ಸಿನಿಂದ ಘಾತಿಕರ್ಮಗಳನ್ನೆಲ್ಲ ನಾಶಮಾಡಿ ಕೇವಲಜ್ಞಾನ ಪಡೆದು ಜೀವನ್ಮುಕ್ತರಾದವರಿಗೆ **ಸಯೋಗ ಕೇವಲಿಗಳೆಂದು** ಹೆಸರು. ಹೀಗೆ ಕೇವಲಿಗಳಾಗಿ ದೇಹದಿಂದ ಕೂಡಿರುವವರೇ **ಅರ್ಹಂತರು.** ಅಘಾತಿಕರ್ಮಗಳನ್ನೂ ನಾಶಮಾಡಿ ದೇಹವನ್ನು ಬಿಟ್ಟು ಸಿದ್ಧ ಶಿಲೆಗೆ ಹೋಗಿ ಶಾಶ್ವತ ಸುಖದಲ್ಲಿ ನೆಲಸಿದವರು **ಅಯೋಗ ಕೇವಲಿಗಳು.** ಅವರೇ **ಸಿದ್ಧರು.** ಸಿದ್ಧರಲ್ಲಿ ತಾವು ಮಾತ್ರ ಸಿದ್ಧಿಯನ್ನು ಸಾಧಿಸಿಕೊಂಡವರು ಸಾಮಾನ್ಯ ಸಿದ್ಧರು. ತಾವು ದೇಹವನ್ನು ಧರಿಸಿದ್ದಾಗ ಧರ್ಮಬೋಧೆ ಮಾಡಿ ಇತರರ ಸಿದ್ಧಿಗೂ ನೆರವಾದವರು **ತೀರ್ಥಂಕರ ಸಿದ್ಧರು.** ಸಂಸಾರದುಃಖವನ್ನು ದಾಟಲು ತಮ್ಮ ಧರ್ಮಬೋಧೆಯೆಂಬ ತೀರ್ಥವನ್ನು, ದಾಟುವ ದಾರಿಯನ್ನು (ಹಾಯ್ಗಡವನ್ನು) ಮಾಡಿದವರಾದ್ದರಿಂದ ಇವರು **ತೀರ್ಥಂಕರರು.** (ಶ್ರಾವಕ, ಶ್ರಾವಿಕೆ, ಸಾಧು, ಸಾಧ್ವೀ ಎಂಬ ನಾಲ್ಕು ಬಗೆಯ ಜೈನ ಸಂಘಕ್ಕೂ ತೀರ್ಥಗಳೆಂದು ಹೆಸರು. ಅಂಥ ತೀರ್ಥವನ್ನು ಮಾಡಿದವರಾದ್ದರಿಂದ ತೀರ್ಥಂಕರರು ಎಂದೂ ಹೇಳುತ್ತಾರೆ). ಸಂಸಾರವನ್ನು ದಾಟಿರುವ ಈ ಸಿದ್ಧರು ಎಂಟು ದೋಷಗಳನ್ನು ದೂರೀಕರಿಸಿದವರು; ಎಂಟು ಗುಣಗಳಿಂದ ಕೂಡಿದವರು; ಅಮೂರ್ತರು; ತಮ್ಮ ಕೊನೆಯ ಶರೀರಕ್ಕೆ ಸಮಾನವಾದ ಆಕಾರವುಳ್ಳವರು; ಅನಂತರರು; ಶಾಶ್ವತರು ; ಅನಂತ ಚತುಷ್ಟಯಗಳಿಂದ ಬೆಳಗುವವರು.

### ಷೋಡಶ ಭಾವನೆಗಳು

ಮುಂದೆ ತೀರ್ಥಂಕರನಾಗುವ ತಪಸ್ವಿ ತಾನು ತೀರ್ಥಂಕರನಾಗಬೇಕೆಂಬ ಉದ್ದೇಶದಿಂದ ಕೆಲವು ಕರ್ಮಗಳನ್ನು ಮಾಡಿ ತೀರ್ಥಂಕರತ್ವವನ್ನು ತರುವ ಪುಣ್ಯವನ್ನು ಬಂಧಿಸಿಕೊಂಡು ಸತ್ತು ಸ್ವರ್ಗದಲ್ಲಿ ದೇವನಾಗಿ ಮತ್ತೆ ಮನುಷ್ಯನಾದಾಗ ತೀರ್ಥಂಕರನಾಗುತ್ತಾನೆ. ಹೀಗೆ ತೀರ್ಥಂಕರತ್ವವನ್ನು ಸಾಧಿಸಿಕೊಡುವುವೇ ಷೋಡಶ (ತೀರ್ಥಂ

ಕರತ್ವ ನಾಮಕರ್ಮ) ಭಾವನೆಗಳು. ಅವು ಯಾವುವೆಂದರೆ:—

೧ ದರ್ಶನವಿಶುದ್ಧಿ—ಸಮ್ಯಗ್‌ದರ್ಶನವನ್ನು ದೋಷರಹಿತವಾಗಿ ಪಾಲಿಸಲು ಸದಾ ಚಿಂತನೆ ಮಾಡುವುದು. ೨ ವಿನಯಸಂಪನ್ನತೆ—ವಿನಯವನ್ನು ನೆಲೆಗೊಳಿಸುವ ಭಾವನೆ. ೩ ಶೀಲವ್ರತೇಷ್ವನತಿಚಾರ:—ಅಹಿಂಸೆ, ಕ್ರೋಧವರ್ಜನ ಮುಂತಾದ ಶೀಲ ಗಳಲ್ಲಿಯೂ ವ್ರತಗಳಲ್ಲಿಯೂ ದೋಷ ಬರದಂತೆ ಭಾವಿಸುವುದು. ೪ ಅಭೀಕ್ಷ್ಣ ಜ್ಞಾನೋಪಯೋಗಃ—ಪ್ರತಿ ಕ್ಷಣವೂ ಸಮ್ಯಗ್‌ದರ್ಶನದ ಉಪಯೋಗವನ್ನು ಭಾವಿ ಸುವುದು. ೫ ಸಂವೇಗ—ಧರ್ಮಾನುರಾಗ, ಸಂಸಾರಭೋಗಗಳಲ್ಲಿ ವೈರಾಗ್ಯ. ೬ ಶಕ್ತಿತಃ ತ್ಯಾಗಃ—ಶಕ್ತಿ ಉಳಿಸಿಕೊಳ್ಳದೆ ತ್ಯಾಗ(ದಾನ)ಮಾಡಲು ಭಾವಿಸುವುದು. ೭ ಶಕ್ತಿತಃ ತಪಃ—ಶಕ್ತಿ ಉಳಿಸಿಕೊಳ್ಳದೆ ತಪಸ್ಸು ಮಾಡಲು ಭಾವಿಸುವುದು. ೮ ಸಾಧು ಸಮಾಧಿ—ಸಾಧುಗಳ ತಪಸ್ಸಿಗೆ ವಿಘ್ನಗಳುಂಟಾದರೆ ಅವನ್ನು ದೂರಮಾಡು ವುದು. ೯ ವೈಯಾವೃತ್ಯಕರಣ—ಗುಣವಂತರ ಕಷ್ಟಗಳನ್ನು ನಿರ್ದುಷ್ಟರೀತಿಯಿಂದ ಪರಿಹಾರ ಮಾಡುವುದು. ೧೦ ಅರ್ಹದ್ಭಕ್ತಿ—ಅರ್ಹಂತರ ಗುಣಗಳನ್ನು ಭಾವಶುದ್ಧಿ ಯಿಂದ ಸ್ಮರಿಸುವುದು, ಸ್ತುತಿಸುವುದು, ಪೂಜಿಸುವುದು. ೧೧ ಆಚಾರ್ಯ ಭಕ್ತಿ. ೧೨ ಉಪಾಧ್ಯಾಯ ಭಕ್ತಿ. ೧೩ ಪ್ರವಚನ ಭಕ್ತಿ—ಜಿನವಾಣಿಯಲ್ಲಿ ಭಕ್ತಿಯಿಟ್ಟು ಅದನ್ನು ಗ್ರಹಿಸುವುದು. ೧೪ ಅವಶ್ಯಕಾಪರಿಹಾಣಿ—ಮುನಿಯಾಗಲಿ ಶ್ರಾವಕನಾಗಲಿ ತನ್ನ ನಿತ್ಯದ ಅವಶ್ಯಕ ಕ್ರಿಯೆಗಳನ್ನು ಬಿಡದೆ ಮಾಡುತ್ತಿರುವುದು [ಅವಶ್ಯಕ ಕ್ರಿಯೆ ಗಳು: ಮುನಿಗಳಿಗೆ—೧ ಸಾಮಾಯಿಕ, ೨ ತೀರ್ಥಂಕರ ಸ್ತವನ, ೩ ಪಂಚ ಪರಮೇಷ್ಠಿ ವಂದನ, ೪ ಪ್ರತಿಕ್ರಮಣ (ತಪ್ಪೊಪ್ಪಿಕೆ—ತನ್ನ ತಪ್ಪನ್ನು ಹೇಳಿಕೊಳ್ಳುವುದು), ೫ ಪ್ರತ್ಯಾಖ್ಯಾನ (ಮುಂದೆ ದೋಷವುಂಟಾಗದಂತೆ ಮುಂಜಾಗ್ರತೆಯಿಂದಿರುವುದು), ೬ ಕಾಯೋತ್ಸರ್ಗ (ದೇಹಾಭಿಮಾನವನ್ನು ಬಿಟ್ಟು ಆತ್ಮಧ್ಯಾನದಲ್ಲಿರುವುದು). ಶ್ರಾವಕ ರಿಗೆ—ದೇವಪೂಜೆ, ಗುರುಭಕ್ತಿ, ಸ್ವಾಧ್ಯಾಯ, ಸಂಯಮ, ತಪಸ್ಸು, ದಾನ]. ೧೫ ಮಾರ್ಗ ಪ್ರಭಾವನೆ—ಮೋಕ್ಷಮಾರ್ಗದ ವೃದ್ಧಿಯನ್ನು ಭಾವಿಸುವುದು. ೧೬ ಪ್ರವ ಚನ ವತ್ಸಲತ್ವ—ಸಧರ್ಮೀಯರಲ್ಲಿ ವಾತ್ಸಲ್ಯ ಇಡುವುದು.

ಅರ್ಹಂತರಿಗಿಂತ ಕೇವಲಿಗಳಿಗಿಂತ ಕೆಳಮೆಟ್ಟಲಿನಲ್ಲಿರುವವರು ಆಚಾ ರ್ಯರು. ಇವರು ಮೂವತ್ತಾರು ಗುಣಗಳಿಂದ ಕೂಡಿದವರಾಗಿ ಲೋಕ ಕಾರುಣ್ಯದಿಂದ ಶಿಷ್ಯರಿಗೆ ಧರ್ಮಬೋಧೆ ಮಾಡಿ ಅವರ ಆಚಾರಗಳನ್ನು ತಿದ್ದಿ ದಾರಿದೋರುವವರು.

ಆಚಾರ್ಯರಿಗಿಂತ ಕೆಳಗಿನ ಮೆಟ್ಟಲಿನಲ್ಲಿರುವವರು ಉಪಾಧ್ಯಾಯರು. ಜೈನಾಗಮಗಳನ್ನು ಚೆನ್ನಾಗಿ ಅರಿತು ಭವ್ಯರಿಗೆ ತಿಳಿಯಹೇಳುವ ಸಾಮರ್ಥ್ಯ ವುಳ್ಳವರು.

ಉಳಿದ ಸಾಮಾನ್ಯ ಸಂನ್ಯಾಸಿಗಳೆಲ್ಲ ಸಾಧುಗಳು. ಇವರು ದಯಾವಂತರು;

ಮಹಾ ವ್ರತಗಳನ್ನು ಧರಿಸಿದವರು; ಚಾರಿತ್ರಗಳನ್ನೂ ಆವಶ್ಯಕಗಳನ್ನೂ ಹಲವು ಶೀಲಗಳನ್ನೂ ನಡಸುವವರು.

"ಶಿವಪದ ಪರ್ಯಂತಂಬರಮಮೋಘಮುದ್ಧರಿಸುಗೆ ಅರ್ಹತ್‌ಸಿದ್ಧಾಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ" ಎಂದು ಪಂಪ ಆದಿಪುರಾಣದ ಮೊದಲಿನಲ್ಲಿ ಮಂಗಳ ಮಾಡಿದ್ದಾನೆ. ಸಮಸ್ತ ಜೈನರೂ ಈ ಪಂಚ ಪರಮೇಷ್ಠಿಗಳ ನಮಸ್ಕಾರದಿಂದಲೆ ತಮ್ಮ ಕಾರ್ಯಗಳನ್ನು ಪ್ರಾರಂಭಿಸುತ್ತಾರೆ.

**ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ** (ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವ ಸಾಧುಗಳಿಗೂ ನಮಸ್ಕಾರ)—ಇದು ಪಂಚ (ಪರಮೇಷ್ಠಿಗಳ) ನಮಸ್ಕಾರ ಮಂತ್ರ. ಇದು ಸರ್ವ ಮಂಗಳಗಳಿಗೂ ಮೊದಲ ಮಂಗಳವೆಂದು ನಂಬುತ್ತಾರೆ. ಈ ನಮಸ್ಕಾರ ಮಂತ್ರ ಜೈನರ ಗಾಯತ್ರಿ ಎನ್ನಬಹುದು.

## ಲೋಕಾಕಾರ

ಆಕಾಶದ ಮಧ್ಯದಲ್ಲಿ ಲೋಕವಿದೆ. ಎಲ್ಲ ಜಿವಾಜೀವಗಳ ಪರಿವರ್ತನೆಗಳಿಗೂ ಇದೇ ನೆಲೆ. ಲೋಕಕ್ಕೆ ಆದಿಯಿಲ್ಲ, ಅಂತ್ಯವಿಲ್ಲ. ಅದು ಯಾರೂ ಮಾಡಿದ್ದಲ್ಲ.

ಲೋಕದ ಆಕಾರ ಕಿಸುಗಾಲು ಹಾಕಿ ಸೊಂಟದ ಮೇಲೆ ಕೈಯಿಟ್ಟು ನಿಂತಿರುವ ಮನಷ್ಯನನ್ನು ಹೋಲುವುದು. ಈ ಲೋಕದ ಕೆಳಭಾಗ ವೇತ್ರಾಸನ(ಬೆತ್ತದ ಪೀಠ)ದಂತೆಯೂ ಮಧ್ಯಭಾಗ ಝಲ್ಲರಿಯಂತೆಯೂ ಮೇಲುಭಾಗ ಮೃದಂಗದಂತೆಯೂ ಇದೆ. (ನಕ್ಷೆ ೧ ನೋಡಿ)

ಲೋಕ ಪೂರ್ವ ಪಶ್ಚಿಮ ೭ ರಜ್ಜು, ದಕ್ಷಿಣೋತ್ತರ ೭ ರಜ್ಜು ಮತ್ತು ೧೪ ರಜ್ಜು ಎತ್ತರವುಳ್ಳದ್ದಾಗಿದೆ. ಇದರ ಒಟ್ಟು ಪ್ರಮಾಣ ೩೪೩ ಘನರಜ್ಜುಗಳು. (ರಜ್ಜು ಎಂಬುದು ಮನಸ್ಸು ಗ್ರಹಿಸಲಾರದಷ್ಟು ದೊಡ್ಡದಾದ ಒಂದು ಅಳತೆ)

ಲೋಕ ಕೆಳಗಿನಿಂದ ಕ್ರಮಕ್ರಮವಾಗಿ ಕಿರಿದಾಗುತ್ತ ಏಳು ರಜ್ಜುಗಳಷ್ಟು ಎತ್ತರದಲ್ಲಿ ಒಂದೇ ರಜ್ಜು ಅಗಲವುಳ್ಳದ್ದಾಗುತ್ತದೆ. ಆಮೇಲೆ ಹೆಚ್ಚುತ್ತ ಹೆಚ್ಚುತ್ತ ಮುಂದಿನ ೩½ ರಜ್ಜುಗಳಷ್ಟು ಎತ್ತರದಲ್ಲಿ ೫ ರಜ್ಜು ಅಗಲವಾಗುತ್ತದೆ.

(ನಕ್ಷೆ ೧)

# ಲೋಕಾಕಾರ

ಸಿದ್ಧಶಿಲೆ

ಅಲೋಕ

3½ ರಜ್ಜು

ಸರ್ವಾರ್ಥಸಿದ್ಧಿ ವಿಮಾನ

15 16
13 14
11 12
9 10
7 8

ಊರ್ಧ್ವಲೋಕ

5 ರಜ್ಜು

5 6
3 4
1 2

3½ ರಜ್ಜು
ಹದಿನಾಲ್ಕು ರಜ್ಜು

ಮಂದರ ಪರ್ವತ

ಮಧ್ಯಲೋಕ

ಖರಭಾಗ; ಭವನ
ವಾಸಿಗಳ ನೆಲೆ

ಅಸುರ ಕುಮಾರರ ನೆಲೆ

1ರಿಂದ 7 ನರಕ

ಘನೋದಧಿ
ವಾತವಲಯ
ಘನವಾತವಲಯ
ತನುವಾತವಲಯ

1
2
3
4
5
6
7
ನಿಗೋದ

ಅಧೋಲೋಕ

ಏಳು ರಜ್ಜು

1 ರಜ್ಜು

ಪಶ್ಚಿಮ ಏಳು ರಜ್ಜು ಪೂರ್ವ

ಅಲ್ಲಿಂದ ಮುಂದೆ ಮತ್ತೆ ಕಿರಿದಾಗುತ್ತ ನೆತ್ತಿಯ ಬಳಿ ಒಂದೇ ರಜ್ಜು ಅಗಲವಾಗುತ್ತದೆ.

ಒಂದೇ ರಜ್ಜು ಅಗಲವುಳ್ಳ ಸೊಂಟದ ಭಾಗದಲ್ಲಿರುವುದು **ಮಧ್ಯಲೋಕ.** ಅದರ ಕೆಳಗಿನದು **ಅಧೋಲೋಕ;** ಮೇಲಿನದು **ಊರ್ಧ್ವಲೋಕ.** ಈ ಮೂರು ಲೋಕಗಳನ್ನೂ ವ್ಯಾಪಿಸಿ ಲೋಕಾಕಾಶದ ಮಧ್ಯಭಾಗದಲ್ಲಿ ೧ ರಜ್ಜು ಅಗಲ, ೧ ರಜ್ಜು ಉದ್ದ, ೧೪ ರಜ್ಜು ಎತ್ತರವುಳ್ಳ **ತ್ರಸನಾಡಿ**ಯಿದೆ. ತ್ರಸ ಜೀವಗಳು ಇದರ ಹೊರಗೆ ಇರಲಾರವು.

ಲೋಕದ ಹೊರಭಾಗದಲ್ಲಿ ಅದನ್ನು ಸುತ್ತಿಕೊಂಡು **ಘನೋದಧಿ ವಾತವಲಯ, ಘನ ವಾತವಲಯ, ತನುವಾತವಲಯ** ಎಂಬ ಮೂರು ಗಾಳಿಯ ಆವರಣಗಳಿವೆ.

### ಅಧೋಲೋಕ

ಮಧ್ಯಲೋಕದ ಕೆಳಗೆ ಭವನವಾಸಿಗಳೂ ಅಸುರಕುಮಾರರೂ ವಾಸಿಸುವ ನೆಲೆಗಳಿವೆ. ಅಲ್ಲಿಂದ ಕೆಳಗೆ ಕ್ರಮವಾಗಿ ೧ ರತ್ನಪ್ರಭೆ, ೨ ಶರ್ಕರಾಪ್ರಭೆ, ೩ ವಾಲುಕಾಪ್ರಭೆ, ೪ ಪಂಕಪ್ರಭೆ, ೫ ಧೂಮಪ್ರಭೆ, ೬ ತಮಃಪ್ರಭೆ, ೭ ಮಹಾ ತಮಃಪ್ರಭೆ ಎಂಬ ಏಳು ನರಕಗಳಿವೆ. ಈ ನರಕಗಳಿಗೆ ಕೆಳಗಡೆ ಇರುವ ನಿಗೋದವೆಂಬ ಭಾಗ ಅತ್ಯಂತ ದುಃಖಕರವಾದ್ದು. ಜೀವಗಳು ತಮ್ಮ ಪಾಪದ ಫಲವನ್ನು ಈ ನರಕಗಳಲ್ಲಿ ಅನುಭವಿಸುತ್ತವೆ.

### ಮಧ್ಯಲೋಕ

ಇದೇ ನಾವು ವಾಸಮಾಡುವ ಭೂಲೋಕ. ಇದು ಝಲ್ಲರಿಯಂತೆ ದುಂಡಗಿದೆ. ಈ ಲೋಕದ ನಟ್ಟನಡುವೆ ಮಂದರ ಪರ್ವತವಿದೆ. ಇದಕ್ಕೆ ಮೇರುವೆಂದೂ ಹೆಸರುಂಟು. ಇದನ್ನು ಸುತ್ತುವರಿದು ಜಂಬೂದ್ವೀಪವಿದೆ. ಜಂಬೂದ್ವೀಪವನ್ನು ಲವಣಸಮುದ್ರ ಸುತ್ತುವರಿದಿದೆ. ಲವಣಸಮುದ್ರದ ಸುತ್ತ ಧಾತಕೀದ್ವೀಪ, ಅದನ್ನು ಸುತ್ತಿ ಕಾಳೋದಧಿ, ಅದರ ಸುತ್ತ ಪುಷ್ಕರವರದ್ವೀಪ, ಆ ದ್ವೀಪವನ್ನು ಸುತ್ತು ವರಿದು ಪುಷ್ಕರವರ ಸಮುದ್ರ—ಹೀಗೆ ಹಲವು ದ್ವೀಪ ಸಮುದ್ರಗಳು ಒಂದನ್ನೊಂದು ವಲಯಾಕಾರದಲ್ಲಿ ಸುತ್ತುವರಿದಿವೆ. ಇವುಗಳಲ್ಲಿ ಮೊದಲ ಎಂಟು ದ್ವೀಪ ಸಮುದ್ರಗಳು: ೧ ಜಂಬೂದ್ವೀಪ, ಲವಣಸಮುದ್ರ, ೨ ಧಾತಕೀದ್ವೀಪ, ಕಾಳೋದಧಿ, ೩ ಪುಷ್ಕರವರದ್ವೀಪ,




ಮಧ್ಯಲೋಕ (ನಕ್ಷೆ ೨)

ಪುಷ್ಕರವರ ಸಮುದ್ರ, ೪ ವಾರುಣೀವರ— ೫ ಕ್ಷೀರವರ— ೬ ಘೃತವರ— ೭ ಇಕ್ಷುವರ— ೮ ನಂದೀಶ್ವರ—. ಈ ದ್ವೀಪ ಸಮುದ್ರಗಳು ಒಂದಕ್ಕಿಂತ ಒಂದು ಎರಡರಷ್ಟು ವಿಸ್ತಾರವುಳ್ಳವು. ಎಲ್ಲಕ್ಕಿಂತ ಕೊನೆಯ ಸಮುದ್ರ ಸ್ವಯಂಭೂರಮಣ.

ಪುಷ್ಕರವರ ದ್ವೀಪದ ಮಧ್ಯಭಾಗದಲ್ಲಿ ಉದ್ದಕ್ಕೂ ಹಬ್ಬಿರುವ ಮಾನುಷೋತ್ತರ ಪರ್ವತ ಆ ದ್ವೀಪವನ್ನು ಎರಡಾಗಿ ಭಾಗಿಸುತ್ತದೆ. (ನಕ್ಷೆ ೨ ನೋಡಿ). ಆ ಪರ್ವತದಿಂದಾಚೆಗೆ ಮನುಷ್ಯಸಂಚಾರವಿಲ್ಲ. ಹೀಗೆ ಮನುಷ್ಯರು ವಾಸಿಸುವುದು ಎರಡೂವರೆ ದ್ವೀಪಗಳಲ್ಲಿ ಮಾತ್ರ. ತಿರ್ಯಕ್ ಜೀವಗಳು ಮಧ್ಯಲೋಕದಲ್ಲೆಲ್ಲ ವಾಸಿಸುತ್ತವೆ (ಮಧ್ಯಲೋಕಕ್ಕೆ ತಿರ್ಯಗ್ಲೋಕವೆಂದೂ ಹೆಸರುಂಟು). ಸ್ಥಾವರಗಳು ಲೋಕದ ಎಲ್ಲ ಕಡೆಗಳಲ್ಲಿಯೂ ವಾಸಿಸುತ್ತವೆ. ಜಲಚರಗಳು ಲವಣಸಮುದ್ರ, ಕಾಳೋದಧಿ ಮತ್ತು ಸ್ವಯಂಭೂರಮಣ ಸಮುದ್ರಗಳಲ್ಲಿ ಮಾತ್ರ ಜೀವಿಸುತ್ತವೆ.




ಜಂಬೂದ್ವೀಪ (ನಕ್ಷೆ ೩)

**ಜಂಬೂದ್ವೀಪ:** ದ್ವೀಪಗಳಲ್ಲಿ ನಟ್ಟನಡುವಿನದು ಜಂಬೂದ್ವಿಪ. ಪೂರ್ವ ಪಶ್ಚಿಮವಾಗಿ ಹಬ್ಬಿರುವ ಆರು ಕುಲಪರ್ವತಗಳು ಈ ದ್ವೀಪವನ್ನು ಏಳು ಕ್ಷೇತ್ರ ಅಥವಾ ವರ್ಷಗಳಾಗಿ ಭಾಗಿಸುತ್ತವೆ. ಆ ಪರ್ವತಗಳು ದಕ್ಷಿಣದಿಂದ ಉತ್ತರಕ್ಕೆ ಕ್ರಮವಾಗಿ ಹಿಮವಾನ್, ಮಹಾ ಹಿಮವಾನ್, ನಿಷಧ, ನೀಲ, ರುಕ್ಮಿ ಮತ್ತು ಶಿಖರಿ. ಇವುಗಳಿಂದಾದ ಕ್ಷೇತ್ರಗಳು ಕ್ರಮವಾಗಿ—ಭರತ, ಹೈಮವತ, ಹರಿ, ವಿದೇಹ, ರಮ್ಯಕ, ಹೈರಣ್ಯವತ ಮತ್ತು ಐರಾವತ. ಮಂದರ ಪರ್ವತವಿರುವುದು ವಿದೇಹ ಕ್ಷೇತ್ರದ ನಡುವೆ. (ನಕ್ಷೆ ೩ ನೋಡಿ).

ಹೈಮವತ ಕ್ಷೇತ್ರ ಜಘನ್ಯ (ಕೀಳ್ತರದ) ಭೋಗಭೂಮಿ. ಹರಿಕ್ಷೇತ್ರ ಮಧ್ಯಮ ಭೋಗಭೂಮಿ. ಮಂದರ ನಿಷಧಗಳ ನಡುವೆ ಇರುವ **ದೇವ ಕುರು,** ಮಂದರಕ್ಕೆ ಉತ್ತರದಲ್ಲಿರುವ **ಉತ್ತರಕುರು**—ಈ ಎರಡೂ ಉತ್ತಮ ಭೋಗಭೂಮಿಗಳು.

**ಭರತ ಕ್ಷೇತ್ರ:** ಹಿಮವತ್ಪರ್ವತದ ದಕ್ಷಿಣದಲ್ಲಿ ಲವಣ ಸಮುದ್ರದವರೆಗೂ ವ್ಯಾಪಿಸಿರುವುದು ಭರತಕ್ಷೇತ್ರ. ಇದರ ನಡುವೆ **ವಿಜಯಾರ್ಧಪರ್ವತ**




ಲವಣ ಸಮುದ್ರ

ಭರತ ಕ್ಷೇತ್ರ (ನಕ್ಷೆ ೪)

ಪೂರ್ವ ಪಶ್ಚಿಮವಾಗಿ ಹಬ್ಬಿ ಈ ಕ್ಷೇತ್ರವನ್ನು **ಉತ್ತರ ಭರತ, ದಕ್ಷಿಣ ಭರತ** ಎಂದು ಎರಡಾಗಿ ಒಡೆಯುತ್ತದೆ. ಹಿಮವತ್ಪರ್ವತದಲ್ಲಿ ಹುಟ್ಟಿದ ಮಹಾಸಿಂಧು ಮಹಾಗಂಗಾ ಎಂಬೆರಡು ನದಿಗಳು ಉತ್ತರದಿಂದ ದಕ್ಷಿಣಕ್ಕೆ ಹರಿದು ಲವಣ ಸಮುದ್ರಕ್ಕೆ ಸೇರುತ್ತವೆ. ವಿಜಯಾರ್ಧ ಪರ್ವತ ಮತ್ತು ಗಂಗಾ ಸಿಂಧೂ ನದಿಗಳಿಂದ ಭರತಕ್ಷೇತ್ರ **ಆರು ಖಂಡ**ಗಳಾಗಿ ಭಾಗವಾಗಿದೆ. ದಕ್ಷಿಣ ಭರತದ ನಡುವಣ ಖಂಡವೇ **ಆರ್ಯ ಖಂಡ.** ಇಲ್ಲೇ ನಾವಿರುವುದು. ಉಳಿದ ಐದು ಖಂಡಗಳೂ ಮ್ಲೇಚ್ಛ ಖಂಡಗಳು; ಮ್ಲೇಚ್ಛ ನಿವಾಸಗಳು (ನಕ್ಷೆ ೪ ನೋಡಿ).

ಉತ್ತರ ಭರತದಲ್ಲಿ ಹಿಮವತ್ಪರ್ವತದ ಮಧ್ಯಮ ಕೂಟಕ್ಕೆ ನೇರವಾಗಿ ದಕ್ಷಿಣದಲ್ಲಿ ವೃಷಭಾದ್ರಿಯಿದೆ. ಇಲ್ಲಿನ ಶಿಲೆಗಳ ಮೇಲೆ ಚಕ್ರವರ್ತಿಗಳು ತಮ್ಮ ಶಾಸನಗಳನ್ನು ಕೆತ್ತಿಸುತ್ತಾರೆ. ದಕ್ಷಿಣ ಭರತದಲ್ಲಿ ಗಂಗಾತೀರದ ಹತ್ತಿರ ಕೈಲಾಸ ಪರ್ವತವಿದೆ. ಇದು ಆದಿತೀರ್ಥಂಕರನ ಸಮವಸರಣ ಭೂಮಿ ಮತ್ತು ಪರಿನಿರ್ವಾಣ ಕ್ಷೇತ್ರ.

ಜಂಬೂದ್ವೀಪದ ಉಳಿದ ಕ್ಷೇತ್ರಗಳಲ್ಲೂ ವಿಜಯಾರ್ಧ ಪರ್ವತಗಳಿವೆ. ಉಳಿದ ದ್ವೀಪಗಳಲ್ಲೂ ಮಂದರ ವಿಜಯಾರ್ಧ ಪರ್ವತಗಳಿವೆ. ಆ ವಿವರಗಳು ಇಲ್ಲಿಗೆ ಅಗತ್ಯವಿಲ್ಲ.

ಊರ್ಧ್ವಲೋಕ

ಮಧ್ಯಲೋಕದ ಮೇಲಿನದು ಊರ್ಧ್ವಲೋಕ. ಇದು ದೇವತೆಗಳ ನಿವಾಸ. ಇಲ್ಲಿ ಮೊದಲು, ಕೆಳಗಿನಿಂದ ಮೇಲಕ್ಕೆ ಜೋಡಿಜೋಡಿಯಾಗಿ ೧೬ ಸ್ವರ್ಗ ಗಳಿವೆ. ಇಲ್ಲಿನ ದೇವತೆಗಳಲ್ಲಿ ಇಂದ್ರ, ಸಾಮಾನಿಕ ಮೊದಲಾದ ಚಿಕ್ಕ ದೊಡ್ಡ ಕಲ್ಪನೆಗಳಿರುವುದರಿಂದ ಇವಕ್ಕೆ **ಕಲ್ಪ**ಗಳೆಂದು ಹೆಸರು. ಕಲ್ಪಗಳಿಂದ ಮೇಲಿನ ಭಾಗಗಳಲ್ಲಿ ಈ ಭೇದವಿಲ್ಲ. ಅವು **ಕಲ್ಪಾತೀತ**ಗಳು. ಅಲ್ಲಿನ ದೇವತೆಗಳೆಲ್ಲ ಸಮಾನರು. ಅವರಿಗೆ **ಅಹಮಿಂದ್ರ**ರೆಂದು ಹೆಸರು. ಈ ಕಲ್ಪಗಳಲ್ಲೆಲ್ಲ ಒಟ್ಟು ೧೨ ಇಂದ್ರರು ಇದ್ದಾರೆ.

ಸ್ವರ್ಗಗಳು: ೧ ಸೌಧರ್ಮ, ೨ ಈಶಾನ, ೩ ಸನತ್ಕುಮಾರ, ೪ ಮಾಹೇಂದ್ರ (ಈ ನಾಲ್ಕರಲ್ಲಿ ಪ್ರತಿಯೊಂದರಲ್ಲೂ ಒಬ್ಬೊಬ್ಬ ಇಂದ್ರನುಂಟು). ೫ ಬ್ರಹ್ಮ, ೬ ಬ್ರಹ್ಮೋತ್ತರ, ೭ ಲಾಂತವ, ೮ ಕಾಪಿಷ್ಠ, ೯ ಶುಕ್ರ, ೧೦ ಮಹಾಶುಕ್ರ, ೧೧ ಶತಾರ, ೧೨ ಸಹಸ್ರಾರ (ಈ ಎಂಟರಲ್ಲಿ ಎರ ಡೆರಡಕ್ಕೆ ಒಬ್ಬನಂತೆ ಒಟ್ಟು ೪ ಇಂದ್ರರು). ೧೩ ಆನತ, ೧೪ ಪ್ರಾಣತ, ೧೫ ಆರಣ, ೧೬ ಅಚ್ಯುತ (ಈ ನಾಲ್ಕರಲ್ಲಿ ಒಂದೊಂದಕ್ಕೂ ಒಬ್ಬೊಬ್ಬ ಇಂದ್ರ).

ಬ್ರಹ್ಮಕಲ್ಪದ ಮೇಲ್ಭಾಗದಲ್ಲಿ **ಲೋಕಾಂತಿಕ ದೇವತೆ**ಗಳೆಂಬುವ ರಿರುತ್ತಾರೆ.

ಈ ಕಲ್ಪಗಳ ಮೇಲೆ ೯ ಗ್ರೈವೇಯಕ ವಿಮಾನಗಳೂ ಅವುಗಳಿಂದ ಮೇಲೆ ೯ ಅನುದಿಶ ವಿಮಾನಗಳೂ ಅವುಗಳ ಮೇಲುಗಡೆ ೫ ಅನುತ್ತರ ವಿಮಾನಗಳೂ ಇವೆ. ಅನುತ್ತರ ವಿಮಾನಗಳಲ್ಲಿ ಎಲ್ಲಕ್ಕೂ ಮೇಲಿನಮು ಅತ್ಯುತ್ತಮವಾದ **ಸರ್ವಾರ್ಥ ಸಿದ್ಧಿ** ವಿಮಾನ. (ನಕ್ಷೆ ೧ ನೋಡಿ).

ಈ ಅನುತ್ತರ ವಿಮಾನಗಳ ಮೇಲುಗಡೆ **ಈಷತ್ ಪ್ರಾಗ್ಭಾರ** ಎಂಬ ಸಿದ್ಧಕ್ಷೇತ್ರವಿದೆ. ಇದರ ಮಧ್ಯಭಾಗದಲ್ಲಿ ಶುದ್ಧ ಸ್ಫಟಿಕಮಯವಾದ **ಸಿದ್ಧಶಿಲೆ**ಯಿದೆ. ಇದು ಬಿಚ್ಚಿದ ಕೊಡೆಯ ಆಕಾರವುಳ್ಳದ್ದಾಗಿ ಮೇಲಕ್ಕೆ ಹೋಗುತ್ತ ಹೋಗುತ್ತ ಅಗಲ ಕಿರಿದಾಗುತ್ತ ಬರುತ್ತದೆ. ಇದರ ನೆತ್ತಿ ಯಲ್ಲಿ ತನುವಾತವಲಯದ ಮೇಲೆ ಮುಕ್ತರಾದ ಸಿದ್ಧರು ನೆಲಸುತ್ತಾರೆ. (ನಕ್ಷೆ ೧ ನೋಡಿ).

## ೩ ಜೈನ ಪುರಾಣಗಳು

ಆಗಮಗಳಲ್ಲಿ, ಶಾಸ್ತ್ರಗಳಲ್ಲಿ ವಿವರಿಸಿರುವ ಧರ್ಮ ಚೆನ್ನಾಗಿ ಬೆಳಗುವುದು ಆ ಧರ್ಮವನ್ನು ನಂಬಿ ನಡೆದವರ ಚರಿತ್ರೆಗಳಲ್ಲಿ. ಆ ಧರ್ಮ ಇಲ್ಲದಿದ್ದರೆ ಆಗುವ ಅರಕೆ ಏನೆಂದು ತಿಳಿಯುವುದು ಅದನ್ನು ನಂಬದೆ ಅದಕ್ಕೆ ವಿರುದ್ಧವಾಗಿ ನಡೆದವರ ಅನುಭವಗಳಲ್ಲಿ. ಧರ್ಮಕ್ಕೆ ದೃಷ್ಟಾಂತರೂಪವಾದ ಇಂಥ ಚರಿತ್ರೆಗಳೇ ಪುರಾಣಗಳು.

### ಶಲಾಕಾ ಪುರುಷರು

ಜೈನ ಪುರಾಣಗಳಲ್ಲಿ ಜಿನ ಧರ್ಮವನ್ನು ನಂಬಿ ನಡೆದು ಸದ್ಗತಿ ಹೊಂದಿದ ಮಹಾಪುರುಷರ ಚರಿತ್ರೆಗಳು ವರ್ಣಿತವಾಗಿವೆ. ಈ ಪುರಾಣ ಪುರುಷರಲ್ಲಿ ಅರುವತ್ತುಮೂರು ಜನ ಪ್ರಸಿದ್ಧರು. ಅವರನ್ನು ತ್ರಿಷಷ್ಟಿ **ಶಲಾಕಾ ಪುರುಷರು** ಎನ್ನುತ್ತಾರೆ. ಅವರಲ್ಲಿ ತತ್ತ್ವವನ್ನು ಕಂಡು ಲೋಕಕ್ಕೆ ಬೋಧಿಸಿದ ತೀರ್ಥಂಕರರು ಮುಖ್ಯರಾದವರು. ಜೈನರು ಪುರುಷಾರ್ಥಸಿದ್ಧಿಗಾಗಿ ದೇವರೆಂದು ಭಕ್ತಿಯಿಂದ ಭಜಿಸುವುದು ಈ ತೀರ್ಥಂಕರರನ್ನೇ. ಹಿಂದಿನ ಕಾಲಗಳಲ್ಲಿ ಹಲವು ಮಂದಿ ತೀರ್ಥಂಕರರು ಅವತರಿಸಿದ್ದರೂ ಈಗಿನ ಅವಸರ್ಪಿಣಿಯಲ್ಲಿ ಭರತ ಕ್ಷೇತ್ರದಲ್ಲಿ ಅವತರಿಸಿದ ೨೪ ಮಂದಿ ತೀರ್ಥಂಕರರ ವಿಚಾರವನ್ನು ಮಾತ್ರ ಪುರಾಣಗಳು ವಿವರಿಸುತ್ತವೆ. ತೀರ್ಥಂಕರರ ಬಳಿಕ ಮುಖ್ಯರಾದವರು ಚಕ್ರವರ್ತಿಗಳು. ವೃಷಭತೀರ್ಥಂಕರನ ಕಾಲದಿಂದ ೨೪ನೆಯ ವರ್ಧಮಾನ ತೀರ್ಥಂಕರನ ಕಾಲದ ವರೆಗೆ ಹನ್ನೆರಡು ಮಂದಿ ಚಕ್ರವರ್ತಿಗಳು ಷಟ್ಖಂಡ ಭರತಕ್ಷೇತ್ರವನ್ನೂ ಗೆದ್ದು ಆಳಿದರು. ಅವರು ಯಾರೆಂದರೆ: ೧ ಭರತ, ೨ ಸಗರ, ೩ ಮಘವಾನ್, ೪ ಸನತ್ಕುಮಾರ, ೫ ಶಾಂತಿನಾಥ, ೬ ಕುಂಥುನಾಥ, ೭ ಅರ(ಹ) ನಾಥ, ೮ ಸುಭೌಮ, ೯ ಪದ್ಮನಾಭ, ೧೦ ಹರಿಷೇಣ, ೧೧ ಜಯಸೇನ, ೧೨ ಬ್ರಹ್ಮದತ್ತ. ಕೆಲಕೆಲವು ಕಾಲಗಳಲ್ಲಿ ಬಲದೇವ ವಾಸುದೇವರೆಂಬ ಮಹಾಮಹಿಮರಾದ ಒಂಬತ್ತು ಅಣ್ಣತಮ್ಮಂದಿರ ಜೋಡಿಯೂ ಅವರನ್ನೆದುರಿಸಿದ ಪ್ರತಿವಾಸುದೇವರೆಂಬ ಒಂಬತ್ತು ಮಂದಿ ಉದ್ಧತನಾಯಕರೂ ಆಗಿಹೋದರು. ಈ ಮುಕ್ಕೂಟ ವೀರರು ಜೈನ ಮಹಾಪುರುಷರ ಮಾಲಿಕೆಯಲ್ಲಿ ಮೂರನೆಯ ತಂಡದವರು. ಅವರು ಯಾರೆಂದರೆ:

| ಬಲದೇವರು | ವಾಸುದೇವರು | ಪ್ರತಿವಾಸುದೇವರು |
|---|---|---|
| ೧ ವಿಜಯ | ತ್ರಿಪುಷ್ಟ (ತ್ರಿಪೃಷ್ಠ) | ಅಶ್ವಗ್ರೀವ |
| ೨ ಅಚಲ | ದ್ವಿಪುಷ್ಟ (ದ್ವಿಪೃಷ್ಠ) | ತಾರಕ |
| ೩ ಧರ್ಮಪ್ರಭ (ಭದ್ರ) | ಸ್ವಯಂಭೂ | ನರಕ |
| ೪ ಸುಪ್ರಭ | ಪುರುಷೋತ್ತಮ | ನಿಶುಂಭ |
| ೫ ಸುದರ್ಶನ | ನರ(ಪುರುಷ)ಸಿಂಹ | ಮಧುಕೈಟಭ |
| ೬ ನಂದಿ (ಆನಂದ) | ಪುಂಡರೀಕ | ಪ್ರಹ್ಲಾದ |
| ೭ ನಂದಿಮಿತ್ರ (ನಂದನ) | ದತ್ತದೇವ | ಬಲಿ |
| ೮ ರಾಮಚಂದ್ರ | ಲಕ್ಷ್ಮಣ | ರಾವಣ |
| ೯ ಪದ್ಮ | ಕೃಷ್ಣ | ಜರಾಸಂಧ |

ಇವರಲ್ಲಿ ಶಾಂತಿನಾಥ, ಕುಂಥುನಾಥ, ಅರನಾಥ—ಈ ಮೂವರು ತೀರ್ಥಂಕರರೂ ಚಕ್ರವರ್ತಿಗಳೂ ಆದ್ದರಿಂದ ಒಟ್ಟಿನಲ್ಲಿ ಶಲಾಕಾ ಪುರುಷರು ಅರುವತ್ತೇ ಮಂದಿಯಾದಂತಾಯಿತು. ಈ ಮಹಾಪುರುಷರಲ್ಲಿ ವೃಷಭ, ಭರತ, ಸಗರ, ನರಸಿಂಹ, ಪ್ರಹ್ಲಾದ, ಬಲಿ, ರಾಮ, ಕೃಷ್ಣ ಮೊದಲಾದವರು ವೈದಿಕ ಧರ್ಮದ ಪುರಾಣಗಳಲ್ಲೂ ಪ್ರಸಿದ್ಧರಾಗಿದ್ದಾರೆ.

## ಪುರಾಣಗಳ ವಸ್ತು

ಜೈನ ಪುರಾಣಗಳು ಈ ತ್ರಿಷಷ್ಟಿ ಶಲಾಕಾಪುರುಷರ ಚರಿತ್ರೆಯ ಜೊತೆಗೆ ಮುನಿಗಳ ಮಹಿಮೆ, ಷಡ್ದ್ರವ್ಯಗಳು, ನವಪದಾರ್ಥಗಳು, ಲೋಕಸ್ವರೂಪ, ಕಾಲಪರಿವರ್ತನೆ, ಜಗತ್ತಿನ ಸೃಷ್ಟಿಸಂಹಾರಗಳು, ಚತುರ್ಗತಿಗಳು, ರತ್ನತ್ರಯ ರೂಪವಾದ ಮೋಕ್ಷಮಾರ್ಗ, ಅದರಿಂದ ಸಾಧಿಸುವ ಫಲ—ಇವೇ ಮೊದಲಾದ ಜೈನಧರ್ಮದ ತತ್ತ್ವಗಳನ್ನೂ ಸಂದರ್ಭಾನುಸಾರವಾಗಿ ಪ್ರತಿಪಾದಿಸುತ್ತವೆ. ಲೋಕಾಖ್ಯಾನ, ದೇಶಾಖ್ಯಾನ, ಪುರಾಖ್ಯಾನ, ರಾಜ್ಯಾಖ್ಯಾನ, ತೀರ್ಥಾಖ್ಯಾನ, ತಪೋದಾನಕಥನ, ಗತ್ಯಾಖ್ಯಾನ ಮತ್ತು ಫಲಾಖ್ಯಾನ—ಈ ಎಂಟು ಜೈನಪುರಾಣದ ಅವಯವಗಳು.

ಅನಾದಿಕಾಲದಿಂದ ಜೀವ ಅಜೀವದೊಡನೆ ಸೇರಿ ಕರ್ಮಬಂಧವನ್ನು ಕಟ್ಟಿಕೊಂಡು ಚತುರ್ಗತಿಸಂಸಾರದಲ್ಲಿ ನೆಲೆಯಿಲ್ಲದೆ ಅಲೆಯುತ್ತಿರುವುದೆಂದು ಹಿಂದೆಯೇ ವ್ಯಕ್ತವಾಗಿದೆ. ಕರ್ಮಬಂಧದ ಬಿಗುಪನ್ನು ಹೆಚ್ಚಿಸಿಕೊಳ್ಳುವುದಕ್ಕೂ ಅದನ್ನು ಸಡಿಲಿಸಿ ಕ್ರಮಕ್ರಮವಾಗಿ ಆ ಕಟ್ಟನ್ನು ಕಳಚಿ ಬಿಡುಗಡೆ

ಪಡೆಯುವುದಕ್ಕೂ ಜೀವ ಸ್ವತಂತ್ರವಾಗಿದೆ. ಆದರೆ ಕಷಾಯಾದಿಗಳಿಂದ ಮೋಹಗೊಂಡ ಜೀವ ಬಿಡುಗಡೆಯ ಕಡೆಗೆ ಮನಸ್ಸು ತಿರುಗಿಸುವುದು ಬಹು ಕಷ್ಟ. ಇಂದ್ರಿಯ ಸುಖಕ್ಕೆ ಮನಸ್ಸು ತೆತ್ತು ಕರ್ಮದ ಕಟ್ಟನ್ನು ಬಿಗಿಮಾಡಿ ಕೊಳ್ಳುವುದೇ ಅದಕ್ಕೆ ಹೆಚ್ಚು ಸಹಜವಾಗಿಬಿಡುತ್ತದೆ. ಯಾವುದೋ ಒಂದು ಮಿತಿಯನ್ನು ಮೀರಿದ ಮೇಲೆ ಈ ಕರ್ಮದ ಹೊರೆ ಜೀವವನ್ನು ಸಂಸಾರಕ್ಕೇ ಬಿಗಿಯಾಗಿ ಬಂಧಿಸಿಬಿಡುತ್ತದೆ. ಬಿಡುಗಡೆ ದೊರೆಯದಂತೆ ಮಾಡುವಷ್ಟು ಮಟ್ಟಿಗೆ ಕರ್ಮದ ಹೊರೆ ಹೊತ್ತ ಜೀವವೇ **ಅಭವ್ಯ** ಜೀವ. ಇಂಥ ಜೀವ ಪುಣ್ಯಬಲದಿಂದ ಉತ್ತಮ ಜನ್ಮ ಪಡೆಯಬಲ್ಲದು; ದೇವತೆಯಾಗಿ ಹುಟ್ಟಿ ದೇವಲೋಕ ಸುಖವನ್ನೂ ಅನುಭವಿಸಬಲ್ಲದು. ಆದರೆ ಸಮ್ಯಕ್ತ್ವ ಪಡೆದು ಮುಕ್ತಿಗೆ ನಡೆಯಲಾರದು. ಕರ್ಮದಲ್ಲಿ ಇಷ್ಟು ಆಳವಾಗಿ ಮುಳುಗಿ ಹೋಗದೆ ಮುಂದೆ ಸಿದ್ಧಿಹೊಂದುವ ಸಾಮರ್ಥ್ಯವನ್ನು ಉಳಿಸಿಕೊಂಡಿರುವ ಜೀವ **ಭವ್ಯ** ಜೀವ. ಇಂಥ ಜೀವ ಪುಣ್ಯಪಾಪಗಳಿಂದ ದೇವ, ಮನುಷ್ಯ, ತಿರ್ಯಕ್, ನಾರಕ ಗತಿಗಳಲ್ಲಿ ಸುತ್ತುತ್ತ, ಕ್ರಮಕ್ರಮವಾಗಿ ಪಾಪವನ್ನು ಕಡಮೆಮಾಡಿಕೊಂಡು ಪುಣ್ಯಬಲದಿಂದ ದೇವ ಮನುಷ್ಯಗತಿಗಳಲ್ಲೆ ಸುತ್ತುವಂತಾಗುತ್ತದೆ. ಹಾಗೆ ಸುತ್ತುತ್ತಿರುವಲ್ಲಿ ಸಂಸಾರದಿಂದ ಸದ್ಗತಿಯ ಕಡೆಗೆ ತಿರುಗಿಸುವ ಕೆಲವು ಪುಣ್ಯಕರ್ಮಗಳನ್ನು ಮಾಡುತ್ತದೆ. ಆ ಕರ್ಮಗಳು ಫಲಿಸಿದಂದು ಸಹಜವಾಗಿಯೊ ಗುರೂಪದೇಶದಿಂದಲೊ ಅದಕ್ಕೆ ಸಮ್ಯಕ್ತ್ವ, ಸಮ್ಯಕ್ ದೃಷ್ಟಿ ದೊರೆಯುತ್ತದೆ. ಹೀಗೆ ದೊರೆಯುವ ಕಾಲ ಕೂಡಿಬರುವುದೇ **ಕಾಲಲಬ್ಧಿ**. ಸಮ್ಯಕ್ತ್ವ ದೊರೆಯುವ ಸಂಭವ ಬೇಗ ಬರುವುದಾದರೆ ಆ ಜೀವ **ಆಸನ್ನಭವ್ಯ**. ನಿದಾನವಾಗಿ ತುಂಬ ಕಾಲ ಕಳೆದ ಮೇಲೆ ಬರುವುದಾದರೆ **ದೂರಭವ್ಯ**. ದೂರವೋ ಆಸನ್ನ(ಹತ್ತಿರ)ವೋ ಅಂತು ಒಮ್ಮೆ ಸಮ್ಯಕ್ತ್ವ ದೊರೆತಮೇಲೆ ಜೀವ ಮುಕ್ತಿಮುಖವಾಗಿ ನಡೆಯುತ್ತ ತನ್ನನ್ನು ಸಂಸಾರಕ್ಕೆ ಬಂಧಿಸುವ ಕಟ್ಟುಗಳನ್ನು ಒಂದೊಂದಾಗಿ ಕತ್ತರಿಸಿಕೊಂಡು ಕಡೆಗೆ ಬಿಡುಗಡೆ ಹೊಂದುತ್ತದೆ; ಸಿದ್ಧನಾಗಿ ಅನಂತ ಸುಖದಲ್ಲಿ ನೆಲೆಗೊಳ್ಳುತ್ತದೆ.

ಹೀಗೆ ಸಂಸಾರದಲ್ಲಿ ಸಿಕ್ಕಿಕೊಂಡು ತೊಳಲುತ್ತಿದ್ದ ಜೀವ ರತ್ನತ್ರಯವನ್ನಾಶ್ರಯಿಸಿ ಸಂಸಾರವನ್ನು ದಾಟಿ ಮುಕ್ತಿಗೆ ನಡೆದ ಹಲವು ಜನ್ಮಗಳ ನಿಡುಗತೆಯನ್ನು—ಜೀವದ ಕ್ರಮವಿಕಾಸವನ್ನು—ವಿವರಿಸುವುದೇ ಜೈನ ಪುರಾಣಗಳ, ತೀರ್ಥಂಕರ ಚರಿತ್ರೆಗಳ ಮುಖ್ಯ ಗುರಿ. ಜೀವದ ವಿಕಾಸ ಪರಂಪರೆಯ

ಕೊನೆಯ ಹಂತವೇ ತೀರ್ಥಂಕರತ್ವ. ಈ ಮೆಟ್ಟಲನ್ನು ದಾಟಿದೊಡನೆ ದೊರೆಯುವ ನೆಲೆ ಪರಮಪದ.

### ಪಂಚಕಲ್ಯಾಣಗಳು ಮತ್ತು ಭವಾವಳಿ

ಕೊನೆಯ ಮೆಟ್ಟಲಿನಲ್ಲಿರುವ ಎಲ್ಲ ಜೀವರ ಚರಿತ್ರೆಯೂ ಹೆಚ್ಚುಕಡಮೆ ಒಂದೇ ರೀತಿ. ತೀರ್ಥಂಕರರ ಚರಿತ್ರೆಗಳಲ್ಲಿ ವೈಯಕ್ತಿಕ ವ್ಯತ್ಯಾಸಗಳು ಬಹಳ ಕಡಮೆ. ಅವುಗಳಲ್ಲಿ,

> 'ಸುರಲೋಕಾವತರೋತ್ಸವಂ, ಪರಿಕೃತಂ ಜನ್ಮಾಭಿಷೇಕೋತ್ಸವಂ, ಪರಿನಿಷ್ಕ್ರಾಂತಿ ಮಹೋತ್ಸವಂ, ಪ್ರವಿಮಲಂ ಕೈವಲ್ಯಬೋಧೋತ್ಸವಂ, ಪರಿನಿರ್ವಾಣ ಮಹೋತ್ಸವಂ, ಜಿನಮಹಾಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು'

ಎಂದು ಕವಿ ರನ್ನ ಹೇಳಿರುವಂತೆ ಪಂಚಕಲ್ಯಾಣಗಳ ವಿಸ್ತಾರವಾದ ವರ್ಣನೆಯೆ ಪ್ರಮುಖವಾಗಿದೆ. ಎಲ್ಲ ತೀರ್ಥಂಕರರಿಗೂ ಸಮಾನವಾದ ಈ ಪಂಚಕಲ್ಯಾಣಗಳಲ್ಲಿ ಯಾವ ವೈವಿಧ್ಯವೂ ಇಲ್ಲ. ತೀರ್ಥಂಕರತ್ವ ಪಡೆಯಲು ಆಯಾ ಜೀವ ಹಿಂದಿನ ಹಲವು ಜನ್ಮಗಳಲ್ಲಿ ಮಾಡಿಕೊಂಡ ಸಿದ್ಧತೆಯನ್ನು ವರ್ಣಿಸುವ ಭವಾವಳಿ ಮಾತ್ರ ಒಬ್ಬೊಬ್ಬರಿಗೆ ಒಂದೊಂದು ವಿಧ. ಜೀವದ ಕ್ರಮವಿಕಾಸವನ್ನು ದೃಷ್ಟಿಯಲ್ಲಿಟ್ಟುಕೊಂಡರೆ ಸಾಂಪ್ರದಾಯಿಕವಾದ ಪಂಚಕಲ್ಯಾಣವರ್ಣನೆಗಿಂತ ಸಿದ್ಧಿಗೆ ಒಯ್ಯುವ ಸಾಧನಮಾರ್ಗವನ್ನು ತೋರಿಸುವ ಈ ಭವಾವಳಿಯೇ ಹೆಚ್ಚು ಮುಖ್ಯವೆನ್ನಬಹುದು.

### ಭವಾವಳಿಯ ಗುರಿ

ಆದಿಪುರಾಣದ ಸಂಪಾದಕರು, "ಅಲ್ಲಲ್ಲೆ ಅಪ್ರಕೃತವಾಗಿಯೂ ನೀರಸವಾಗಿಯೂ ಇರುವ ಜನ್ಮಾಂತರಕಥಾಗಹನವು ತುಂಬಿರುವುದರಿಂದ ಇದ್ದ ರಸವೂ ಮರೆಯಾಗಿ ಹೋಗಿದೆ" ಎಂದಿದ್ದಾರೆ. ಮೇಲಿನ ವಿವರಣೆಯನ್ನು ನೆನಪಿಟ್ಟುಕೊಂಡರೆ ಈ ಜನ್ಮಾಂತರಕಥೆಗಳು ಅಪ್ರಕೃತವೆಂದು ಹೇಳಲಾಗುವುದಿಲ್ಲ. ಅವು ಅತ್ಯಾವಶ್ಯಕವೆಂದೇ ಒಪ್ಪಿಕೊಳ್ಳಬೇಕಾಗುತ್ತದೆ. ಉಳಿದ ಕಡೆ ಹೇಗಾದರೂ ಇರಲಿ, ಪಂಪನ ನಿರೂಪಣೆಯಲ್ಲಂತೂ ಅವು ನೀರಸವಾಗಿಲ್ಲ; ರಸವತ್ತಾಗಿಯೇ ಇವೆ. ಜೈನ ಪುರಾಣಗಳಲ್ಲಿ ತೊಡಕುತೊಡಕಾಗಿ ತೋರುವ ಈ ಜನ್ಮಾಂತರಕಥೆಗಳು ಇನ್ನೂ ತೊಡಕಾಗಿರುವ ಸಂಸಾರದ ಪ್ರತಿಬಿಂಬ.

ಓದುವವರಿಗೆ ಹುಟ್ಟು ಸಾವುಗಳ ಅಲೆದಾಟದಲ್ಲಿ ಬೇಸರ ಹುಟ್ಟಿ ಮುಕ್ತಿಯ ಕಡೆ ಮನಸ್ಸು ಹರಿಯುವಂತಾಗಲೆಂಬುದೇ ಈ ಕಥಾಗಹನದ ನಿರೂಪಣೆಯ ಪರಮೋದ್ದೇಶ. ಪುರಾಣಗಳು ಸಂಸಾರದಲ್ಲಿ ಜೀವ ಎತ್ತುವ ಲೆಕ್ಕಕ್ಕೆ ಸಿಕ್ಕದ ಜನ್ಮಗಳನ್ನೆಲ್ಲ ವಿವರಿಸಹೋಗದೆ ಆ ಜೀವಕ್ಕೆ ಕಾಲಲಬ್ಧಿ ದೊರೆತ ಜನ್ಮದಿಂದ ಮಾತ್ರ ಅದರ ಚರಿತ್ರೆಯನ್ನು ಹೇಳತೊಡಗುತ್ತವೆ.

## ಭವಾವಳಿಯ ಸ್ವರೂಪ

ಒಂದು ಜೀವದ ಕಥೆಯಲ್ಲಿ ಬೇರೆ ಹಲವು ಜೀವಗಳ ಕಥೆ ಹೆಣೆದುಕೊಂಡಿರುವುದುಂಟು. ಪ್ರೀತಿಯಾಗಲಿ ದ್ವೇಷವಾಗಲಿ ಒಂದೇ ಜನ್ಮಕ್ಕೆ ಮುಗಿದುಹೋಗುವುದಿಲ್ಲ; ಬೆನ್ನಂಟಿ ಹಲವು ಜನ್ಮಗಳಿಗೆ ಹರಿದು ಬರುತ್ತದೆ. ರಾಗದ್ವೇಷಗಳ ಈ ಮೋಹ ಜೀವಗಳನ್ನು ಸಂಕೋಲೆಯಂತೆ ಬಂಧಿಸಿಬಿಡುತ್ತದೆ. ಅದರ ಕಟ್ಟು ವಜ್ರಲೇಪದಂತೆ ಬಹು ಬಿಗಿ. ಈ ಮೋಹ ನಿಗಳವನ್ನು ಕತ್ತರಿಸಲು ತುಂಬ ಹೆಣಗಬೇಕು. ಪರಸ್ಪರ ಪ್ರೀತಿಯಿಂದ ಒಂದುಗೂಡಿ ಒಬ್ಬರಿಗೊಬ್ಬರು ನೆರವಾಗಿ ಒಟ್ಟಿಗೆ ಶ್ರೇಯಸ್ಸನ್ನು ಸಾಧಿಸಿದ ಹಲವು ಜೀವಗಳ ಕಥೆ ಆದಿಪುರಾಣದಲ್ಲಿ ಬರುತ್ತದೆ. ಹಿತಪರಿಣಾಮದಿಂದ ಕೂಡಿದ ಆ ಭವಾವಳಿಯ ಪ್ರತಿಯೊಂದು ಜೀವವೂ "ಮುನ್ನಿನ ಭವಂ ಈ ಭವಂ ಮುಱುಭವಂ ಸಫಲಂ" ಎಂದು ಹಿಗ್ಗಿನಿಂದ ಹೇಳಿಕೊಳ್ಳಬಹುದು. ಇದಕ್ಕೆ ಪ್ರತಿಯಾಗಿ ದ್ವೇಷ ಜನ್ಮದಿಂದ ಜನ್ಮಕ್ಕೆ ಹರಿದು ಹೆಚ್ಚುತ್ತ ಬಂದದ್ದನ್ನೂ ಆ ಪೂರ್ವವೈರದಿಂದ ಒಂದು ಜೀವ ಮತ್ತೊಂದಕ್ಕೆ ಕೇಡಿನ ಮೇಲೆ ಕೇಡು ಮಾಡುತ್ತ ಬಂದದ್ದನ್ನೂ, ಆ ಕೇಡಿಗೆ ಗುರಿಯಾದ ಜೀವ ಪುಟಕ್ಕಿಟ್ಟ ಚಿನ್ನದಂತೆ ತನ್ನ ಕೊಳೆಯನ್ನು ಕಳೆದುಕೊಂಡು ಬಹು ಬೇಗ ಸದ್ಗತಿ ಪಡೆದದ್ದನ್ನೂ, ಅದನ್ನು ಕಂಡ ಕೇಡಿಗ ಜೀವವೂ ಕಡೆಗೆ ಸನ್ಮಾರ್ಗಕ್ಕೆ ತಿರುಗಿದ್ದನ್ನೂ ಪಾರ್ಶ್ವನಾಥಪುರಾಣ ಬಹು ಸುಂದರವಾಗಿ ವರ್ಣಿಸುತ್ತದೆ.

## ಪಂಚಕಲ್ಯಾಣಗಳ ವಿವರ

ಭವಾವಳಿಯನ್ನು ಬಿಟ್ಟರೆ ತೀರ್ಥಂಕರರ ಚರಿತ್ರೆಯ ಮುಖ್ಯ ಸಂಗತಿಗಳು ಯಾವುವೆಂದರೆ: ಮುಂದೆ ತೀರ್ಥಂಕರನಾಗುವ ಭವ್ಯಜೀವ ಹಲವು ಜನ್ಮಗಳನ್ನೆತ್ತಿ ಆತ್ಮಗುಣಗಳನ್ನು ಬೆಳಸಿಕೊಳ್ಳುತ್ತ ಬಂದು ಸಂಸಾರವನ್ನು ದಾಟಲಿರುವಾಗ ಮನುಷ್ಯನಾಗಿ ಹುಟ್ಟಿ ತೀರ್ಥಂಕರತ್ವ ಕೊಡುವ ಪುಣ್ಯಕರ್ಮ

ಗಳನ್ನು ಮಾಡಿ ಸತ್ತು ಸ್ವರ್ಗದಲ್ಲಿ ದೇವನಾಗಿರುತ್ತದೆ. ದೇವಲೋಕದ ಆಯುಸ್ಸು ಮುಗಿದು ಆ ಜೀವ ಭೂಮಿಯಲ್ಲಿ ಹುಟ್ಟಲು ಆರು ತಿಂಗಳು ಉಳಿದಿರುವಾಗ ಯಾವ ರಾಜನ ರಾಣಿಯ ಗರ್ಭದಲ್ಲಿ ತೀರ್ಥಂಕರನ ಅವತಾರವಾಗುವುದೊ ಆ ರಾಜನ ರಾಜ್ಯದಲ್ಲಿ* ಇಂದ್ರನ ಅಪ್ಪಣೆಯ ಪ್ರಕಾರ ಕುಬೇರ ಆರು ತಿಂಗಳ ಕಾಲ ಚಿನ್ನರನ್ನಗಳ ಮಳೆ ಕರೆಯುತ್ತಾನೆ. ಇಂದ್ರನ ಆಜ್ಞೆಯಿಂದ ಶ್ರೀ ಹ್ರೀ ಮೊದಲಾದ ದೇವಿಯರು ತೀರ್ಥಂಕರಜನನಿಯ ಗರ್ಭಶೋಧನೆ ಮಾಡುತ್ತಾರೆ. ದೇವತಾಸ್ತ್ರೀಯರು ಆಕೆಯ ಶುಶ್ರೂಷೆ ಮಾಡುತ್ತಿರುತ್ತಾರೆ. ಆಕೆ ಹದಿನಾರು ಶುಭ ಸ್ವಪ್ನಗಳನ್ನು ಕಾಣುತ್ತಾಳೆ ಮತ್ತು ತೀರ್ಥಂಕರನ ಲಾಂಛನ ತನ್ನಲ್ಲಿ ಬಂದು ಸೇರಿದಂತೆ ಕನಸು ಕಾಣುತ್ತಾಳೆ. ತೀರ್ಥಂಕರನಾಗುವ ಜೀವ ಸ್ವರ್ಗದಿಂದ ಬಂದು ಆಕೆಯ ಗರ್ಭದಲ್ಲಿ ಅವತರಿಸುತ್ತದೆ. ಆಗ ಇಂದ್ರ ಮೊದಲಾದ ದೇವತೆಗಳೆಲ್ಲ ಬಂದು ತೀರ್ಥಂಕರನ ತಾಯಿ ತಂದೆಗಳಿಗೆ ಮಂಗಳಾಭಿಷೇಕಮಾಡಿ ಉತ್ಸವ ಮಾಡುತ್ತಾರೆ. ಇದು **ಸುರಲೋಕಾವತರೋತ್ಸವ** ಅಥವಾ **ಗರ್ಭಾವತರಣ ಕಲ್ಯಾಣ.**

ಒಂಬತ್ತು ತಿಂಗಳು ಕಳೆದ ಮೇಲೆ ತೀರ್ಥಂಕರನ ಜನನವಾಗುತ್ತದೆ. ಹುಟ್ಟುವಾಗಲೆ ಆತನಿಗೆ ಮತಿ, ಶ್ರುತ, ಅವಧಿ ಎಂಬ ಮೂರು ಜ್ಞಾನಗಳಿರುತ್ತವೆ. ತೀರ್ಥಂಕರನ ಜನ್ಮವನ್ನರಿತು ಸೌಧರ್ಮಾದಿ ಕಲ್ಪಗಳ ಇಂದ್ರರು ದೇವನಿಕಾಯದೊಡನೆ ಬರುತ್ತಾರೆ. ಸೌಧರ್ಮೇಂದ್ರನ ಅಪ್ಪಣೆಯಂತೆ ಇಂದ್ರಾಣಿ ತೀರ್ಥಂಕರನ ತಾಯಿಗೆ ಮಾಯಾನಿದ್ರೆ ಬರಿಸಿ ಪಕ್ಕದಲ್ಲಿ ಮಾಯಾಶಿಶುವನ್ನಿಟ್ಟು ನಿಜವಾದ ಮಗುವನ್ನು ತಂದು ಇಂದ್ರನ ಕೈಗೆ ಕೊಡುತ್ತಾಳೆ. ಇಂದ್ರ ಆ ಮಗುವನ್ನು ಎತ್ತಿಕೊಂಡು ಐರಾವತವನ್ನೇರಿ ದೇವತೆಗಳೊಡನೆ ಮಂದರ (ಮೇರು)ಪರ್ವತಕ್ಕೆ ಹೋಗುತ್ತಾನೆ. ಹೋಗಿ ಅದರ ನೆತ್ತಿಯಲ್ಲಿರುವ ಪಾಂಡುಕಶಿಲೆಯಲ್ಲಿ ಮಗುವನ್ನು ಪೂರ್ವಾಭಿಮುಖವಾಗಿ ಕೂರಿಸಿ ದೇವತೆಗಳು ಕ್ಷೀರಸಮುದ್ರದಿಂದ ತಂದ ಹಾಲಿನಿಂದ ಅಭಿಷೇಕಮಾಡುತ್ತಾರೆ. ಬಳಿಕ ತೀರ್ಥಂಕರ ಶಿಶುವನ್ನು ತಂದು ತಂದೆ ತಾಯಿಗಳಿಗೆ ಒಪ್ಪಿಸಿ ನಾಮಕರಣಮಾಡಿ ಆನಂದನಾಟಕವನ್ನಾಡಿ ದೇವತೆಗಳು ಹೊರಟು ಹೋಗುತ್ತಾರೆ. ಇದು **ಜನ್ಮಾಭಿಷೇಕೋತ್ಸವ** ಅಥವಾ **ಜನ್ಮಾಭಿಷೇಕ ಕಲ್ಯಾಣ.**

ತೀರ್ಥಂಕರಬಾಲಕ ಕ್ರಮಕ್ರಮವಾಗಿ ಬೆಳೆದು ಬಾಳಿ ಸಂಸಾರದಲ್ಲಿ ಬೇಸರ

* ತೀರ್ಥಂಕರರೆಲ್ಲರೂ ಕ್ಷತ್ರಿಯ ಕುಲದಲ್ಲೇ ಹುಟ್ಟುತ್ತಾರೆ.

ಹೊಂದಿ ಸಂನ್ಯಾಸಿಯಾಗ ಬಯಸುತ್ತಾನೆ. ಆಗ ಲೋಕಾಂತಿಕ ದೇವತೆಗಳು ಬಂದು ಉಪದೇಶಮಾಡಿ ವೈರಾಗ್ಯವನ್ನು ದೃಢಮಾಡುತ್ತಾರೆ. ಇಂದ್ರಾದಿಗಳು ಬಂದು ಮಂಗಳಸ್ನಾನ ಮಾಡಿಸುತ್ತಾರೆ. ತೀರ್ಥಂಕರನು ತನ್ನ ಬಂಧುವರ್ಗವನ್ನು ಬೀಳ್ಕೊಂಡು ದೇವತೆಗಳು ತಂದ ಶಿಬಿಕೆಯನ್ನೇರಿ ಮನೆಬಿಟ್ಟು ಹೋಗುತ್ತಾನೆ. ಹೋಗಿ ವನದಲ್ಲಿ ನಿಂತು ದೀಕ್ಷೆಹೊಂದಿ ತಪಸ್ಸಿಗೆ ತೊಡಗುತ್ತಾನೆ. ಮನೆಬಿಟ್ಟು ಹೋಗುವಾಗಿನ ಉತ್ಸವವೇ **ಪರಿನಿಷ್ಕ್ರಾಂತಿ ಮಹೋತ್ಸವ** ಅಥವಾ **ಪರಿನಿಷ್ಕ್ರಮಣ ಕಲ್ಯಾಣ.**

ತಪಸ್ಸಿನಲ್ಲಿ ಕೆಲವು ಕಾಲ ಸಂದ ಬಳಿಕ ಆತನಿಗೆ ಮನಃಪರ್ಯಯವೆಂಬ ನಾಲ್ಕನೆಯ ಜ್ಞಾನ ಹುಟ್ಟುತ್ತದೆ. ಆಮೇಲೆ ಆತನು ಭಿಕ್ಷೆಗೆ ಹೊರಡುತ್ತಾನೆ. ಕೇವಲಜ್ಞಾನವನ್ನು ಸಂಪಾದಿಸಲು ಮಾಡಬೇಕಾದ ಉಗ್ರ ತಪಸ್ಸಿಗೆ ತಕ್ಕ ಶರೀರದಾರ್ಢ್ಯವನ್ನು ಪಡೆಯಲು ಈ ಭಿಕ್ಷೆ ಅತ್ಯಾವಶ್ಯಕ. ಈ ಭಿಕ್ಷೆಯನ್ನು ನೀಡಿದವನ ಪುಣ್ಯಕ್ಕೆ ಎಣೆಯಿಲ್ಲ. ನಾಡನ್ನು ಸುತ್ತಿ ಯೋಗ್ಯವಾದ ಕಡೆ ಭಿಕ್ಷೆಯನ್ನು ಸ್ವೀಕರಿಸಿದಾಗ ಪಂಚಾಶ್ಚರ್ಯಗಳಾಗುತ್ತದೆ. ಭಿಕ್ಷೆ ತೆಗೆದುಕೊಂಡು ಮತ್ತೆ ತಪಸ್ಸಿಗೆ ತೊಡಗಿ ಘಾತಿಕರ್ಮಗಳನ್ನೆಲ್ಲ ನಾಶಮಾಡಿದ ಮೇಲೆ ಎಲ್ಲಕ್ಕೂ ಮಿಗಿಲಾದ ಕೇವಲಜ್ಞಾನ ಉಂಟಾಗುತ್ತದೆ. ಆಗ ಮತ್ತೆ ಇಂದ್ರ ದೇವನಿಕಾಯದೊಡನೆ ಬಂದು ಪೂಜಿಸಿ ಆನಂದೋತ್ಸವ ನಡಸುತ್ತಾನೆ. ಇದು **ಕೈವಲ್ಯ ಬೋಧೋತ್ಸವ** ಅಥವಾ **ಕೇವಲ ಜ್ಞಾನ ಕಲ್ಯಾಣ.**

ಕೇವಲಜ್ಞಾನ ಪಡೆದು ಸರ್ವಜ್ಞನಾದವನೇ ಜಿನ, ಅರ್ಹ. ಲೋಕಕ್ಕೆ ಧರ್ಮಬೋಧೆ ಮಾಡಿದ ಜಿನನೇ ತೀರ್ಥಂಕರ. ತೀರ್ಥಂಕರನ ಧರ್ಮಬೋಧೆಗೆ ಅನುಕೂಲಿಸುವಂತೆ ಕುಬೇರನು ಸಮವಸರಣ ಮಂಟಪವನ್ನು ನಿರ್ಮಿಸುತ್ತಾನೆ. ಈ ಸಮವಸರಣದಲ್ಲಿ ಮನುಷ್ಯರೂ ದೇವತೆಗಳೂ ಸಮಸ್ತ ಪ್ರಾಣಿಗಳೂ ನೆರೆದು ತೀರ್ಥಂಕರನ ದಿವ್ಯಬೋಧನೆಗಳನ್ನು ಕೇಳುತ್ತಾರೆ. ಸ್ವಾಮಿಯ ಸನ್ನಿಧಿಯಿಂದ ಸರ್ವ ಪ್ರಾಣಿಗಳ ಪರಸ್ಪರ ವೈರವೆಲ್ಲ ನಾಶವಾಗಿ ಎಲ್ಲೆಲ್ಲೂ ಪ್ರೇಮ ಉಕ್ಕುತ್ತದೆ. ಈ ಸಮವಸರಣದೊಡನೆ ತೀರ್ಥಂಕರ ಹಲವು ಕಾಲ ನಾಡಿನಲ್ಲೆಲ್ಲ ಸಂಚರಿಸಿ ಧರ್ಮವೃದ್ಧಿಮಾಡಿ, ಆಯುಸ್ಸು ತೀರಿದಂದು ಅಘಾತಿ ಕರ್ಮಗಳನ್ನೂ ಶುಕ್ಲಧ್ಯಾನದಿಂದ ನಾಶಮಾಡಿ ದೇಹವನ್ನು ತೊರೆದು ಮುಕ್ತಿಹೊಂದುತ್ತಾನೆ. ಆಗ ದೇವತೆಗಳು ತೀರ್ಥಂಕರನ ದೇಹವನ್ನು ದಹನ ಮಾಡಿ ಚಿತಿಯ ಭಸ್ಮವನ್ನು ಹಣೆಗಿಟ್ಟುಕೊಂಡು ಆನಂದನೃತ್ಯ ಮಾಡು

ತ್ತಾರೆ. ಇದೇ **ಪರಿನಿರ್ವಾಣಮಹೋತ್ಸವ** ಅಥವಾ **ಪರಿನಿರ್ವಾಣ ಕಲ್ಯಾಣ.**

### ಚಕ್ರವರ್ತಿಗಳ ದಿಗ್ವಿಜಯ

ತೀರ್ಥಂಕರರ ಚರಿತ್ರೆಯಂತೆಯೇ ಚಕ್ರವರ್ತಿಗಳ ಚರಿತ್ರೆ ಕೂಡ ಒಂದೇ ಅಚ್ಚಿನದು. ಮುಖ್ಯ ವಿವರಗಳನ್ನು ಇಲ್ಲಿ ಕೊಟ್ಟಿದೆ: ಚಕ್ರವರ್ತಿಯಾಗುವ ಪುಣ್ಯವಂತನಾದ ರಾಜನ ಆಯುಧಾಗಾರದಲ್ಲಿ ಚಕ್ರರತ್ನ ಹುಟ್ಟುತ್ತದೆ. ಅದರ ಜೊತೆಯಲ್ಲೆ ಖಡ್ಗರತ್ನ, ದಂಡರತ್ನ, ಛತ್ರರತ್ನಗಳೂ ಹುಟ್ಟುತ್ತವೆ. ಶ್ರೀಗೃಹದಲ್ಲಿ (ಕೋಶಾಗಾರದಲ್ಲಿ) ಮಣಿರತ್ನ, ಚರ್ಮ (ಗುರಾಣಿ) ರತ್ನ, ಕಾಕಿಣೀ ರತ್ನಗಳು ಹುಟ್ಟುತ್ತವೆ. ಇವುಗಳಲ್ಲದೆ ಗೃಹಪತಿ, ಸೇನಾಪತಿ, ಸ್ಥಪತಿ (ಬಡಗಿ), ಪುರೋಹಿತ, ಸ್ತ್ರೀರತ್ನಗಳೂ ಗಜರತ್ನ ಅಶ್ವರತ್ನಗಳೂ ಆತನಿಗೆ ದೊರೆಯುತ್ತವೆ. ಈ ಚತುರ್ದಶ *ರತ್ನಗಳ ಜೊತೆಗೆ †ನವನಿಧಿಗಳೂ ಕೈಸೇರುತ್ತವೆ.

---

* ಚಕ್ರವರ್ತಿಯ ದೊಡ್ಡ ಸೈನ್ಯವನ್ನೆಲ್ಲ ತನ್ನ ನೆರಳಿನಲ್ಲಿ ಕಾಪಿಡುವಂತೆ ಹಿಗ್ಗುವ ಸಾಮರ್ಥ್ಯವುಳ್ಳದ್ದು ಛತ್ರರತ್ನ. ಅಗಾಧ ಜಲದುರ್ಗಗಳನ್ನು ದಾಟಿಸುವುದಕ್ಕೂ ಸಮಸ್ತಸೇನೆಗೂ ಆಶ್ರಯ ಕೊಡುವುದಕ್ಕೂ ಚರ್ಮರತ್ನ ಸಮರ್ಥವಾಗಿರುವುದು. ವಿಜಯಾರ್ಧ ಪರ್ವತದ ಗುಹೆಗಳ ವಜ್ರದ ಬಾಗಿಲುಗಳನ್ನು ತೆರೆಯಲು ದಂಡರತ್ನ ನೆರವಾಗುತ್ತದೆ. ಕಾಕಿಣೀರತ್ನ ತನ್ನ ಕಾಂತಿಯಿಂದ ಎಂಥ ದಟ್ಟವಾದ ಕತ್ತಲೆಯನ್ನಾದರೂ ಹೋಗಲಾಡಿಸಿ ಸೂರ್ಯಪ್ರಕಾಶದಂತೆ ಬೆಳಕುಂಟುಮಾಡುತ್ತದೆ. ಚಕ್ರರತ್ನ ಎಲ್ಲ ಶತ್ರುಗಳನ್ನೂ ಬಗ್ಗಿಸಿ ಚಕ್ರವರ್ತಿ ಪದವಿಯನ್ನು ಸಾಧಿಸಿಕೊಡುತ್ತದೆ. ಉಳಿದ ರತ್ನಗಳು ಆಯಾ ವರ್ಗದಲ್ಲಿ ಅತ್ಯುತ್ತಮವಾದವು. ಈ ಒಂದೊಂದು ರತ್ನಕ್ಕೂ ಸಹಸ್ರ ಯಕ್ಷರ ರಕ್ಷಕದಳವಿರುತ್ತದೆ.

† ನವನಿಧಿಗಳು: ೧ ಕಾಲ—ಇಂದ್ರಿಯಗಳಿಗೆ ಸುಖಕೊಡುವ ವೀಣೆ, ಕೊಳಲು ಮೊದಲಾದ ವಾದ್ಯಧ್ವನಿಗಳನ್ನು ಕಾಲಕಾಲಕ್ಕೆ ಉಂಟುಮಾಡುತ್ತದೆ. ೨ ಮಹಾಕಾಲ—ಅಸಿ, ಮಷಿ ಮೊದಲಾದ ಷಟ್ಕರ್ಮಗಳಿಗೆ ಸಾಧನವಾದ ಸಾಮಗ್ರಿಗಳನ್ನು ಕಾಲಕಾಲಕ್ಕೆ ಒದಗಿಸುತ್ತದೆ. ೩ ನೈಸರ್ಪ—ಹಾಸಿಗೆ, ಪೀಠ, ಮನೆ ಮೊದಲಾದ ಪದಾರ್ಥಗಳನ್ನು ಉಂಟುಮಾಡುತ್ತದೆ. ೪ ಪಾಂಡುಕ—ಧಾನ್ಯ ಸಂಪತ್ತನ್ನೂ ಷಡ್ರಸಗಳನ್ನೂ ಉಂಟುಮಾಡುತ್ತದೆ. ೫ ಪದ್ಮ—ರೇಷ್ಮೆ ಮೊದಲಾದ ನಾನಾ ಬಗೆಯ ಬಟ್ಟೆಗಳನ್ನು ಕೊಡುತ್ತದೆ. ೬ ಪಿಂಗಳ—ಬಗೆಬಗೆಯ ದಿವ್ಯಾಭರಣಗಳನ್ನು ಕೊಡುತ್ತದೆ. ೭ ಮಾಣವಕ—ನೀತಿಶಾಸ್ತ್ರಗಳೂ ಇತರ ಶಾಸ್ತ್ರಗಳೂ ಇದರಿಂದ ತಲೆದೋರುತ್ತವೆ. ೮ ಶಂಖ—ಚಿನ್ನವನ್ನು ಸೃಷ್ಟಿಸುತ್ತದೆ. ೯ ಸರ್ವರತ್ನ—ನೀಲ, ಇಂದ್ರನೀಲ ಮೊದಲಾದ ಎಲ್ಲ ರತ್ನಗಳನ್ನೂ ಕೊಡುತ್ತದೆ. ಈ ನವನಿಧಿಗಳಿರುವುದರಿಂದ ಚಕ್ರವರ್ತಿ ಗೃಹಕೃತ್ಯದ ಆದಾಯ ವೆಚ್ಚಗಳಲ್ಲಿ ನಿಶ್ಚಿಂತನಾಗಿರುತ್ತಾನೆ.

ಚಕ್ರರತ್ನಕ್ಕೆ ಪೂಜೆಮಾಡಿ ಚಕ್ರವರ್ತಿ ದೊಡ್ಡ ದಂಡಿನೊಡನೆ ದಿಗ್ವಿಜಯಕ್ಕೆ ಹೊರಡುತ್ತಾನೆ. ಚಕ್ರರತ್ನ ದಾರಿತೋರಿಸುತ್ತ ಮುಂದೆ ನಡೆಯುತ್ತದೆ. ಅದನ್ನು ಹಿಂಬಾಲಿಸಿ ಸೇನಾಪತಿಯೂ ಅವನನ್ನು ಅನುಸರಿಸಿ ಸಮಸ್ತ ಸೇನೆಯೂ ನಡೆಯುತ್ತದೆ. ದಾರಿಗೆ ಅಡ್ಡವಾಗಿ ಸಿಕ್ಕಿದ ಏರು ದಿಣ್ಣೆಗಳನ್ನು ದಂಡರತ್ನ ಪುಡಿಪುಡಿಮಾಡಿ ದಾರಿಯನ್ನು ಸಮಮಾಡುತ್ತದೆ.

ಸೈನ್ಯ ಮೊದಲು ಪೂರ್ವ ಮುಖವಾಗಿ ಹೊರಡುತ್ತದೆ. ರಾಜರೆಲ್ಲ ಕಪ್ಪ ಕಾಣಿಕೆಗಳೊಡನೆ ಚಕ್ರವರ್ತಿಯನ್ನು ಬಂದು ಕಾಣುತ್ತಾರೆ. ಮಲೆತವರನ್ನು ಕಾಲ್ಗೆರಗಿಸುತ್ತ ಚಕ್ರವರ್ತಿ ಗಂಗಾನದಿಯ ದಡದಲ್ಲೆ ನಡೆದು ಗಂಗಾದ್ವಾರದಲ್ಲಿ ಬೀಡು ಬಿಡುತ್ತಾನೆ. ಅಲ್ಲಿ ಮೂರು ದಿನ ವ್ರತೋಪವಾಸಗಳನ್ನು ನಡಸಿದ ಬಳಿಕ ಚಕ್ರಿ ರಥವನ್ನೇರಿ ಲವಣಸಮುದ್ರವನ್ನು ಪ್ರವೇಶಿಸಿ ಮುನ್ನುಗ್ಗುತ್ತಾನೆ. ಹನ್ನೆರಡು ಯೋಜನ ಹೋದಮೇಲೆ ರಥ ನಿಂತುಬಿಡುತ್ತದೆ. ಚಕ್ರವರ್ತಿ ಅಲ್ಲಿಂದಲೆ ಬಿಲ್ಲಿಗೆ ಬಾಣ ಹೂಡಿ ಮಾಗಧಾಮರನ ಸಭೆಯಲ್ಲಿ ಬೀಳುವಂತೆ ಹೊಡೆಯುತ್ತಾನೆ. ಮಾಗಧಾಮರ ಮೊದಲು ದರ್ಪೋಕ್ತಿಗಳನ್ನಾಡಿದರೂ ಕುಲವೃದ್ಧರ ಹಿತೋಪದೇಶಕ್ಕೆ ತಲೆಬಾಗಿ ಕಾಣಿಕೆಕೊಟ್ಟು ಚಕ್ರವರ್ತಿಗೆ ವಶವಾಗುತ್ತಾನೆ.

ಬಳಿಕ ಚಕ್ರವರ್ತಿ ದಕ್ಷಿಣಮುಖವಾಗಿ ನಡೆದು ವೈಜಯಂತೀ ದ್ವಾರದಲ್ಲಿ ಬೀಡುಬಿಟ್ಟು ಮಾಗಧಾಮರನನ್ನು ವಶಪಡಿಸಿಕೊಂಡ ರೀತಿಯಲ್ಲೆ ವರತನು ನೆಂಬ ವ್ಯಂತರನನ್ನು ಜಯಿಸಿ ಕಪ್ಪ ತೆಗೆದುಕೊಳ್ಳುತ್ತಾನೆ. ಅಲ್ಲಿಂದ ಕಡಲ ತಡಿಯಲ್ಲೆ ಹೋಗಿ ಸಿಂಧುದ್ವಾರದಲ್ಲಿ ಬೀಡುಬಿಟ್ಟು ಹಿಂದಿನಂತೆಯೆ ಸಮುದ್ರದಲ್ಲಿ ನುಗ್ಗಿ ಪ್ರಭಾಸಾಮರನನ್ನು ವಶಪಡಿಸಿಕೊಳ್ಳುತ್ತಾನೆ.

ಮುಂದೆ ಸಿಂಧೂನದಿಯ ತೀರದಲ್ಲೆ ಉತ್ತರ ಮುಖವಾಗಿ ನಡೆಯುತ್ತ ವಿಜಯಾರ್ಧ ಪರ್ವತಕ್ಕೆ ಬಂದು ಬೀಡುಬಿಡುತ್ತಾನೆ. ಆಗ ಆ ಗಿರಿಯ ಅಧಿನಾಯಕನಾದ ವಿಜಯಾರ್ಧಕುಮಾರನೆಂಬ ದೇವನು ಚಕ್ರವರ್ತಿಯನ್ನು ಬಂದು ಕಂಡು ವಿಧೇಯನಾಗಿ ವಿಜಯಾಭಿಷೇಕ ಮಾಡಿ ಹೋಗುತ್ತಾನೆ. ಅಲ್ಲಿ ಶಿಬಿರದಲ್ಲಿ ನಿಂತು ಗಂಗಾ ಸಿಂಧುಗಳೆಡೆಯ ದಕ್ಷಿಣ ಭರತದ ರಾಜರನ್ನೆಲ್ಲ ಅಡಿಗೆರಗಿಸುತ್ತಾನೆ. ಆ ಕಾಲದಲ್ಲಿ ಕೃತಮಾಲನೆಂಬ ಅಮರನು ಬಂದು ವಿಜಯಾರ್ಧ ಪರ್ವತದ ಉತ್ತರಕ್ಕೆ ಹೋಗಲು ದಾರಿಕೊಡುವ ತಮಿಸ್ರಗುಹೆಯ ವಜ್ರದ ಬಾಗಿಲನ್ನು ತೆರೆಯುವ ವಿಧಾನವನ್ನು ತಿಳಿಸಿ ಹೋಗುತ್ತಾನೆ. ಅವನ

ಸೂಚನೆಯಂತೆ ಸೇನಾಪತಿ ದಂಡರತ್ನದಿಂದ ಹೊಡೆದು ಗುಹೆಯ ಬಾಗಿಲನ್ನು ತೆರೆಯುತ್ತಾನೆ. ಅದರ ಬೆಂಕಿ ಆರುವವರೆಗೆ ಆರು ತಿಂಗಳ ಕಾಲ ಸಿಂಧುವಿನ ಪಶ್ಚಿಮದಲ್ಲಿರುವ ಮ್ಲೇಚ್ಛ ಖಂಡವನ್ನು ನುಗ್ಗಿ ಗೆದ್ದು ಬರುತ್ತಾನೆ. ಬಳಿಕ ಚಕ್ರವರ್ತಿ ಸೈನ್ಯ ಸಮೇತನಾಗಿ ತಮಿಸ್ರಗುಹೆಯನ್ನು ಪ್ರವೇಶಿಸುತ್ತಾನೆ. ಅಲ್ಲಿನ ಗೋಡೆಗಳ ಮೇಲೆ ಕಾಕಿಣೀರತ್ನದಿಂದ ಚಂದ್ರಸೂರ್ಯರನ್ನು ಬರೆದು ಆ ಬೆಳಕಿನಲ್ಲೂ ಚಕ್ರರತ್ನದ ಕಾಂತಿಯಲ್ಲೂ ಪಡೆ ಮುಂದೆ ನಡೆಯುತ್ತದೆ. ನಡುದಾರಿಯಲ್ಲಿ ಎರಡು ಹೊಳೆಗಳು ಸಿಕ್ಕುತ್ತವೆ. ಒಂದು ತನ್ನಲ್ಲಿ ಬಿದ್ದದ್ದನ್ನೆಲ್ಲ, ಬೆಂಡನ್ನೇ ಆದರೂ, ಕೆಳಕ್ಕೆ ಅದುಮುತ್ತದೆ. ಇನ್ನೊಂದು ಗುಂಡನ್ನೇ ಆದರೂ ಮೇಲಕ್ಕೆ ಚಿಮ್ಮುತ್ತದೆ. ಸ್ಥಪತಿರತ್ನ ತನ್ನ ಬುದ್ಧಿಬಲದಿಂದ ಆ ನದಿಗಳಿಗೆ ಸೇತುವೆ ಕಟ್ಟುತ್ತಾನೆ. ಸೈನ್ಯ ಮುಂದೆ ನಡೆದು ಗುಹೆಯ ಉತ್ತರದ ಬಾಗಿಲಿನಿಂದ ಹೊರಹೊರಡುತ್ತದೆ.

ಅಲ್ಲಿಯೂ ಸೇನಾಪತಿ ಪಶ್ಚಿಮ ಮ್ಲೇಚ್ಛಖಂಡವನ್ನು ಬಾಯ್ಕೇಳಿಸಿ ಬರುತ್ತಾನೆ. ಮಧ್ಯಮ ಖಂಡದಲ್ಲಿ ಬಲಾಕಾವರ್ತರೆಂಬ* ಇಬ್ಬರು ರಾಜರು ಮಲೆತು ನಿಲ್ಲುತ್ತಾರೆ. ಅವರ ಸಹಾಯಕ್ಕೆ ಮೇಘಮುಖರೆಂಬ ನಾಗದೇವತೆಗಳು ಬಂದು ಸಂತತವಾಗಿ ಏಳು ದಿನ ಮಳೆಗರೆಯುತ್ತಾರೆ. ಆ ಜಲಪ್ರಳಯದಲ್ಲಿ ಚಕ್ರವರ್ತಿಯ ಸೇನೆಯೆಲ್ಲ ಚರ್ಮರತ್ನ ಛತ್ರರತ್ನಗಳ ನಡುವೆ ಅಡಗಿ ಸುರಕ್ಷಿತವಾಗಿರುತ್ತದೆ. ಸ್ಥಪತಿರತ್ನ ನಿರ್ಮಿಸಿ ಕೊಟ್ಟ ಆಕಾಶದಲ್ಲಿ ನಡೆಯುವ ರಥಗಳನ್ನೇರಿ ಕಾದಲು ಮೇಘಮುಖರು ಸೋತುಹೋಗುತ್ತಾರೆ. ಬಲಾಕಾವರ್ತರು ಅಡಿಗೆರಗುತ್ತಾರೆ.

ಬಲಾಕಾವರ್ತರನ್ನು ಗೆದ್ದಮೇಲೆ ಚಕ್ರವರ್ತಿಯ ವಿಜಯಸೇನೆ ಸಿಂಧೂ ನದಿಯ ದಡದಲ್ಲೆ ಹೋಗಿ ಸಿಂಧು ಪ್ರಪಾತವನ್ನು ಸೇರುತ್ತದೆ. ಅಲ್ಲಿ ಸಿಂಧೂದೇವಿ ಸ್ವತಃ ಬಂದು ಚಕ್ರವರ್ತಿಗೆ ಅಭಿಷೇಕಮಾಡಿ ಹರಸುತ್ತಾಳೆ. ಅಲ್ಲಿಂದ ನಡೆದು ಹಿಮವತ್ಪರ್ವತದ ಮಧ್ಯಮ ಕೂಟದಲ್ಲಿ ಸೇನೆ ಬೀಡುಬಿಡುತ್ತದೆ. ಚಕ್ರವರ್ತಿ ವ್ರತೋಪವಾಸಗಳನ್ನು ನಡಸಿ, ಹಿಮವತ್‌ಕುಮಾರನು ಬಂದು ಓಲೈಸಲು ಉತ್ತರ ಭರತದ ಮಧ್ಯಮ ಖಂಡದ ರಾಜರನ್ನೆಲ್ಲ ಗೆದ್ದು ವೃಷಭಾದ್ರಿಯನ್ನು ಸೇರುತ್ತಾನೆ. ಅಲ್ಲಿನ ಶಿಲೆಯಲ್ಲಿ (ಪೂರ್ವ ಚಕ್ರವರ್ತಿಗಳ ಪ್ರಶಸ್ತಿಯ

---

*ಚಿಲಾತಾವರ್ತರೆಂದು ಕೆಲವು ಕಡೆ ಹೇಳಿದೆ.

ಬಳಿ, ಯಾವುದಾದರೊಂದನ್ನು ಅಳಿಸಿ) ತನ್ನ ವಿಜಯ ಪ್ರಶಸ್ತಿಯನ್ನು ಕೆತ್ತಿಸುತ್ತಾನೆ.

ಅಲ್ಲಿಂದ ಮುಂದೆ ಗಂಗಾಕೂಟಕ್ಕೆ ಹೋಗಿ ಗಂಗಾದೇವಿಯಿಂದ ಅಭಿಷಿಕ್ತನಾಗಿ ಆಶೀರ್ವಾದಹೊಂದಿ ದಕ್ಷಿಣ ಮುಖವಾಗಿ ಗಂಗಾತೀರದಲ್ಲೆ ಪ್ರಯಾಣ ಮಾಡಿ ವಿಜಯಾರ್ಧ ಪರ್ವತದ ಕಾಂಡಕಪ್ರಪಾತ ಗುಹೆಯ ಬಳಿ ಬೀಡು ಬಿಡುತ್ತಾನೆ. ಅಲ್ಲಿ ಸೇನಾಪತಿ ದಂಡರತ್ನದಿಂದ ಗುಹೆಯ ಬಾಗಿಲನ್ನು ತೆರೆದು ಬೆಂಕಿ ಆರುವವರೆಗೆ ಮೂಡಣ ಮ್ಲೇಚ್ಛಖಂಡವನ್ನು ಗೆದ್ದು ಬರುತ್ತಾನೆ. ಅಷ್ಟರಲ್ಲಿ ವಿಜಯಾರ್ಧ ಪರ್ವತ ನಿವಾಸಿಗಳಾದ ದಕ್ಷಿಣೋತ್ತರ ಶ್ರೇಣಿಗಳ ವಿದ್ಯಾಧರರು ಚಕ್ರವರ್ತಿಯನ್ನು ಬಂದು ಕಂಡು ಓಲೈಸುತ್ತಾರೆ. ಬೆಂಕಿ ಆರಿದ ಮೇಲೆ ವಿಜಯಸೈನ್ಯ ಗುಹೆಯೊಳಗೆ ನಡೆದು ವಿಜಯಾರ್ಧ ಪರ್ವತವನ್ನು ದಾಟಿ ದಕ್ಷಿಣಕ್ಕೆ ಬರುತ್ತದೆ. ಆಗ ಆ ಗುಹಾಕೂಟ ನಿವಾಸಿಯಾದ ನಾಟ್ಯಮಾಲಾಮರನೆಂಬವನು ಚಕ್ರವರ್ತಿಯನ್ನು ಎದುರುಗೊಂಡು ಕಾಣಿಕೆ ಕೊಡುತ್ತಾನೆ. ಸೇನಾಪತಿ ದಕ್ಷಿಣ ಭರತದ ಪೂರ್ವಭಾಗದ ಮ್ಲೇಚ್ಛಖಂಡವನ್ನೂ ಗೆದ್ದು ಬರುತ್ತಾನೆ.

ಈ ದಿಗ್ವಿಜಯ ಕಾಲದಲ್ಲಿ ಚಕ್ರವರ್ತಿಗೆ ಅಪರಿಮಿತ ಸಂಪತ್ತೂ ಅಸಂಖ್ಯ ಕನ್ಯಾರತ್ನಗಳೂ ಕೈಗಾಣಿಕೆಯಾಗಿ ದೊರೆಯುತ್ತವೆ. ಹೀಗೆ ಪಟ್ಖಂಡ ಭರತ ಮಂಡಲವನ್ನೂ ಗೆದ್ದು ದಿಗ್ವಿಜಯವನ್ನು ಮುಗಿಸಿದ ಚಕ್ರವರ್ತಿ ರಾಜಧಾನಿಗೆ ಮರಳುತ್ತಾನೆ. ಅಲ್ಲಿ ಚಕ್ರರತ್ನವನ್ನು ಪೂಜಿಸಿ ಜಿನಮಹಿಮೆಯನ್ನು ಮಾಡಿದ ಬಳಿಕ ಮಾಗಧಾದಿ ದೇವತೆಗಳೂ ಗಂಗಾದಿ ದೇವಿಯರೂ ಸಮಸ್ತ ಕ್ಷತ್ರಿಯರೂ ನೆರೆದು ಪುಣ್ಯನದೀಜಲಗಳಿಂದ ಸಾಮ್ರಾಜ್ಯ ಪಟ್ಟಾಭಿಷೇಕ ಮಾಡುತ್ತಾರೆ. ಆ ಬಳಿಕ ಚಕ್ರವರ್ತಿ ಮಹಾ ವೈಭವದಿಂದ ರಾಜ್ಯಭಾರಮಾಡುತ್ತಿರುತ್ತಾನೆ.

### ಬಲದೇವ, ವಾಸುದೇವ, ಪ್ರತಿವಾಸುದೇವರ ಕಥೆ

ಬಲದೇವ, ವಾಸುದೇವ, ಪ್ರತಿವಾಸುದೇವರ ಕಥೆಯಲ್ಲಿ ಇಷ್ಟು ಸಾಮ್ಯವಿಲ್ಲ. ಬಲದೇವ ವಾಸುದೇವರಿಬ್ಬರೂ ಅಣ್ಣತಮ್ಮಂದಿರು. ಪ್ರತಿವಾಸುದೇವ ಅವರನ್ನು ಎದುರಿಸುವ ಧೃಷ್ಟನಾಯಕ. ಅವನು ಅರ್ಧಚಕ್ರವರ್ತಿ (ಮೂರು ಖಂಡಗಳನ್ನು ಮಾತ್ರ ಗೆದ್ದಿರುವವನು). ತಮ್ಮ ತಮ್ಮೊಳಗೆ ಏಳುವ ಹೋರಾಟದಲ್ಲಿ ಪ್ರತಿವಾಸುದೇವ ವಾಸುದೇವನ ಮೇಲೆ ತನ್ನ ಚಕ್ರವನ್ನು ಪ್ರಯೋಗಿಸು

ತ್ತಾನೆ. ಆದರೆ ಆ ಚಕ್ರ ವಾಸುದೇವನನ್ನು ಘಾತಿಸದೆ ಓಲೈಸುತ್ತದೆ. ಅದೇ ಚಕ್ರವನ್ನು ಅವನು ಪ್ರಯೋಗಿಸಿದಾಗ ಪ್ರತಿವಾಸುದೇವ ತನ್ನ ಚಕ್ರದಿಂದಲೆ ಮಡಿಯುತ್ತಾನೆ. ಈ ಮುಕ್ಕೂಟ ವೀರರ ಕಥೆಗಳ ಹೋಲಿಕೆ ಇಷ್ಟೇ.

### ಶಲಾಕಾ ಪುರುಷ ಚರಿತ್ರೆಯ ಮಾದರಿಗಳು

ತೀರ್ಥಂಕರ ಮತ್ತು ಚಕ್ರವರ್ತಿಗಳ ಚರಿತ್ರೆಗೆ ಪಂಪನ **ಆದಿಪುರಾಣವನ್ನೂ** ಬಲದೇವ, ವಾಸುದೇವ, ಪ್ರತಿವಾಸುದೇವರ ಚರಿತ್ರೆಗೆ 'ಅಭಿನವಪಂಪ' ಎಂದು ಹೆಸರಾದ ನಾಗಚಂದ್ರನ 'ಪಂಪ ರಾಮಾಯಣ' ಎಂದು ಪ್ರಸಿದ್ಧವಾಗಿರುವ **ರಾಮಚಂದ್ರ ಚರಿತ ಪುರಾಣವನ್ನೂ** ಮಾದರಿಯಾಗಿ ತೆಗೆದುಕೊಳ್ಳ ಬಹುದು. ಈ ಎರಡು ಗ್ರಂಥಗಳಿಂದ ಜೈನಪುರಾಣಗಳ ಮುಖ್ಯ ಲಕ್ಷಣ ಗಳನ್ನೂ ತತ್ತ್ವಗಳನ್ನೂ ತಕ್ಕಮಟ್ಟಿಗೆ ಚೆನ್ನಾಗಿಯೇ ತಿಳಿದುಕೊಳ್ಳಬಹುದು.

### ಕನ್ನಡದಲ್ಲಿ ಜೈನಪುರಾಣಗಳು

ಕನ್ನಡಿಗರಾದ ಕೆಲವು ಜೈನ ಕವಿಗಳು ತಮಗೆ ಮೆಚ್ಚಾದ ಕೆಲಕೆಲವು ತೀರ್ಥಂಕರರ ಮತ್ತು ಇತರ ಪುರಾಣಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ಚಾವುಂಡರಾಯನು ತನ್ನ **'ತ್ರಿಷಷ್ಠಿ ಲಕ್ಷಣ ಮಹಾ ಪುರಾಣ'** ಎಂಬ ಗದ್ಯ ಗ್ರಂಥದಲ್ಲಿ ಈ ಅರುವತ್ತು ಮೂವರು ಮಹಾಪುರುಷರ ವಿಷಯದಲ್ಲಿ ತಿಳಿಯಬೇಕಾದ ಮುಖ್ಯಸಂಗತಿಗಳನ್ನೆಲ್ಲ ಸಂಗ್ರಹಿಸಿ ಹೇಳಿದ್ದಾನೆ. ಇದು **'ಚಾವುಂಡರಾಯ ಪುರಾಣ'** ಎಂದು ಪ್ರಸಿದ್ಧವಾಗಿದೆ.* ಕನ್ನಡದಲ್ಲಿ ರುವ ಜೈನ ಪುರಾಣಗಳಲ್ಲೆಲ್ಲ ಪಂಪನ ಆದಿಪುರಾಣ ಕಾಲದಲ್ಲಿ, ವಿಷಯದಲ್ಲಿ ಮತ್ತು ಗುಣದಲ್ಲಿ ಮೊತ್ತಮೊದಲನೆಯದಾಗಿದೆ. ಆದಿಪುರಾಣವೆಂಬ ಹೆಸರು ಎಲ್ಲ ಬಗೆಯಲ್ಲೂ ಅನ್ವರ್ಥವಾಗಿದೆ.

---

* ಆದಿಪುರಾಣವನ್ನೊಳಗೊಂಡ ಮೊದಲನೆಯ ಭಾಗ ಪುಸ್ತಕರೂಪವಾಗಿ ಪ್ರಕಟ ವಾಗಿದೆ. ಮುಂದಿನ ಕೆಲವು ಭಾಗಗಳು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟವಾಗಿವೆ.

| ತೀರ್ಥಂಕರ | ಚಕ್ರವರ್ತಿ | ಕಾಮುದೇವ | ಬಲದೇವ | ವಾಸುದೇವ | ಪ್ರತಿವಾಸುದೇವ |
|---|---|---|---|---|---|
| ೧ ಋಷಭ ವೃ-(ಮ.ಪು.) | ೧ ಭರತ .... | ೧ ಬಾಹುಬಲಿ | | | |
| ೨ ಅಜಿತ | ೨ ಸಗರ .... | ೨ ಪ್ರಜಾಪತಿ | | | |
| ೩ ಶಂಭವ | | ೩ ಶ್ರೀಧರ | | | |
| ೪ ಅಭಿನಂದನ | | ೪ ದರ್ಶನಭದ್ರ | | | |
| ೫ ಸುಮತಿ | | ೫ ಪ್ರಸೇನಚಂದ್ರ | | | |
| ೬ ಪದ್ಮಪ್ರಭ | | ೬ ಚಂದ್ರವರ್ಣ | | | |
| ೭ ಸುಪಾರ್ಶ್ವ | | ೭ ಅಗ್ನಿಯುಕ್ತ | | | |
| ೮ ಚಂದ್ರಪ್ರಭ | | ೮ ಸನತ್ಕುಮಾರ | | | |
| ೯ ಪುಷ್ಪದಂತ | | ೯ ವತ್ಸರಾಜ | | | |
| ೧೦ ಶೀತಲ | | ೧೦ ಕನಕಪ್ರಭ | | | |
| ೧೧ ಶ್ರೇಯಾಂಸ | | ೧೧ ಮೇಘಪ್ರಭ | ೧ ವಿಜಯ | ೧ ತ್ರಿಪುಷ್ಟ (-ಪಿ-, .... ತ್ರಿಪೃಷ್ಠ) | ೧ ಅಶ್ವಗ್ರೀವ |
| ೧೨ ವಾಸುಪೂಜ್ಯ | | ೧೨ ಶಾಂತಿನಾಥ | ೨ ಅಚಲ .... | ೨ ದ್ವಿಪುಷ್ಟ (-ಪಿ-, .... ದ್ವಿಪೃಷ್ಠ) | ೨ ತಾರಕ |
| ೧೩ ವಿಮಲ | | ೧೩ ಕಂಥುನಾಥ | ೩ ಧರ್ಮಪ್ರಭ .... (ಧರ್ಮಭದ್ರ—ಜೈನಿ) (ಸುಧರ್ಮ—ಚಾ. ಪು.) | ೩ ಸ್ವಯಂಭೂ .... | ೩ ನರಕ (ಜೈನಿ) (ಮಧು—ಚಾ. ಪು.) |

ವಿಶೇಷ ವಿಷಯ—ಚಕ್ರವರ್ತಿ, ಬಲದೇವ, ವಾಸುದೇವ, ಪ್ರತಿವಾಸುದೇವರು ಯಾವಯಾವ ತೀರ್ಥಂಕರರ ಕಾಲದಲ್ಲಿದ್ದರೆಂಬುದನ್ನು ತೋರಿಸಿದೆ. ಕಾಮುದೇವರನ್ನು ಮಾತ್ರ ಹಾಗೆ ಕಾಣಿಸಿಲ್ಲ. ಅನುಕ್ರಮವಾಗಿ ಮಾತ್ರ ಹೆಸರು ಬರೆದಿದೆ.

| ತೀರ್ಥಂಕರ | ಚಕ್ರವರ್ತಿ | ಕಾಮದೇವ | ಬಲದೇವ | ವಾಸುದೇವ | ಪ್ರತಿವಾಸುದೇವ |
|---|---|---|---|---|---|
| ೧೪ ಅನಂತ | | ೧೪ ಅರಹನಾಥ | ೪ ಸುಪ್ರಭ | ೪ ಪುರುಷೋತ್ತಮ | ೪ ನಿಶುಂಭ (ಜೈನಿ) (ಮಧುಕೈಟಭ—ಚಾ. ಪು.) |
| ೧೫ ಧರ್ಮನಾಥ | ೩ ಮಘವ<br>೪ ಸನತ್ಕುಮಾರ | ೧೫ ವಿಜಯರಾಜ<br>೧೬ ಶ್ರೀಚಂದ್ರ | ೫ ಸುದರ್ಶನ (ಜೈನಿ) | ೫ ನರಸಿಂಹ (ಪುರುಷ ಸಿಂಹ—ಚಾ. ಪು.) | ೫ ಮಧು ಕೈಟಭ (ಜೈನಿ) (ಹಿರಣ್ಯ ರಿಪು, ನಿಶುಂಭ—ಚಾ. ಪು.) |
| ೧೬ ಶಾಂತಿನಾಥ | ೫ ಶಾಂತಿನಾಥ | ೧೭ ನಳರಾಜ | | | |
| ೧೭ ಕುಂಥುನಾಥ | ೬ ಕುಂಥುನಾಥ | ೧೮ ಹನುಮಂತ | | | |
| ೧೮ ಅರ(ಹ)ನಾಥ | ೭ ಅರ(ಹ)ನಾಥ<br>೮ ಸುಭೌಮ | ೧೯ ಬಲಿರಾಜ<br>೨೦ ವಾಸುದೇವ | ೬ ನಂದಿ (ಆನಂದ)—(ಜೈನಿ). (ನಂದಿಷೇಣ—ಚಾ. ಪು.) | ೬ ಪುಂಡರೀಕ | ೬ ಪ್ರಹ್ಲಾದ (ಜೈನಿ) (ನಿಶುಂಭ—ಚಾ. ಪು.) |
| ೧೯ ಮಲ್ಲಿನಾಥ | ೯ ಪದ್ಮನಾಭ(ಜೈನಿ) ಪದ್ಮ (ಚಾ-ಪು.) | | ೭ ನಂದಿಮಿತ್ರ(ಚಾ. ಪು.) (ನಂದನ—ಜೈನಿ) | ೭ ದತ್ತದೇವ (ಜೈನಿ) (ದತ್ತ—ಚಾ. ಪು.) | ೭ ಬಲಿ (ಜೈನಿ) (ಬಲೀಂದ್ರ—ಚಾ. ಪು.) |
| ೨೦ ಮುನಿಸುವ್ರತ | ೧೦ ಹರಿಷೇಣ | | ೮ ರಾಮಚಂದ್ರ | ೮ ಲಕ್ಷ್ಮಣ | ೮ ರಾವಣ |
| ೨೧ ನಮಿನಾಥ | ೧೧ ಜಯಸೇನ | ೨೧ ಪ್ರದ್ಯುಮ್ನ | | | |
| ೨೨ ನೇಮಿನಾಥ | ೧೨ ಬ್ರಹ್ಮದತ್ತ | ೨೨ ನಾಗಕುಮಾರ | ೯ ಪದ್ಮ (ಜೈನಿ). (ಬಲರಾಮ—ಚಾ. ಪು.) | ೯ ಕೃಷ್ಣ | ೯ ಜರಾಸಂಧ |
| ೨೩ ಪಾರ್ಶ್ವ | | ೨೩ ಜೀವಂಧರ | | | |
| ೨೪ ವರ್ಧಮಾನ (ಮಹಾವೀರ) | | ೨೪ ಜಂಬೂಸ್ವಾಮಿ | | | |

ವಿಶೇಷ ವಿಷಯ—ಈ ಪಟ್ಟಿಯಲ್ಲಿ ಸೂಚಿಸಿರುವವರಲ್ಲದೆ ನವ (೯) ನಾರದರು, ಏಕಾದಶ (೧೧) ರುದ್ರರು, ಇಪ್ಪತ್ತನಾಲ್ಕು ಜನ ತೀರ್ಥಂಕರರ ತಾಯಿತಂದೆಗಳು, ಹದಿನಾಲ್ಕು ಮನುಗಳು—ಇವರನ್ನೂ ಮಹಾ ವ್ಯಕ್ತಿಗಳಲ್ಲಿ ಗಣಿಸುತ್ತಾರೆ.

## ೪ ಆದಿಪುರಾಣ

ತೀರ್ಥಂಕರ ಗಣಧರ ಪರಂಪರೆಯಿಂದ ಬಂದ ಪುರಾಣಗಳು ಕಾಲಕಾಲಕ್ಕೆ ಕುಂದುತ್ತ ಬಂದವೆಂದು ಹಿಂದೆ ಹೇಳಿತಷ್ಟೆ. ಕ್ರಿ. ಶ. ೯ನೆಯ ಶತಮಾನದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನ ಗುರುಗಳಾದ ಜಿನಸೇನಾಚಾರ್ಯರು ಆಗ ದೊರೆಯುತ್ತಿದ್ದಷ್ಟು ವಿಷಯಗಳನ್ನು ಸಂಗ್ರಹಿಸಿ 'ಮಹಾಪುರಾಣ' ಎಂಬ ಹೆಸರಿನಿಂದ ತ್ರಿಷಷ್ಟಿ ಶಲಾಕಾ ಪುರುಷರ ಪುರಾಣವನ್ನು ಬರೆಯತೊಡಗಿದರು. ಮೊದಲನೆಯ ತೀರ್ಥಂಕರ ವೃಷಭ ಮತ್ತು ಮೊದಲನೆಯ ಚಕ್ರವರ್ತಿ ಭರತ—ಇವರಿಗೆ ಸಂಬಂಧಿಸಿದ ಆದಿಪುರಾಣ ಭಾಗದಲ್ಲಿ ೪೨ ಪರ್ವಗಳು ಮುಗಿಯುವಷ್ಟು ಹೊತ್ತಿಗೆ ಅವರ ಆಯಸ್ಸು ಮುಗಿಯಿತು. ಸ್ವಲ್ಪ ಮಾತ್ರ ಮಿಕ್ಕಿದ್ದ ಆದಿಪುರಾಣ ಭಾಗವನ್ನೂ ಉಳಿದ ಶಲಾಕಾ ಪುರುಷರೆಲ್ಲರ ಪುರಾಣಗಳನ್ನೂ ಅವರ ಶಿಷ್ಯರಾದ ಗುಣಭದ್ರಾಚಾರ್ಯರು ಪೂರ್ಣ ಮಾಡಿದರು. ಮಹಾಪುರಾಣದ ಆದಿಪುರಾಣ ಭಾಗ **ಪೂರ್ವಪುರಾಣ**ವೆಂದು ಪ್ರಸಿದ್ಧವಾಯಿತು. ಈ ಪೂರ್ವಪುರಾಣವೇ ಪಂಪನ ಆದಿಪುರಾಣಕ್ಕೆ ಮೂಲ*

---

* 'ಸತ್ಕವಿ ವ್ಯಾಸ ಸಮಾಗಮಾನ್ವಿತಮನಾದಿಪುರಾಣಮನೆಯ್ದೆ ಪೇೞ್ದ ವಾಕ್ಶ್ರೀ ಸುಭಗಂ ಪುರಾಣಕವಿ' ಎಂದು ವಿಕ್ರಮಾರ್ಜುನವಿಜಯದಲ್ಲಿ ಬರುವ ಮಾತಿನಿಂದ ಈ ಆದಿಪುರಾಣವನ್ನು ವ್ಯಾಸನೆಂಬ ಕವಿಯ ಗ್ರಂಥದ ಆಧಾರದ ಮೇಲೆ ರಚಿಸಿರಬೇಕೆಂದು ಆದಿಪುರಾಣದ ಸಂಪಾದಕರು ಅಭಿಪ್ರಾಯಪಟ್ಟಿದ್ದರು. ಜಿನಸೇನಾಚಾರ್ಯರ ಪೂರ್ವಪುರಾಣದೊಡನೆ ಹೋಲಿಸಿ ನೋಡಿದರೆ ಪಂಪ ಅದನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿರುವುದು ಕಂಡುಬರುತ್ತದೆ. ಪೂರ್ವ ಪುರಾಣದ ಎಷ್ಟೋ ಶ್ಲೋಕಗಳನ್ನು ಪಂಪ ಪೂರ್ತಿಯಾಗಿ ಭಾಷಾಂತರ ಮಾಡಿರುವುದು ಸ್ಪಷ್ಟವಾಗುತ್ತದೆ. ಇದರಿಂದಲೂ, ವ್ಯಾಸಕವಿಯೆಂಬವನೊಬ್ಬನಿದ್ದನೆಂಬುದಕ್ಕೆ ಬೇರೆ ಯಾವ ಆಧಾರವೂ ದೊರೆಯದಿರುವುದರಿಂದಲೂ ಮೇಲಿನ ಅಭಿಪ್ರಾಯವನ್ನು ನಂಬಲಾಗುವುದಿಲ್ಲ. ಅಲ್ಲದೆ, ಆ ಪದ್ಯದ ಪಾಠದಲ್ಲಿ ತಪ್ಪಿದೆಯೆಂದೂ, 'ವ್ಯಾಸಸಮಾಗಮಾನ್ವಿತ' ಎಂಬುದಕ್ಕೆ ಬದಲಾಗಿ 'ವ್ಯಾಸಸಮಾಸತಾನ್ವಿತ' ಎಂದಿರಬೇಕೆಂದೂ, ವ್ಯಾಸ-ಸಮಾಸಗಳಿಂದ ಎಂದರೆ ಹಿಗ್ಗಿಸುವಲ್ಲಿ ಹಿಗ್ಗಿಸಿ ಕುಗ್ಗಿಸುವಲ್ಲಿ ಕುಗ್ಗಿಸಿ ಗ್ರಂಥರಚನೆ ಮಾಡಿದೆಯೆಂದು ಇದರ ಅರ್ಥವೆಂದೂ ಶ್ರೀಮಾನ್ ಎಂ. ಗೋವಿಂದ ಪೈಗಳವರ ಮತ ('ಪಂಪನ ದೇಶ ಕಾಲ ವಿಚಾರ" ನೋಡಿ). ಆದ್ದರಿಂದ 'ಪರಂಪರೆಯಿಂ ವಿಶ್ರುತ ವೀರಸೇನ ಜಿನಸೇನಾಚಾರ್ಯ ಪರ್ಯಂತಮಾಗಿರೆ ಬಂದೀ ಕಥೆ' ಎಂದು ಹೇಳಿರುವ ಪಂಪನ ಮಾತಿಗೆ ಉಚಿತವಾದ ಮನ್ನಣೆ ಕೊಡುವುದು ನ್ಯಾಯವಾಗಿದೆ.

ಈ ಆದಿಪುರಾಣದಲ್ಲಿ ಆದಿ ತೀರ್ಥಂಕರ ವೃಷಭ, ಆದಿದಾನತೀರ್ಥ ಪ್ರವರ್ತಕ ಶ್ರೇಯಾಂಸ, ಪ್ರಥಮ ಚಕ್ರವರ್ತಿ ಭರತ, ಪ್ರಥಮ ಕಾಮದೇವ ಬಾಹುಬಲಿ, ಪ್ರಥಮ ಗಣಧರ ವೃಷಭಸೇನ ಮತ್ತು ಆದಿ ತೀರ್ಥಂಕರನ ಇನ್ನೂ ಐದು ಜನ ಮಕ್ಕಳು—ಇಷ್ಟು ಜೀವಗಳ ಜನ್ಮಾಂತರಗಳ ಚರಿತ್ರೆ ವರ್ಣಿತ ವಾಗಿದೆ. ಇವರೆಲ್ಲ ಹಲವು ಜನ್ಮಗಳಿಂದ ಒಡನೊಡನೆ ಸುಖದುಃಖಗಳನ್ನು ಅನುಭವಿಸುತ್ತ ಬಂದು ಕಡೆಗೆ ಎಲ್ಲರೂ ಒಟ್ಟಿಗೆ ಮುಕ್ತರಾಗುತ್ತಾರೆ. ಈ ಜೀವಗಳ ಚರಿತ್ರೆಯನ್ನು ವಿವರಿಸುವಾಗ ಅಲ್ಲಲ್ಲಿ ಬೇರೆ ಕೆಲವು ಜೀವರ ವಿಷಯ ಬರುತ್ತದೆ. ಆದಿನಾಥನಿಗೆ ಮಹಾಬಲ ಭವದಲ್ಲಿ ಮಂತ್ರಿಗಳಾಗಿದ್ದ ನಾಲ್ವರು, ವಜ್ರಜಂಘ ಭವದಲ್ಲಿ ಮಾವನಾಗಿದ್ದಾತನೊಬ್ಬ, ಆ ಮಾವನ ಜನ್ಮಾಂತರದ ತಾಯಿಯೊಬ್ಬಳು—ಇವರ ಭವಾವಳಿ ನಿರೂಪಿತವಾಗಿದೆ. ಯುಗಂಧರ ತೀರ್ಥಂಕರರ ಕಥೆಯನ್ನು ಅವರ ಭವಾವಳಿಯೊಡನೆ ಸಂಕ್ಷೇಪ ವಾಗಿ ಹೇಳಿದೆ. ಇವಲ್ಲದೆ ಮತ್ತೆ ಕೆಲವು ಸಾಧುಗಳ ಮತ್ತು ಕೇವಲಿಗಳ ಕಥೆ ಗಳು ಸಂದರ್ಭೋಚಿತವಾಗಿ ನಿರೂಪಿತವಾಗಿವೆ. ಈ ಎಲ್ಲ ಕಥೆಗಳಿಗೂ ನಾಯಕಮಣಿಯಂತಿರುವುದು ಆದಿ ತೀರ್ಥಂಕರನ ಕಥೆ. ಉಳಿದವೆಲ್ಲ ಈ ತೀರ್ಥಂಕರ ಕಥೆಗೆ ಅಂಗಗಳು ಮಾತ್ರ.

ಆದಿ ತೀರ್ಥಂಕರನ ಜೀವ ಹಿಂದೊಂದು ಕಾಲದಲ್ಲಿ ಭೋಗಾಸಕ್ತಿಯಲ್ಲಿ ಮುಳುಗಿಹೋಗಿತ್ತು. ಕ್ರಮಕ್ರಮವಾಗಿ ಭೋಗಾಸಕ್ತಿಯನ್ನು ತೊರೆದು ಧರ್ಮವನ್ನಾಶ್ರಯಿಸಿ ಸಂಸಾರವನ್ನು ದಾಟಿತು; ಧರ್ಮ ಬೋಧೆಮಾಡಿ ಇತರ ರನ್ನೂ ದಾಟಿಸಿತು. ಇಷ್ಟು ಪರಿವರ್ತನೆ ಆ ಜೀವದಲ್ಲಿ ಆಗುವುದಕ್ಕೆ ಅಪಾರ ಕಾಲ ಹಿಡಿಯಿತು. ಕಾಲಲಬ್ಧಿಯೊದಗಿದ ಮೇಲೆ ಆ ಜೀವ ಎತ್ತಿದ ಎಂಟು ಹತ್ತು ಜನ್ಮಗಳಲ್ಲಿ ಮೂರು ನಾಲ್ಕು ತೀರ್ಥಂಕರರ ಅವತಾರ ಕಾಲ ಕಳೆಯಿತು. ಆ ನಿಡುಗತೆಯನ್ನು, ಆ ಜೀವವಿಕಾಸವನ್ನು ಹೇಗೆ ಚಿತ್ರಿಸಿದೆಯೆಂಬುದನ್ನು ಸ್ವಲ್ಪ ನೋಡೋಣ.

ಆದಿನಾಥ ತನ್ನ ಹಿಂದಿನ ಹನ್ನೊಂದನೆಯ ಜನ್ಮದಲ್ಲಿ ಜಯವರ್ಮನೆಂಬ ಒಬ್ಬ ರಾಜಪುತ್ರನಾಗಿದ್ದನು. ತಾನೇ ಹಿರಿಯ ಮಗನಾಗಿದ್ದರೂ ತಂದೆ ತನ್ನನ್ನು ಕಡೆಗಣಿಸಿ ಕಿರಿಯವನಿಗೆ ಪಟ್ಟ ಕಟ್ಟಿದ್ದರಿಂದ ಖಿನ್ನನಾಗಿ ಮುಂದಿನ ಜನ್ಮದಲ್ಲಾದರೂ ಪಟ್ಟದ ದೊರೆಯಾಗಬೇಕೆಂದು ಬಯಸಿ ಸಂನ್ಯಾಸ ವಹಿಸಿ ದನು. ದೀಕ್ಷೆಯಲ್ಲಿ ಕಿತ್ತ ಕೂದಲನ್ನು ಹುತ್ತದಲ್ಲಿ ಇಡುತ್ತಿರುವಾಗ ಹಾವು

ಕಚ್ಚಿತು. ವಿಷವೇರಿ ಸಂಕಟಪಡುತ್ತಿದ್ದಾಗ ಆಕಾಶದಲ್ಲಿ ವಿಮಾನದ ಮೇಲೆ ಹೋಗುತ್ತಿದ್ದ ಒಬ್ಬ ವಿದ್ಯಾಧರನನ್ನು ಕಂಡು ಅವನ ವೈಭವಕ್ಕೆ ಮರುಳಾದನು. ತಾನು ತಪಗೊಂಡದ್ದಕ್ಕೆ ಫಲವಿರುವುದಾದರೆ ಅದರಿಂದ ವಿದ್ಯಾಧರನಾಗಿ ಹುಟ್ಟುವಂತಾಗಲಿ ಎಂದು ಕಟ್ಟಿಣಿಕೆಯಿಂದ ಸತ್ತು ಮಹಾಬಲನೆಂಬ ವಿದ್ಯಾಧರ ರಾಜನಾಗಿ ಹುಟ್ಟಿದನು. 'ತಪೋವಲ್ಲಿಯೊಳಪ್ಪನಲ್ಪ ಸುಖಮೆಲ್ಲಮನಲ್ಪ ಸುಖಕ್ಕೆ ಮಾಱಿ'ಬಿಟ್ಟನು.

ವಿದ್ಯಾಧರರಾಜ್ಯವೈಭವದಲ್ಲಿದ್ದಾಗ ತಾನು ಬಯಸಿ ಬಯಸಿ ಪಡೆದ ಭೋಗಗಳನ್ನು ಅನುಭವಿಸುತ್ತ ಆ ಸವಿಯಲ್ಲೆ ಮೈಮರೆತಿದ್ದನು. ಸ್ವಯಂಬುದ್ಧನೆಂಬ ಮಂತ್ರಿ ಸಮಯ ನೋಡಿ, 'ನಿನ್ನ ಈ ಸಂಪತ್ತು ಪುಣ್ಯದ ಫಲ. ಸಂಸಾರಸಮುದ್ರದಲ್ಲಿ ಮುಳುಗಿರುವವರನ್ನು ಎತ್ತಿ ಉದ್ಧರಿಸುವುದು ಧರ್ಮವೊಂದೇ. ದಯೆ, ದಮ, ದಾನ, ತಪಸ್ಸು, ಶೀಲ—ಇವೇ ಧರ್ಮದ ಸ್ವರೂಪ. ಧರ್ಮದ ಮುಖ್ಯ ಫಲ ಮುಕ್ತಿ. ರಾಜ್ಯ ವೈಭವವಾಗಲಿ ದೇವೇಂದ್ರ ಪದವಿಯಾಗಲಿ ಮುಖ್ಯವಲ್ಲ' ಎಂದು ಧರ್ಮಬೋಧೆ ಮಾಡಿದನು. ಉಳಿದ ಮೂವರು ಮಂತ್ರಿಗಳು, 'ಜೀವ, ಜನ್ಮಾಂತರ, ಪಾಪ, ಪುಣ್ಯ, ಪರಲೋಕ–ಎಲ್ಲಾ ಸುಳ್ಳು. ಇವನ್ನು ನಂಬಿ ಜನ ಸುಮ್ಮನೆ ಬಳಲುತ್ತಾರೆ. ಸ್ವರ್ಗಸುಖವನ್ನು ನೆಚ್ಚಿ ಇರುವ ಸುಖವನ್ನೂ ಕಳೆದುಕೊಳ್ಳುತ್ತಾರೆ. ಬಾಳುವ ವರೆಗೂ ಇಂದ್ರಿಯಗಳ ಇಚ್ಛೆಯನ್ನು ಸಲ್ಲಿಸಿ ವಸಂತದಲ್ಲಿ ಚಿಗುರುಕಚ್ಚಿದ ಕೋಗಿಲೆಯಂತೆ ನಲಿಯಬೇಕು' ಎಂದು ಭೋಗಪ್ರವೃತ್ತಿಗೇ ಬೆಂಬಲ ಕೊಟ್ಟರು. ಸ್ವಯಂಬುದ್ಧ ಅವರ ವಾದವನ್ನು ಸಮರ್ಪಕವಾದ ಉತ್ತರಗಳಿಂದ ಖಂಡಿಸಿ ಧರ್ಮದ ಮಹಿಮೆಯನ್ನು ಎತ್ತಿ ಹಿಡಿದನು.

ಮಹಾಬಲನಿಗೆ ಸ್ವಯಂಬುದ್ಧನ ಮಾತು ರುಚಿಸಿದರೂ ಭೋಗಲಾಲಸೆ ಮಾತ್ರ ಕುಗ್ಗಲಿಲ್ಲ. ಮುಪ್ಪು ಬಂದರೂ ಸುಖಾನುಭವ ಸಾಕೆನ್ನಿಸಲಿಲ್ಲ. ಇದನ್ನು ಕಂಡು ಸ್ವಯಂಬುದ್ಧನಿಗೆ ತುಂಬ ಕೊರಗು. ಕಡೆಗೆ ಮಹಾಬಲನಿಗೆ ಒಂದು ತಿಂಗಳು ಮಾತ್ರ ಆಯುಸ್ಸು ಉಳಿದಿರುವಾಗ ಸ್ವಯಂಬುದ್ಧ ಮತ್ತೆ ಹಿತೋಪದೇಶ ಮಾಡಲು ಆತನ ಕಣ್ತೆರೆಯಿತು. ಜಿನಧರ್ಮಕ್ಕೆ ಶರಣುಹೋಗಿ ರಾಜ್ಯವನ್ನು ತೊರೆದು ದೀಕ್ಷೆ ಹೊಂದಿದನು. ಅನಶನವ್ರತವನ್ನು ಧರಿಸಿ ಅರ್ಹತ್ಪದವನ್ನು ನೆನೆಯುತ್ತ ಪ್ರಾಣಬಿಟ್ಟನು.

ವಿದ್ಯಾಧರವೈಭವಕ್ಕಿಂತ ಎಷ್ಟೋ ಪಾಲು ಹೆಚ್ಚಾದ ಸ್ವರ್ಗಸುಖದ

ಆಸೆಯಿಂದ ಮಹಾಬಲ ಧರ್ಮವನ್ನು ಆಶ್ರಯಿಸಿದ್ದರೂ ಇರಬಹುದು. ಸಾಯುವಾಗ ಅವನ ಮನಸ್ಸಿನಲ್ಲಿ,

ಮಿಡಿವನಿತು ಬೇಗದಿಂದಱ
ವೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ
ಪಡೆದಪೆಯೀಗಳೆ ಬಲ್ವಿಡಿ
ವಿಡಿದು ಶರಣ್ಬುಗು ಜಿನೇಂದ್ರ ಪದಸರಿಸಿಜಮಂ

ಎಂಬ ಸ್ವಯಂಬುದ್ಧನ ಮಾತು ಮೊಳಗುತ್ತಿತ್ತೋ ಏನೋ! ಹಾಗೆ ಸತ್ತು ಈಶಾನ ಕಲ್ಪದಲ್ಲಿ, 'ದಿವಿಜೇಂದ್ರರುಂದ್ರಲೋಕದೊಳಮಿದೊಂದೆ ಸಾರಂ' ಎನ್ನಿಸಿದ ಶ್ರೀಪ್ರಭವಿಮಾನದಲ್ಲಿ ಲಲಿತಾಂಗನೆಂಬ ದೇವನಾಗಿ ಹುಟ್ಟಿದನು. ಅಲ್ಲಿ ಅವನು ಅನುಭವಿಸಿದ ಸುಖಕ್ಕೆ ಎಣೆಯಿಲ್ಲ. ಲಲಿತಾಂಗನಿಗೆ ಸ್ವಯಂಪ್ರಭೆಯೆಂಬ ದೇವಿಯೊಬ್ಬಳಿದ್ದಳು. ದೇವಲೋಕ ಸುಖವೆಲ್ಲ ಅವನಿಗೆ ಸಾರವತ್ತಾಗಿ ತೋರಿದ್ದು ಆ ಸ್ವಯಂಪ್ರಭೆಯಿಂದ. ಅವಳನ್ನು ಒಂದು ಕ್ಷಣವೂ ಬಿಟ್ಟಗಲದೆ ಅವಳೊಡನೆ ದಿವ್ಯಸುಖದಲ್ಲಿ ಮುಳುಗೇಳುತ್ತಿದ್ದನು.

ಆ ಸುಖದಲ್ಲಿ ಒಂದು ಸಾಗರ* ವರ್ಷಕಾಲ ಅರೆಕ್ಷಣದಂತೆ ಕಳೆದು ಹೋಯಿತು. ಇನ್ನು ಆರು ತಿಂಗಳು ಆಯುಸ್ಸು ಉಳಿದಿರುವಾಗ (ದೇವತೆಗಳು ಹೆಸರಿಗೆ ಮಾತ್ರ ಅಮರರು. ಅವರಿಗೂ ಸಾವುಂಟು.) ಮುಡಿದ ಹೂವು ಬಾಡಿ ಕಾಂತಿ ಕುಂದಿ ಅವಸಾನ ಕಾಲ ಬಂತೆಂಬ ಸೂಚನೆ ಕಾಣಿಸಿತು. ಸುಖದ ನೆಲೆಯಾದ ಸ್ವರ್ಗವನ್ನು ಬಿಟ್ಟು ಹೋಗಬೇಕಲ್ಲಾ ಎಂದು ಲಲಿತಾಂಗನಿಗೆ ಬಹು ಸಂಕಟವಾಯಿತು. ತನ್ನನ್ನು ಉಳಿಸಿಕೊಳ್ಳಿರೆಂದು ಕಣ್ಣೀರು ಕರೆಯುತ್ತ ನಂದನದ ಗಿಡಮರಗಳನ್ನು ಕೂಡ ಬೇಡತೊಡಗಿದನು. 'ಮೈ ಎರಡು, ಜೀವ ಒಂದು' ಎಂಬಂತಿದ್ದ ಸ್ವಯಂಪ್ರಭೆಯನ್ನು ಕುರಿತು, 'ನೀನಾದರೂ ನನ್ನನ್ನು ಬದುಕಿಸಿಕೊ' ಎಂದು ಹಲುಬಿದನು. ಹಾಗೆ ಗೋಳಾಡುತ್ತಿದ್ದ ಲಲಿತಾಂಗನ ಬಳಿಗೆ ಸಾಮಾನಿಕ ದೇವತೆಗಳು ಬಂದು 'ನಿನಗೊಬ್ಬನಿಗಲ್ಲ; ಎಲ್ಲ ದೇವತೆಗಳಿಗೂ ಹೀಗೆಯೇ. ಸುಮ್ಮನೆ ಗೋಳಾಡುವುದು ತರವಲ್ಲ. ಸಂಸಾರದಲ್ಲಿ ಹುಟ್ಟು, ಸಾವು, ಮುಪ್ಪು, ಆತಂಕ, ಶೋಕಗಳಿಂದ ಬೇಯದವನೊಬ್ಬನೂ ಇಲ್ಲ. ಧರ್ಮ ಹೊರತು ಬೇರೆ ರಕ್ಷಕರಿಲ್ಲ. ಆದ್ದರಿಂದ,

---

*ಸಾಗರ ಎಂಬುದು ಸಾಮಾನ್ಯ ಎಣಿಕೆಗೆ ನಿಲುಕದ ಬಹು ದೊಡ್ಡ ಸಂಖ್ಯೆ.

ಜಿನ ಚೈತ್ಯಬ್ರಾತಮಂ ಬಂದಿಸು ಜಿನಪದಪದ್ಮಂಗಳಂ ದಿವ್ಯಮಪ್ಪ
ರ್ಚನೆಯಿಂದಂ ಭಕ್ತಿಯಿಂದರ್ಚಿಸು ಜಿನನ ನಮಸ್ಕಾರ ಮಂತ್ರಂಗಳೊಳ್ ಭಾ
ವನೆಯಂ ತಾಳ್ದ ಜ್ತಿಯಿಂದಂ ಜಿನಮಹಿಮೆಗಳಂ ಮಾಡು ನೀಂ ಭವ್ಯನಯ್ ಮ
ತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪಯ್'

ಎಂದು ಹಿತೋಪದೇಶ ಮಾಡಿದರು. ಅದನ್ನು ಕೇಳಿ ಲಲಿತಾಂಗ ಮನಸ್ಸ ಮಾಧಾನ ಮಾಡಿಕೊಂಡು ಆರು ತಿಂಗಳವರೆಗೂ ಜಿನಪೂಜೆ ಮಾಡುತ್ತಿದ್ದು ಶರತ್ಕಾಲದ ಮೇಘದಂತೆ ಕರಗಿಹೋದನು. ಸ್ವರ್ಗದಿಂದ ಚ್ಯುತನಾಗಿ ವಜ್ರ ಜಂಘನೆಂಬ ರಾಜಪುತ್ರನಾಗಿ ಹುಟ್ಟಿದನು.

ವಜ್ರಜಂಘ ಸ್ವರ್ಗಲೋಕದ ಸ್ವಯಂಪ್ರಭೆಯ ಸವಿನೆನಪಿನಿಂದ ಯಾವ ಕನ್ನೆಯನ್ನೂ ಮದುವೆಯಾಗಲೊಲ್ಲದೆ ಅವಿವಾಹಿತನಾಗಿಯೆ ಇದ್ದನು. ಅಷ್ಟ ರಲ್ಲಿ ಸ್ವಯಂಪ್ರಭೆ ಲಲಿತಾಂಗನ ವಿಯೋಗದಿಂದ ಕೊರಗಿ ಕೊರಗಿ ಜಿನಧ್ಯಾನ ದಲ್ಲೇ ಕಾಲಕಳೆದು ಆಯುಸ್ಸು ತೀರಲು ಸ್ವರ್ಗದಿಂದ ಜಾರಿ ವಜ್ರಜಂಘನ ಸೋದರ ಮಾವನಾದ ವಜ್ರದಂತ ಚಕ್ರವರ್ತಿಗೆ ಶ್ರೀಮತಿಯೆಂಬ ಮಗಳಾಗಿ ಹುಟ್ಟಿದಳು. ಒಮ್ಮೆ ದೇವಾಗಮವನ್ನು ಕಂಡು ಪೂರ್ವಜನ್ಮದ ನೆನಪಾಗಲು ಲಲಿತಾಂಗ ಎಲ್ಲಿ ಹುಟ್ಟಿದನೋ ಎಂದು ಕೊರಗುತ್ತ ಅವನನ್ನು ಕಾಣುವುದು ಅಸಾಧ್ಯವೆಂದು ನಂಬಿ ಕನ್ಯಾವ್ರತದಲ್ಲೇ ಇರುವುದಾಗಿ ನಿಶ್ಚಯಿಸಿದಳು. ಪಂಡಿತೆಯೆಂಬ ದಾದಿ ಆ ರಹಸ್ಯವನ್ನರಿತುಕೊಂಡು ಅವಳು ಬರೆದಿಟ್ಟು ಕೊಂಡಿದ್ದ ಪೂರ್ವಜನ್ಮಸಂಬಂಧವಾದ ಚಿತ್ರಪಟವನ್ನು ತೆಗೆದುಕೊಂಡು ಅದರ ಸಹಾಯದಿಂದ ವಜ್ರಜಂಘನೇ ಶ್ರೀಮತಿಯ ಪೂರ್ವಜನ್ಮದ ಪತಿಯೆಂದು ಕಂಡುಹಿಡಿದಳು. ಶ್ರೀಮತೀ ವಜ್ರಜಂಘರಿಗೆ ಮದುವೆಯಾಯಿತು. 'ಹಿಂದಿನ ಜನ್ಮದ ಪ್ರೀತಿಯಿಂದ ನಮಗೆ ಈಗ ಮೇಳವಾಯಿತು; ಈ ಅಕ್ಕರೆಯುಂಟಾ ಯಿತು. ಈ ಜನ್ಮದ ವಾಸನೆ ಮುಂದಿನ ಜನ್ಮಕ್ಕೂ ಬರುತ್ತದೆ. ಆದ್ದರಿಂದ ನಮಗೆ ಹಿಂದಿನ ಜನ್ಮ, ಈ ಜನ್ಮ, ಮುಂದಿನ ಜನ್ಮ—ಎಲ್ಲ ಸಫಲವೇ' ಎಂದು ಹಿಗ್ಗುತ್ತಿದ್ದರು.

ಶ್ರೀಮತಿಯ ಹೊಟ್ಟೆಯಲ್ಲಿ ೪೯ ಅವಳಿ ಮಕ್ಕಳು ಹುಟ್ಟಿದರು. ವಜ್ರ ಜಂಘನ ತಂದೆ ಮಗನಿಗೆ ರಾಜ್ಯವನ್ನೊಪ್ಪಿಸಿ ತಪಸ್ಸಿಗೆ ಹೋದಾಗ ಆ ಮಕ್ಕಳೆ ಲ್ಲರೂ ಅಜ್ಜನೊಡನೆ ತಾವೂ ದೀಕ್ಷೆ ತೆಗೆದುಕೊಂಡರು. ಶ್ರೀಮತೀ ವಜ್ರಜಂಘ ರಿಗೆ ಮಾತ್ರ ವೈರಾಗ್ಯದ ಕಡೆ ಮನಸ್ಸು ಹೋಗಲಿಲ್ಲ. ಅವರು ರಾಜ್ಯಸುಖದಲ್ಲಿ

ಕೆಲವು ಕಾಲ ಕಳೆಯಲು ವಜ್ರದಂತ ಚಕ್ರವರ್ತಿ ಮಕ್ಕಳೊಡನೆ ತಪೋವನಕ್ಕೆ ಹೋದನೆಂದೂ ರಾಜ್ಯಭಾರವಹಿಸಿದ ಚಿಕ್ಕ ಮೊಮ್ಮೊಗನಿಗೆ ಸಾಮಂತರು ಅಡಗಿ ನಡೆಯದೆ ತೊಂದರೆ ಕೊಡುತ್ತಿರುವರೆಂದೂ ಸುದ್ದಿ ಬಂತು. ಸೋದರಳಿಯನ ರಾಜ್ಯವನ್ನು ವ್ಯವಸ್ಥೆಗೊಳಿಸುವುದಕ್ಕಾಗಿ ವಜ್ರಜಂಘ ಹೆಂಡತಿಯನ್ನು ಕರೆದು ಕೊಂಡು ಸೈನ್ಯದೊಡನೆ ಪ್ರಯಾಣ ಮಾಡಿದನು. ದಾರಿಯಲ್ಲಿ ಒಂದು ಕಡೆ ಬೀಡುಬಿಟ್ಟದ್ದಾಗ ಚಾರಣಮುನಿಗಳಿಬ್ಬರಿಗೆ ಆಹಾರದಾನಮಾಡಿದನು. ಆಗ ಪಂಚಾಶ್ಚರ್ಯವಾಯಿತು. ವಜ್ರಜಂಘನ ಮಂತ್ರಿ, ಪುರೋಹಿತ, ಸೇನಾ ನಾಯಕ, ಶ್ರೇಷ್ಠಿಗಳಾದ ಮತಿವರ, ಅಕಂಪನ, ಆನಂದ, ಧನಮಿತ್ರ ಎಂಬ ನಾಲ್ವರೂ ಆ ದಾನವನ್ನು ಅನುಮೋದಿಸಿದರು. ಆಗ ಅಲ್ಲಿ ಬಂದಿದ್ದ ಒಂದು ಹುಲಿ, ಒಂದು ಹಂದಿ, ಒಂದು ಕೋಡಗ ಮತ್ತು ಒಂದು ಮುಂಗುಸಿ—ಈ ನಾಲ್ಕು ತಿರ್ಯಕ್ ಪ್ರಾಣಿಗಳೂ ಆ ದಾನವನ್ನು ಅನುಮೋದಿಸಿ ಉಪಶಾಂತಿ ಹೊಂದಿದ್ದವು. ವಜ್ರಜಂಘನು ಚಾರಣಮುನಿಗಳಿಂದ ತನ್ನ ನಾಲ್ವರು ಮಿತ್ರರ ಮತ್ತು ಆ ನಾಲ್ಕು ಪ್ರಾಣಿಗಳ ಭವಾವಳಿಯನ್ನು ಕೇಳಿ ಅವರೆಲ್ಲರೂ ತನ್ನೊಡನೆಯೆ ಹಲವು ಜನ್ಮಗಳಲ್ಲಿ ದಿವ್ಯಮಾನುಷ ಸುಖಗಳನ್ನು ಅನುಭವಿ ಸುತ್ತ ಬರುವರೆಂದು ತಿಳಿದು ಸಂತೋಷಿಸಿದನು. (ಈ ಭವಾವಳಿಗಳಿಗೆ ಮುಂದಿನ ಪುಟ ನೋಡಿ)

ಸೋದರಳಿಯನ ರಾಜ್ಯವನ್ನು ವ್ಯವಸ್ಥೆಗೊಳಿಸಿ ರಾಜಧಾನಿಗೆ ಹಿಂದಿರುಗಿ ಹಲವು ವರ್ಷಗಳವರೆಗೆ ಇಷ್ಟಸುಖಗಳನ್ನನುಭವಿಸುತ್ತಿದ್ದರು. ಹೀಗಿರುವಲ್ಲಿ ಒಂದು ದಿನ ರಾತ್ರೆ ಶ್ರೀಮತೀ ವಜ್ರಜಂಘರು ಸೆಜ್ಜೆ ಮನೆಯಲ್ಲಿ ಮಲಗಿರುವಾಗ ಸೆಜ್ಜೆವಳನು ಕೇಶಸಂಸ್ಕಾರಕ್ಕೆಂದು ಧೂಪಪಾತ್ರೆಯಲ್ಲಿ ಬೇಕಾದಷ್ಟು ಧೂಪ ಹಾಕಿ ಕಿಟಕಿ ತೆರೆಯುವುದನ್ನು ಮರೆತುಹೋಗಿದ್ದದ್ದರಿಂದ ಹೊಗೆ ಸುತ್ತಿಕೊಂಡು ಉಸುರುಕಟ್ಟಿ ಇಬ್ಬರೂ ಸತ್ತುಹೋದರು.

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮುನಂ
ದೊಡಗಳೆದರೋಪರೋಪರೊ
ಳೊಡಸಾಯಲ್ ಪಡೆದರಿನ್ನವೇಂ ಸೈಪೊಳವೆ!

ಹಾಗೆ ಒಡಗೂಡಿ ಪ್ರಾಣಬಿಡುವ ಪುಣ್ಯಪಡೆದ ಶ್ರೀಮತೀವಜ್ರಜಂಘರು ಉತ್ತರಕುರುವೆಂಬ ಉತ್ತಮ ಭೋಗಭೂಮಿಯಲ್ಲಿ ಆರ್ಯರಾಗಿ ಹುಟ್ಟಿದರು.

# ಆದಿಪುರುಷ ಭವಾವಳಿ

| | | | | | | | | | | | |
|---|---|---|---|---|---|---|---|---|---|---|---|
| | (ಜಯವರ್ಮ) | (ಧನಶ್ರೀ) | | | | | | | | | |
| ೧ | ಮಹಾಬಳ | (ನಿರ್ನಾಮಿಕೆ) | | (ಅತಿಗೃದ್ಧ)<br>(ನಾರಕಿ)<br>(ವ್ಯಾಘ್ರ)<br>(ದಿವಾಕರಪ್ರಭ) | (ಸೇನಾಪತಿ)<br>(ಆರ್ಯ)<br>(ಪ್ರಭಾಕರ) | (ಮಂತ್ರಿ)<br>(ಆರ್ಯ)<br>(ಕನಕಪ್ರಭ) | (ಪುರೋಹಿತ)<br>(ಆರ್ಯ)<br>(ಪ್ರಭಂಜನ) | (ಉಗ್ರಸೇನ) | (ಹರಿವರ) | (ನಾಗದತ್ತ) | (ಲೋಲುಪ) |
| ೨ | ಲಲಿತಾಂಗ | ಸ್ವಯಂಪ್ರಭೆ | | (ಸಾಮಾನಿಕ ದೇವತೆಗಳು) | | | | | | | |
| ೩ | ವಜ್ರಜಂಘ | ಶ್ರೀಮತಿ | ಅನುಂದರಿ | ಮತಿವರ | ಅಕಂಪ | ಆನಂದ | ಧನಮಿತ್ರ | ಶಾರ್ದೂಲ | ವರಾಹ | ವಾನರ | ನಕುಲ |
| ೪ | ಆರ್ಯ | ಆರ್ಯೆ | ↓ | ↓ | ↓ | ↓ | ↓ | ಶಾರ್ದೂಲಾರ್ಯ | ವರಾಹಾರ್ಯ | ವಾನರಾರ್ಯ | ನಕುಲಾರ್ಯ |
| ೫ | ಶ್ರೀಧರದೇವ | ಸ್ವಯಂಪ್ರಭ | ↓ | (ಅಧೋಗ್ರೈವೆಯಲ್ಲಿ ಅಹಮಿಂದ್ರರು | | | | ಚಿತ್ರಾಂಗದ | ಮಣಿಕುಂಡಲ | ಮನೋಹರ | ಮನೋರಥ |
| ೬ | ಸುವಿಧಿ | ಕೇಶವ | ↓ | ↓ | ↓ | ↓ | ↓ | ವರದತ್ತ | ವಾರಿಷೇಣ | ಚಿತ್ರಾಂಗದ | ಶಾಂತಮದನ |
| ೭ | ಅಚ್ಯುತೇಂದ್ರ | ಪ್ರತೀಂದ್ರ | ↓ | | | | | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ |
| ೮ | ವಜ್ರನಾಭಿ | ಧನದೇವ | ↓ | ಸುಬಾಹು | ಮಹಾಬಾಹು | ಪೀಠ | ಮಹಾಪೀಠ | ವಿಜಯ | ವೈಜಯಂತ | ಜಯಂತ | ಅಪರಾಜಿತ |
| ೯ | ಅಹಮಿಂದ್ರ | ಅಹಮಿಂದ್ರ | | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ |
| ೧೦ | ಆದಿನಾಥ | ಶ್ರೇಯಾಂಸ | ಸುಂದರಿ | ಭರತ | ಬಾಹುಬಲಿ | ವೃಷಭಸೇನ | ಅನಂತವಿಜಯ | ಅನಂತವೀರ್ಯ | ಅಚ್ಯುತ | ವೀರ | ಸುವೀರ |
| | ಮೊದಲ ತೀರ್ಥಂಕರ | ದಾನತೀರ್ಥ ಪ್ರವರ್ತಕ | ಮಗಳು | ಮೊದಲ ಚಕ್ರವರ್ತಿ | ಮೊದಲ ಕಾಮ ದೇವ | ಮುಖ್ಯ ಗಣಧರ | ಆದಿನಾಥನ ಅನೇಕ ಮಂದಿ ಮಕ್ಕಳಲ್ಲಿ ಕೆಲವರು | | | | |

ಹಿಂದೆ ಹೇಳಿದ ತಿರ್ಯಕ್ ಜೀವಿಗಳೂ ಅವರೊಡನೆ ಆರ್ಯರಾಗಿ ಭೋಗ ಭೂಮಿಯಲ್ಲಿ ಹುಟ್ಟಿದವು. ಮತಿವರ ಮೊದಲಾದವರು ತಪೋನಿರತರಾಗಿ ಸತ್ತು ಅಧೋಗ್ರೈವೇಯಕದಲ್ಲಿ ಅಹಮಿಂದ್ರರಾದರು.

ಶ್ರೀಮತೀ ವಜ್ರಜಂಘರು ಭೋಗಭೂಮಿಯಲ್ಲಿ ಕಾಮಸುಖಗಳಲ್ಲಿ ಮೈಮರೆತಿದ್ದರು. ಇರುವಲ್ಲಿ ಪ್ರೀತಿಂಕರನೆಂಬ ಮುನಿಯಾಗಿ ಹುಟ್ಟಿದ್ದ ಹಿಂದಿನ ಸ್ವಯಂಬುದ್ಧನು ಪೂರ್ವಜನ್ಮದ ಪ್ರೀತಿ ಕಾರಣವಾಗಿ ವಜ್ರಜಂಘನನ್ನು ಎಚ್ಚರಿಸುವುದಕ್ಕಾಗಿ ಅಲ್ಲಿ ಬಂದನು. ಬಂದು ಬಹು ವಾತ್ಸಲ್ಯದಿಂದ 'ಅಪ್ಪಾ! ನಿನಗೆ ಭೋಗಾಸಕ್ತಿ ಇನ್ನೂ ಕಡಮೆಯಾಗಲಿಲ್ಲ. ಸಮ್ಯಕ್ತ್ವಕ್ಕೆ ಸ್ವಲ್ಪವೂ ಮನಸ್ಸು ತಿರುಗಲಿಲ್ಲವಲ್ಲಾ! ಈಗ ಸರಿಯಾದ ಕಾಲ ಒದಗಿದೆ. ಸಮ್ಯಕ್ತ್ವವನ್ನು ಗ್ರಹಿಸು. ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಕ್ ಚಾರಿತ್ರ—ಈ ಮೂರೂ ಮುಕ್ತಿಗೆ ಮೂರು ಮೆಟ್ಟಲುಗಳು' ಎಂದು ಮನದಟ್ಟುವಂತೆ ತಿಳಿಯ ಹೇಳಿ ಸಮ್ಯಕ್ತ್ವವನ್ನು ಉಪದೇಶಿಸಿ ಹೋದನು. ಶ್ರೀಮತ್ಯಾರ್ಯೆಯೂ ಉಳಿದ ನಾಲ್ವರು ಸಂಗಡಿಗರೂ ಸಮ್ಯಕ್ತ್ವವನ್ನು ಕೈಕೊಂಡರು.

ಇನ್ನು ಮುಂದೆ ಆದಿ ತೀರ್ಥಂಕರನ ಜೀವಕ್ಕೆ ಭೋಗದ ಬಯಕೆ ಕಡಮೆಯಾಗುತ್ತ ಬಂತು. ಮೋಹನಿಗಳ ಸಡಿಲವಾಗುತ್ತ ಬಂತು. ಭೋಗ ಭೂಮಿಯ ಆಯುಸ್ಸು ಮುಗಿದಮೇಲೆ ವಜ್ರಜಂಘಾರ್ಯ ಶ್ರೀಧರನೆಂಬ ದೇವನಾದನು. ಶ್ರೀಮತ್ಯಾರ್ಯೆ ಸಮ್ಯಕ್ತ್ವ ಮಹಿಮೆಯಿಂದ ಹೆಣ್ಣು ರೂಪವನ್ನು ತೊಲಗಿಸಿಕೊಂಡು ಶ್ರೀಧರದೇವನಿಗೆ ಸ್ವಯಂಪ್ರಭನೆಂಬ ಸಾಮಾನಿಕ ದೇವನಾದಳು. ಶಾರ್ದೂಲಾರ್ಯಾದಿಗಳೂ ಅವನ ಸಂಗಡಿಗರಾದ ದೇವತೆಗಳಾದರು. ಶ್ರೀಧರದೇವನು ಅವರೆಲ್ಲರೊಡನೆ ಆನಂದಿಸುತ್ತ ಸ್ವರ್ಗದಲ್ಲಿದ್ದಾಗ ಪ್ರೀತಿಂಕರ ಮುನಿಗಳಿಗೆ ಕೇವಲ ಜ್ಞಾನವುಂಟಾಯಿತು. ಅದನ್ನರಿತು ಶ್ರೀಧರದೇವ ದೇವನಿಕಾಯದೊಡನೆ ಹೋಗಿ ಕೇವಲಜ್ಞಾನಪೂಜೆ ಮಾಡಿದನು. ಅಷ್ಟು ಹೊತ್ತಿಗೆ ಅವನಿಗೆ ಧರ್ಮದಲ್ಲಿ ಶ್ರದ್ಧೆ ಮೂಡಿತ್ತು. ಮಹಾಬಲಭವದಲ್ಲಿ ತನಗೆ ಮಂತ್ರಿಗಳಾಗಿದ್ದ ಮಹಾಮತಿ ಮೊದಲಾದ ಮೂವರು ಮಂತ್ರಿಗಳ ಗತಿ ಏನಾಯಿತೆಂದು ಕೇಳಿ ತಿಳಿದುಕೊಂಡನು. ಅವರು ನರಕದಲ್ಲಿ ನವೆಯುತ್ತಿರುವರೆಂದು ಕೇಳಿ ಮರುಗಿದನು. ಎರಡನೆಯ ನರಕದಲ್ಲಿದ್ದ ಶತಮತಿಯ ಬಳಿ ಹೋಗಿ ಅವನಿಗೆ ಧರ್ಮಬೋಧೆ ಮಾಡಿ ಅವನ ಉದ್ಧಾರಕ್ಕೆ ಕಾರಣನಾದನು.

ಶ್ರೀಧರದೇವ ಸ್ವರ್ಗದಿಂದ ಚ್ಯುತನಾಗಿ ಸುವಿಧಿ ಎಂಬ ರಾಜನಾಗಿ ಹುಟ್ಟಿ

ದನು. ಆಗ ಅವನ ಭೋಗಾಭಿಲಾಷೆ ಇನ್ನೂ ತಗ್ಗಿತ್ತು. ತಂದೆ ಅಸಮಾಧಾನ ಮಾಡಿಕೊಂಡಾನೆಂಬ ಹೆದರಿಕೆಯಿಂದ ಮದುವೆಮಾಡಿಕೊಂಡು ರಾಜ್ಯಭಾರ ವಹಿಸಿದನು. ಹಿಂದೆ ಶ್ರೀಮತಿಯಾಗಿದ್ದ ಸ್ವಯಂಪ್ರಭದೇವ ಸ್ವರ್ಗದಿಂದ ಬಂದು ಸುವಿಧಿಗೆ ಕೇಶವನೆಂಬ ಮಗನಾಗಿ ಹುಟ್ಟಿದನು. ಈ ಮಗನಲ್ಲಿ ಅವನಿಗೆ ಮಿತಿಯಿಲ್ಲದ ಪ್ರೇಮ. ಸುವಿಧಿಗೆ ದೀಕ್ಷೆ ವಹಿಸಬೇಕೆಂಬ ಹಿರಿಯಾಸೆಯಿದ್ದರೂ ಮಗನ ಮೇಲಿನ ಮೋಹದಿಂದ ಉಪಾಸಕನಾಗಿಯೇ ಉಳಿದು ಅಣುವ್ರತಗಳನ್ನು ಗ್ರಹಿಸಿದನು. ಹನ್ನೊಂದು ನೆಲೆಗಳ ಧರ್ಮಗಳನ್ನೂ ಕ್ರಮವಾಗಿ ನಡಸಿ ಕೊನೆಯಲ್ಲಿ ಸಮಾಧಿವಿಧಿಯಿಂದ ಮುಡಿಪಿ ಅಚ್ಯುತೇಂದ್ರನಾದನು.

ಮುಂದಿನ ಜನ್ಮದಲ್ಲಿ ಅವನು ವಜ್ರನಾಭಿಯೆಂಬ ಚಕ್ರವರ್ತಿಯಾದನು. ಸಾಮ್ರಾಜ್ಯ ಭೋಗವನ್ನು ಅನುಭವಿಸುತ್ತಿರಲು ಆತನಿಗೆ ಭೋಗದಲ್ಲಿ ನಿಸ್ಪೃಹತೆಯುಂಟಾಯಿತು. 'ಭವ್ಯತೆ ಪುಣ್ಯಜೀವಮುಂ ಸಹಜ ಸುಖಾಸ್ಪದಂಬರೆಗ ಮುಯ್ವಿನಂ ಅಲ್ಲಿ ತೊಡಂಕಲೀಗುಮೇ?'

> ನೆಗಳ್ದೀ ಷಟ್ಖಂಡಮುಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ
> ಧುಗಳಿಂದಂ ಬರ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ
> ಚ್ಚಿಗಮೊಂದುಂಟಲ್ಲಿ ಗಾಂಪಿಂ ತೊಡರ್ವೆನೆ ಪಡೆವೆಂ ಶಾಶ್ವತ ಶ್ರೀಯನೆಂಬು
> ಜ್ಜುಗದೊಳ್ ಚಿತ್ತಂ ಕರಂ ಕಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ

ಹಾಗೆ ನಿಶ್ಚಯಿಸಿ ರಾಜ್ಯವನ್ನು ಮಗನಿಗೊಪ್ಪಿಸಿ ತಾನು ದೀಕ್ಷೆ ವಹಿಸಿದನು. ಮಹಾವ್ರತಗಳನ್ನು ಕೈಕೊಂಡು ಬಾಹ್ಯಾಭ್ಯಂತರ ತಪಸ್ಸುಗಳನ್ನು ಪೂರ್ಣವಾಗಿ ನಡಸಿ ಪರೀಷಹಗಳನ್ನೆಲ್ಲ ಗೆದ್ದು ಷೋಡಶ ಭಾವನೆಗಳನ್ನು ಭಾವಿಸಿ ಶುಕ್ಲಧ್ಯಾನ ನಿರತನಾಗಿ ಪ್ರಾಣಪರಿತ್ಯಾಗ ಮಾಡಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದನು.

ಹೀಗೆ ಕ್ರಮ ಕ್ರಮವಾಗಿ ಪರಿಶುದ್ಧಿ ಪಡೆದ ಜೀವ ಸರ್ವಾರ್ಥಸಿದ್ಧಿಯ ಆಯುಸ್ಸು ಮುಗಿದ ಬಳಿಕ ಭರತವರ್ಷದಲ್ಲಿ ಆದಿ ತೀರ್ಥಂಕರನಾಗಿ ಅವತರಿಸಿ ಧರ್ಮಾಮೃತವನ್ನೆರೆದು ಲೋಕವನ್ನು ಉದ್ಧರಿಸಿದನು.

ತೀರ್ಥಂಕರರ ಪಂಚ ಕಲ್ಯಾಣಗಳನ್ನೂ, ಅವರು ಬೋಧಿಸಿದ ಧರ್ಮವನ್ನೂ ಬೇರೆ ಕಡೆ ವಿವರಿಸಿದೆ. ಭರತಕ್ಷೇತ್ರದಲ್ಲಿ ಈ ಅವಸರ್ಪಿಣಿಯಲ್ಲಿ ಆ ಧರ್ಮದ ಆದಿ ಪ್ರವರ್ತಕನಾದದ್ದೂ ಪ್ರಜಾಜೀವನೋಪಾಯಗಳನ್ನು ಕಲ್ಪಿಸಿ ಸಮಸ್ತ

ವಿದ್ಯೆಗಳನ್ನೂ ಬೋಧಿಸಿ ಸಮಾಜವ್ಯವಸ್ಥೆ ರಾಜ್ಯವ್ಯವಸ್ಥೆಗಳನ್ನೇರ್ಪಡಿಸಿ ಯುಗಪ್ರವರ್ತಕನಾದದ್ದೂ ಆದಿ ತೀರ್ಥಂಕರನ ವೈಶಿಷ್ಟ್ಯ.

ಭರತವರ್ಷದಲ್ಲಿ ಭೋಗಭೂಮಿಸ್ಥಿತಿ ಮುಗಿದು ಕರ್ಮಭೂಮಿಸ್ಥಿತಿ ಮೊದಲಾಗುತ್ತಿರುವಾಗ ಹದಿನಾಲ್ಕನೆಯ ಮನುವಾದ ನಾಭಿರಾಜನಿಗೆ ಮಗನಾಗಿ ಆದಿ ತೀರ್ಥಂಕರ ಅವತಾರಮಾಡಿದನು. ಬಾಲ್ಯವನ್ನು ಕಳೆದು ಯೌವನದಲ್ಲಿ ತಂದೆಯ ಒತ್ತಾಯದಿಂದಲೂ ಲೋಕಾನುಗ್ರಹಬದ್ಧಿಯಿಂದಲೂ ಮದುವೆಯಾಗಿ ಭರತ, ಬಾಹುಬಲಿ, ಬ್ರಾಹ್ಮಿ, ಸುಂದರಿ ಮೊದಲಾದ ಮಕ್ಕಳನ್ನು ಪಡೆದನು. ಆ ಮಕ್ಕಳಿಗೂ ತನಗೂ ನಾಭಿರಾಜನಿಗೂ ನಾನಾ ಬಗೆಯ ಮಣಿಭೂಷಣಗಳನ್ನು 'ಸ್ವಮತಿ ಪರಿಕಲ್ಪನ'ದಿಂದ ನಿರ್ಮಿಸಿದನು. ಮಕ್ಕಳು ದೊಡ್ಡವರಾಗಲು ವಿದ್ಯೋಪದೇಶ ಮಾಡಬಯಸಿ ಮೊದಲು ಹೆಣ್ಣುಮಕ್ಕಳನ್ನು ಹತ್ತಿರ ಕರೆದು,

'ಈ ವಯಸಮನೀ ಶೀಲಮ
ನೀ ವಿನಯಮನೆಯ್ದೆ ವಿದ್ಯೆಯಿಂ ಪಿದಿದೊಡೆ ಮ
ತ್ತೇವೇಳ್ಬುದೋ ನೀವೆ ಜಗ
ತ್ಪಾವನೆಯರಿರಕ್ಕ ನಿಮಗನುಗ್ಗಳರೊಳರೇ'

ಎಂದು ಸಿದ್ಧನಮಸ್ಕಾರ ಪೂರ್ವಕವಾಗಿ ಬ್ರಾಹ್ಮಿಗೆ ಅಕ್ಷರಾಭ್ಯಾಸಮಾಡಿಸಿ ಸುಂದರಿಗೆ ಗಣಿತವನ್ನು ಬೋಧಿಸಿದನು. ಉಳಿದ ಮಕ್ಕಳಲ್ಲಿ ಒಬ್ಬೊಬ್ಬರಿಗೆ ಒಂದೊಂದು ಶಾಸ್ತ್ರವನ್ನು ಉಪದೇಶಿಸಿದನು. 'ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ಉಪದೇಶಂಗೆಯ್ದಂ'.

ಅಷ್ಟರಲ್ಲಿ ಕಲ್ಪವೃಕ್ಷಗಳ ಶಕ್ತಿ ಉಡುಗಿದ ಮೇಲೆ ಕೃಷಿ ಮಾಡದೆಯೇ ಬೆಳೆಯುತ್ತಿದ್ದ ಧಾನ್ಯಾದಿಗಳು ಬೆಳೆಯದೆ ಹೋದವು. ಜನ ದಿಕ್ಕುತೋರದೆ ನಾಭಿರಾಜನಲ್ಲಿ ಮೊರೆಯಿಡಲು ಅವನು ಆದಿನಾಥನ ಬಳಿ ಕಳಿಸಿದನು. ಆಗ ಆದಿನಾಥ ವಿದೇಹಕ್ಷೇತ್ರದ ಸ್ಥಿತಿಯನ್ನು ನೆನೆದು (ಆತ ತನ್ನ ಹಿಂದಿನ ಜನ್ಮಗಳಲ್ಲೆಲ್ಲ ಹುಟ್ಟಿದ್ದದ್ದು ವಿದೇಹ ಕ್ಷೇತ್ರದಲ್ಲೆ) ಅಲ್ಲಿನಂತೆ ಇಲ್ಲಿಯೂ ಜನಪದ ಗ್ರಾಮಾದಿಗಳನ್ನು ವಿಂಗಡಿಸಿ, ಜನರನ್ನು ಕ್ಷತ್ರಿಯ, ವೈಶ್ಯ, ಶೂದ್ರರೆಂದು ಮೂರು ವರ್ಣಗಳಾಗಿ ವ್ಯವಸ್ಥೆಗೊಳಿಸಿ ಅವರವರಿಗೆ ಉಚಿತವಾದ ವೃತ್ತಿಗಳನ್ನೂ ನಿರೂಪಿಸಿ, ವರ್ಣಸಂಕರವಾಗದಂತೆ ನಡೆಯಬೇಕೆಂದು ಕಟ್ಟುಮಾಡಿದನು. ಅಂದಿನಿಂದ ಕೃತಯುಗ ಮೊದಲಾಯಿತು. (ಮುಂದೆ ಭರತ ಚಕ್ರವರ್ತಿ

ಆಳತೊಡಗಿದ ಮೇಲೆ ಅವನು ಬ್ರಾಹ್ಮಣ ಜಾತಿಯನ್ನು ನಿರ್ಮಿಸಿ ಅವರಿಗೆ ಅಧ್ಯಯನ ಅಧ್ಯಾಪನಾದಿ ಕರ್ಮಗಳನ್ನು ಗೊತ್ತುಪಡಿಸಿದನು.)

ಯುಗಪ್ರವರ್ತಕನಾದ ಆದಿದೇವನಿಗೆ ನಾಭಿರಾಜನೂ ಇಂದ್ರಾದಿದೇವತೆಗಳೂ ಸಂಭ್ರಮದಿಂದ ಪಟ್ಟಕಟ್ಟಿದರು. ಬಳಿಕ ಆದಿನಾಥನು ಯೋಗ್ಯರಾದ ದಂಡಧರರಿಲ್ಲದಿದ್ದರೆ ಪ್ರಜೆಗಳು ತಂತಮ್ಮ ವೃತ್ತಿಗಳನ್ನು ಅತಿಕ್ರಮಿಸಿ ನಡೆಯುವರೆಂದೂ ಪ್ರಬಲರಾದವರು ದುರ್ಬಲರನ್ನು ಹಿಂಸಿಸುವರೆಂದೂ ನೆನೆದು ಅದಕ್ಕವಕಾಶವಾಗದಿರಲೆಂದು ಕುರುವಂಶ, ಹರಿವಂಶ, ನಾಥವಂಶ, ಉಗ್ರವಂಶ ಎಂಬ ಕ್ಷತ್ರಿಯ ವಂಶಗಳನ್ನು ಸ್ಥಾಪಿಸಿ ಅವರನ್ನೂ ಇತರ ಹಲವು ರಾಜರನ್ನೂ ಲೋಕರಕ್ಷಣೆಗೆ ನಿಯಮಿಸಿದನು. ಆಮೇಲೆ ಯಥಾಕಾಲದಲ್ಲಿ ವೈರಾಗ್ಯ ಹೊಂದಿ ತಪಸ್ಸುಮಾಡಿ ತೀರ್ಥಂಕರನಾಗಿ ಲೋಕಕ್ಕೆ ಧರ್ಮೋಪದೇಶ ಮಾಡಿ ಮುಕ್ತನಾದನು.

ಆದಿತೀರ್ಥಂಕರನ ಧರ್ಮವಿಜಯದ ಜೊತೆಗೆ ಈ ಪುರಾಣದಲ್ಲಿ ಭರತ ಚಕ್ರವರ್ತಿಯ ದಿಗ್ವಿಜಯವೂ ವರ್ಣಿತವಾಗಿದೆ. ಈ ಎರಡು ದಿಗ್ವಿಜಯಗಳಲ್ಲಿ ಎಷ್ಟು ಅಂತರ! ತೀರ್ಥಂಕರನ ಧರ್ಮವಿಜಯದ ಮುಂದೆ ಚಕ್ರವರ್ತಿಯ ಆಡಂಬರದ ಲೌಕಿಕ ದಿಗ್ವಿಜಯ ಮಂಕು ಮಂಕು.

ತೀರ್ಥಂಕರನ ದಿಗ್ವಿಜಯದಲ್ಲಿ ದಯವೇ ಧ್ವಜ, ಲೋಕಕಲ್ಯಾಣಕರವಾದ ಧರ್ಮವೇ ಗೆಲ್ಲುವ ಚಕ್ರ. ಭಕ್ತಿಯಿಂದ ಬಂದೆರಗುವವರಿಗೆ ದೊರೆಯುವ ಫಲ ಮುಕ್ತಿ. ಇಂಥ ಧರ್ಮಚಕ್ರವರ್ತಿಯನ್ನು ಪ್ರೀತಿಯಿಂದ ತಾವಾಗಿಯೆ ಆಶ್ರಯಿಸಿ ಉದ್ಧಾರಹೊಂದದವರು ಯಾರು? ಭರತ ಕ್ರೂರವಾದ ಚಕ್ರರತ್ನವನ್ನು ಮುಂದಿಟ್ಟುಕೊಂಡು ದೇಶದೇಶಗಳ ಮೇಲೆ ದಾಳಿಯಿಟ್ಟು ಎದುರಿಸಿದವರನ್ನು ಮುರಿದೆರಗಿಸಿ ಬಲಾತ್ಕಾರದಿಂದ ಕಪ್ಪ ತೆಗೆದುಕೊಂಡು ಷಟ್ಖಂಡಗಳನ್ನೂ ವಶಪಡಿಸಿಕೊಂಡನು. ಇವನನ್ನಾಶ್ರಯಿಸಿದವರು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ತಲೆತಗ್ಗಿಸಿ ನಿಲ್ಲಬೇಕಾಯಿತು. ಈ ವಿಜಯದಿಂದ ಭರತನಿಗಾದರೂ ಮೇಲುಂಟಾಯಿತೆ? ಇಲ್ಲ. ಅವನ ಗರ್ವ ಮೇರೆಮೀರಿತು. ವೃಷಭಾಚಲದಲ್ಲಿ ತನ್ನ ವಿಜಯಪ್ರಶಸ್ತಿಯನ್ನು ಕೆತ್ತಿಸಹೋದಾಗ ತಕ್ಕ ಶಾಸ್ತಿಯಾಯಿತು. ಅಲ್ಲಿನ ಕಲ್ಲುಗಳಮೇಲೆ ಎಲ್ಲಿಡೆಯೂ 'ಹಿಂದಿನ ಕಲ್ಪ ಶತಕೋಟಿಗಳಲ್ಲಿ' ಬಾಳಿದ 'ಚಕ್ರಿವೃಂದದ' ಪ್ರಶಸ್ತಿಗಳನ್ನು ಕಂಡು ಅವನ 'ಕೊಳಗೊಂಡ ಗರ್ವರಸ' ಸೋರಿಹೋಯಿತು. ಅಲ್ಲಿ ಬೇರೆಯವರ ಪ್ರಶಸ್ತಿಗೆ

ಎಡೆಯೇ ಇಲ್ಲದಿರಲು ನಾಚಿದನು. ಅಷ್ಟಕ್ಕೆ ಸುಮ್ಮನಾಗದೆ, ಹಿಂದಿನ ಚಕ್ರವರ್ತಿಯೊಬ್ಬನ ಪ್ರಶಸ್ತಿಯನ್ನು ಒರಸಿ ಹಾಕಿ ಆ ಬಳಿ ತನ್ನ ಪ್ರಶಸ್ತಿಯನ್ನು ಕೆತ್ತಿಸಿದನು.

ಷಟ್ಖಂಡ ಭರತವನ್ನೂ ಗೆದ್ದು ರಾಜಧಾನಿಗೆ ಹಿಂದಿರುಗಿದರೆ ಚಕ್ರರತ್ನ ಪಟ್ಟಣಕ್ಕೆ ಪ್ರವೇಶಿಸದೆ ಬಾಗಿಲಲ್ಲೆ ನಿಂತುಬಿಟ್ಟಿತು. ಲೋಕವೆಲ್ಲ ತನಗೆರಗಿದರೂ ಬಾಹುಬಲಿ ಮೊದಲಾದ ತಮ್ಮಂದಿರು ತನ್ನನ್ನು ಅಧಿರಾಜನೆಂದು ಒಪ್ಪಿಕೊಳ್ಳದ್ದರಿಂದ ದಿಗ್ವಿಜಯ ಇನ್ನೂ ಮುಗಿದಂತಾಗಲಿಲ್ಲ. ಅವರು ಹಾಗೆ ಒಪ್ಪಿಕೊಳ್ಳದಿರಲು ಸಾಮ್ರಾಜ್ಯದಿಂದ ಫಲವೇನೆಂದು ಭರತನಿಗೆ ಕೊರಗು; ಅವರನ್ನು ಎರಗಿಸಲೇಬೇಕೆಂಬ ಹಟ. ಈ ಹಟದಲ್ಲಿ ಸೋದರ ಪ್ರೀತಿಯನ್ನೂ ಕಾಣದಾದನು. ಬಂದೆರಗಬೇಕೆಂದು ಹೇಳಿ ಕಳಿಸಲು ಅಭಿಮಾನಿಗಳಾದ ಆ ತಮ್ಮಂದಿರು,

'ಪಿರಿಯಣ್ಣಂಗೆಱಗುವುದೇಂ
ಪರಿಭವವೇ ಕೀಱು ನೆತ್ತಿಯೊಳ್ ಬಾಳಂ ನಿ
ರ್ನೆರಮೂಱು ಚಲದಿನೆಱಗಿಸ
ಲಿರೆ ಭರತಂಗೆಱಗುವೆಱಕಮುಂಜಮೆಯಲ್ತೇ।'

ಎಂದು ಭಾವಿಸಿ 'ಆಳರಸೆಂಬ ದೈನ್ಯಕ್ಕೆ' ಹೇಸಿದರು. ಭರತನ ತಾಯ ಹೊಟ್ಟೆಯಲ್ಲಿ ಹುಟ್ಟಿದ ಎಲ್ಲ ತಮ್ಮಂದಿರೂ ಅಣ್ಣನೊಡನೆ ಹೋರಲೊಲ್ಲದೆ ರಾಜ್ಯವನ್ನು ತೊರೆದು ತಂದೆಯ ಬಳಿಗೆ ಹೋಗಿ ದೀಕ್ಷೆಗೊಂಡರು. ಭರತನಿಗೆ ಆಗಲೂ ಬುದ್ಧಿ ಬರಲಿಲ್ಲ. ಬಲತಾಯ ಮಗನಾದ ಯುವರಾಜ ಬಾಹುಬಲಿಯನ್ನೂ ಕೆಣಕಿದನು. ಅವನು ಭರತನ ಸಾಹಸಗಳನ್ನು ಕಡೆಗಣಿಸಿ ಹಾಸ್ಯಮಾಡಿ ನಕ್ಕು ಮಲೆತು ನಿಂತನು. ಯುದ್ಧ ಅನಿವಾರ್ಯವಾಯಿತು. ಇಬ್ಬರೂ ಮಂತ್ರಿಗಳ ಸಲಹೆಗೆ ಒಪ್ಪಿ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳಲ್ಲಿ ಹೋರಿದರು. ಎಲ್ಲದರಲ್ಲೂ ಅಣ್ಣನಿಗೇ ಅಪಜಯವಾಯಿತು. ಬಾಹುಬಲಿ ಕುಸ್ತಿಯಲ್ಲಿ ಭರತನನ್ನು ಹಿಡಿದೆತ್ತಿದರೂ ಹಿರಿಯಣ್ಣನೆಂಬ ಗೌರವದಿಂದ ಅವನನ್ನು ನೆಲಕ್ಕೆ ಕೆಡವದೆ ಮೆಲ್ಲನೆ ಕೆಳಗಿಳಿಸಿದನು. ಆದರೆ ಸೋಲಿನ ಅವಮಾನದಿಂದ ಮುಳಿದ ಭರತ ತಮ್ಮನ ಮೇಲೆ ಚಕ್ರವನ್ನೆ ಪ್ರಯೋಗಿಸಿದನು. ಆ ಚಕ್ರ ಬಾಹುಬಲಿಯನ್ನು ಘಾತಿಸದೆ ಪ್ರದಕ್ಷಿಣೆಮಾಡಿ ಪಕ್ಕದಲ್ಲಿ ನಿಂತಿತು. ಅಲ್ಲದ್ದುಮಾಡಿದನೆಂದು ಎಲ್ಲರೂ ಭರತನನ್ನು ತೆಗಳಿದರು. ಭರತ ನಾಚಿ ತಲೆತಗ್ಗಿಸಿದನು.

ಇದನ್ನು ಕಂಡು, 'ಅಣ್ಣನಲ್ಲಿ ದೊಡ್ಡ ಅವಿನಯವೆಸಗಿದೆನಲ್ಲಾ' ಎಂದು ಬಾಹುಬಲಿಗೆ ಪಶ್ಚಾತ್ತಾಪವಾಯಿತು. 'ಸೋದರರೊಳ್ ಸೋದರರಂ ಕಾದಿಸುವ' ರಾಜ್ಯ ಬೇಡವೆಂದು ವೈರಾಗ್ಯ ಹೊಂದಿದನು. ತಂದೆ ಕೊಟ್ಟ ರಾಜ್ಯವನ್ನು ಅಣ್ಣನಿಗೊಪ್ಪಿಸಿ, 'ಮಱೆವುದೆನ್ನ ದುರ್ವಿಳಸನಮಂ' ಎಂದು ಬೇಡಿಕೊಂಡು ತಪಸ್ಸಿಗೆ ಹೊರಟನು.

ಭರತನಿಗೆ ಆಗ ಜ್ಞಾನೋದಯವಾಯಿತು. 'ಏಕೆ ತಾನೆ ಹೀಗೆ ಮಾಡಿದೆನೋ' ಎಂದು ಸಂಕಟವಾಯಿತು. 'ನೀನೊರ್ಬನೈ, ಮನುವಂಶಕ್ಕೆ ಲಲಾಮನಪ್ಪನುಜನೈ. ಬೇಡಮ್ಮ. ನೀನುಂ ತಪೋವನನಮಂ ಸಾರ್ವುದುಂ ಆನಾರ್ಗೆ ಮೆಱೆವೆಂ ಮತ್ಪ್ರಾಜ್ಯ ಸಾಮ್ರಾಜ್ಯಮುಂ' ಎಂದು ತಮ್ಮನ ಕಾಲಿಗೆ ಬಿದ್ದು ಕಣ್ಣೀರು ಕರೆಯತೊಡಗಿದನು. ಬಾಹುಬಲಿ ತನ್ನ ನಿಶ್ಚಯವನ್ನು ಸಡಿಲಿಸದೆ ಅಣ್ಣನನ್ನು ಸಮಾಧಾನಗೊಳಿಸಿ ತಂದೆಯ ಬಳಿಗೆ ಹೋಗಿ ದೀಕ್ಷೆಗೊಂಡನು.

ಬಾಹುಬಲಿ ಬಹುಕಾಲ ತಪಸ್ಸುಮಾಡುತ್ತಿದ್ದರೂ 'ಭರತನ ರಾಜ್ಯದಲ್ಲಿ ನಿಂತಿರುವೆನಲ್ಲಾ' ಎಂಬ ಮಾನಕಷಾಯ ಕಾರಣವಾಗಿ ಅವನಿಗೆ ಕೇವಲ ಜ್ಞಾನ ಹುಟ್ಟಲಿಲ್ಲ. ಆಗ ಭರತ ಹೋಗಿ ಕಾಲ್ಗೆರಗಿ ಪೂಜಿಸಿ, 'ಈ ನೆಲ ನಿನ್ನದು. ನೀನು ಕೊಟ್ಟದ್ದರಿಂದ ನನಗೆ ಬಂತು. ಬೇರೊಂದನ್ನೂ ನೆನೆಯದೆ ಆತ್ಮಧ್ಯಾನಕ್ಕೆ ಮನಸ್ಸು ಕೊಡು' ಎಂದನು. ಆಗ ಬಾಹುಬಲಿಗೆ ಕೇವಲ ಜ್ಞಾನ ಉಂಟಾಯಿತು. ದೇವತೆಗಳೆಲ್ಲ ಬಂದು ಪೂಜಿಸಿದರು. ಭರತನೂ ಕೇವಲಿಯನ್ನು ಪೂಜಿಸಿ ರಾಜಧಾನಿಗೆ ಬಂದು ಸಾಮ್ರಾಜ್ಯ ಪಟ್ಟಾಭಿಷೇಕ ಮಾಡಿಸಿಕೊಂಡು ಧರ್ಮದಿಂದ ರಾಜ್ಯವಾಳುತ್ತಿದ್ದನು.

ಆದಿ ತೀರ್ಥಂಕರನ ಪರಿನಿರ್ವಾಣಾನಂತರ ಭರತ ಮೊದಲಾದವರೆಲ್ಲರೂ ಮುಕ್ತಿಗೆ ಸಂದರು.

### ಶ್ವೇತಾಂಬರ ಸಂಪ್ರದಾಯದ ಕಥೆ

ಶ್ವೇತಾಂಬರ ಸಂಪ್ರದಾಯದ 'ಆದೀಶ್ವರ ಚರಿತ್ರೆ'ಯಲ್ಲಿ ಕಥಾಸರಣಿಯಲ್ಲಿ ಹಲವು ವ್ಯತ್ಯಾಸಗಳಿವೆ. ಭವಾವಳಿಗಳು ಕೂಡ ಬೇರೆ ರೀತಿ ನಿರೂಪಿತವಾಗಿವೆ. ಕೆಲವು ವ್ಯತ್ಯಾಸಗಳನ್ನು ಇಲ್ಲಿ ಸೂಚಿಸಬಹುದು: ನಾಭಿರಾಜ ಮರುದೇವಿಯರು ಅವಳಿ ಮಕ್ಕಳು. ವೃಷಭನೊಡನೆ ಸುಮಂಗಳೆಯೆಂಬ ಅವಳಿ ಹೆಣ್ಣು ಹುಟ್ಟಿದಳು. ಅವಳನ್ನೂ, ತನ್ನ ಅವಳಿ ಗಂಡನ್ನು ಕಳೆದುಕೊಂಡಿದ್ದ ಸುನಂದೆ

ಯೆಂಬ ಕನ್ಯೆಯನ್ನೂ ವೃಷಭನಿಗೆ ಮದುವೆ ಮಾಡಿದರು. ಭರತ ಬ್ರಾಹ್ಮಿಯರೂ ಬಾಹುಬಲಿ ಸುಂದರಿಯರೂ ಅವಳಿ ಮಕ್ಕಳು. ಅವರನ್ನು ಅವರ ಬಲ ಸೋದರರಿಗೆ ಮದುವೆ ಮಾಡಿತ್ತು. ಸಮವಸರಣದಲ್ಲಿ ಆದಿ ತೀರ್ಥಂಕರನ ಉಪದೇಶವನ್ನು ಕೇಳಿ ಬ್ರಾಹ್ಮಿ ದೀಕ್ಷೆ ಪಡೆದಳು. ಸುಂದರಿಯ ದೀಕ್ಷೆಗೆ ಬಾಹುಬಲಿ ಸಮ್ಮತಿಸಿದರೂ ಭರತ ಒಪ್ಪಲಿಲ್ಲ. ಅವಳು ಶ್ರಾವಕಿಯಾಗಿ ಭರತನೊಡನೆ ರಾಜಧಾನಿಗೆ ಹೋದಳು. ಮುಂದೆ ಚಕ್ರವರ್ತಿ ದಿಗ್ವಿಜಯದಿಂದ ಹಿಂದಿರುಗಿದ ಮೇಲೆ ಅವನ ಅನುಮತಿ ಪಡೆದು ದೀಕ್ಷೆ ತೆಗೆದುಕೊಂಡಳು. ಆದಿನಾಥ ಸಮವಸರಣ ಮಂಟಪವನ್ನು ಪ್ರವೇಶಿಸಿ ಸಭೆಗೆ ನಮಸ್ಕಾರಮಾಡಿ ಸಿಂಹಾಸನವನ್ನೇರಿದನು. ತೀರ್ಥಂಕರರ ಉಪದೇಶ ಗಣಧರರ ವ್ಯಾಖ್ಯಾನವಿಲ್ಲದೆಯೇ ಎಲ್ಲರಿಗೂ ತಿಳಿಯುತ್ತಿತ್ತು. ಗಣಧರರು ತಮಗೆ ಆದಿನಾಥನು ಉಪದೇಶಿಸಿದ ವಿಷಯಗಳಿಗೆ ಅನುಸಾರವಾಗಿ ಹನ್ನೆರಡು ಅಂಗಶಾಸ್ತ್ರಗಳನ್ನು ರಚಿಸಿದರು; ತೀರ್ಥಂಕರ ಸಿಂಹಾಸನದಿಂದ ಇಳಿದ ಮೇಲೆ ಇಂದ್ರನ ಅನುಜ್ಞೆಯಿಂದ ಶಾಸ್ತ್ರಗಳನ್ನು ಬೋಧಿಸಿದರು. ಒಂದೇ ಸಮವಸರಣಮಂಟಪ ಎಲ್ಲೆಡೆಗೂ ಹೋಗುತ್ತಿರಲಿಲ್ಲ. ಆದಿನಾಥ ಉಪದೇಶಿಸಿದ ಕಡೆಯಲ್ಲೆಲ್ಲ ಬೇರೆ ಬೇರೆ ಮಂಟಪ ಸಿದ್ಧವಾಗುತ್ತಿತ್ತು. ಎಲ್ಲರಿಗಿಂತ ಮೊದಲು ಮೋಕ್ಷಕ್ಕೆ ಸಂದವಳು ಆಧಿನಾಥನ ತಾಯಿ ಮರುದೇವಿ. ಭರತ ಬಾಹುಬಲಿ ಮೊದಲಾದವರು ಆದಿನಾಥನ ಅನಂತರ ಮುಕ್ತಿ ಪಡೆದರು. ಭರತ ಬಾಹುಬಲಿಗಳ ಹೋರಾಟದಲ್ಲಿ ಭರತನ ಪಾತ್ರ ಹೆಚ್ಚು ಉದಾತ್ತವಾಗಿ ಚಿತ್ರಿತವಾಗಿದೆ.* ದಿಗಂಬರ ಸಂಪ್ರದಾಯದ ಭರತನಂತೆ ಅವನು ಗರ್ವಿಯಲ್ಲ. ಸೋದರ ಪ್ರೀತಿಯಿಂದ ಕೂಡಿದವನಾಗಿ ಜಿನಪುತ್ರನಿಗೆ ತಕ್ಕಂತೆ ನಡೆದುಕೊಳ್ಳುತ್ತಾನೆ. ಕರ್ತವ್ಯಕ್ಕೆ ಕಟ್ಟುಬಿದ್ದು ಬಾಹುಬಲಿಯೊಡನೆ ಯುದ್ಧಕ್ಕೆ ತೊಡಗುತ್ತಾನೆ. ಬಾಹುಬಲಿ ಮಾನವಸಹಜವಾದ ಕೋಪದರ್ಪಗಳನ್ನು ತೋರ್ಪಡಿಸುವನಾದರೂ ಅವನ ಘನತೆ ಸ್ವಲವೂ ಕುಗ್ಗಿಲ್ಲ. ಒಟ್ಟಿನಲ್ಲಿ ಕೆಲವು ಸಂದರ್ಭಗಳು ಶ್ವೇತಾಂಬರ ಸಂಪ್ರದಾಯದಲ್ಲಿ ಹೆಚ್ಚು ಮಾನವೀಯಾಗಿ ಚಿತ್ರಿತವಾಗಿವೆಯೆನ್ನಬಹುದು.

---

* ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ., ಅವರ 'ಶ್ರೀಗೊಮ್ಮಟೇಶ್ವರ' ಎಂಬ ಪುಸ್ತಕವನ್ನೂ ಕನ್ನಡ ನುಡಿ ಪತ್ರಿಕೆಯಲ್ಲಿ ಪ್ರಕಟವಾದ ಅವರ 'ಮದನ ಮದ ಭಂಗ' ಎಂಬ ಲೇಖನ ಮಾಲೆಯನ್ನೂ ನೋಡಿ.

### ಇತರ ಕವಿ ಕೃತಿಗಳು

ಪಂಪನಿಗಿಂತ ಹಿಂದೆ ಆದಿಪುರಾಣವನ್ನು ಕನ್ನಡದಲ್ಲಿ ಯಾರು ಬರೆದಿದ್ದರೋ ತಿಳಿಯದು. ಕ್ರಿ. ಶ. ೧೦ನೆಯ ಶತಮಾನದ ಕೊನೆಯಲ್ಲಿ ಚಾವುಂಡರಾಯನು ಶಲಾಕಾಪುರುಷರ ಚರಿತ್ರೆಯನ್ನು ಬರೆದನಷ್ಟೆ. ಅವನು ಆದಿ ತೀರ್ಥಂಕರನ ಕಥೆಯನ್ನು ಪಂಪನ ಆದಿಪುರಾಣದಿಂದ ಸಂಗ್ರಹಿಸಿ ಬರೆದನೋ ಏನೋ ಎನ್ನಿಸುವಷ್ಟು ಮಟ್ಟಿಗೆ ಅವೆರಡಕ್ಕೂ ಸಾಮ್ಯವಿದೆ. ಸುಮಾರು ಕ್ರಿ. ಶ. ೧೩ನೆಯ ಶತಮಾನದಲ್ಲಿದ್ದ ಹಸ್ತಿಮಲ್ಲನೆಂಬಾತನು* ರಚಿಸಿದ ಒಂದು ಆದಿ ಪುರಾಣ ಈಚೆಗೆ ದೊರೆತಿದೆ. ಅದರ ಕಥೆಯೂ ಪಂಪನ ಆದಿಪುರಾಣದ ಕಥೆ ಯನ್ನೇ ಬಹುಮಟ್ಟಿಗೆ ಹೋಲುತ್ತದೆಯಂತೆ.

ಈಚೆಗೆ ಕ್ರಿ. ಶ. ೧೬ನೆಯ ಶತಮಾನದಲ್ಲಿ ಸಾಂಗತ್ಯದಲ್ಲಿ ಭರತೇಶ ವೈಭವ ವನ್ನು ಬರೆದ ರತ್ನಾಕರವರ್ಣಿ ಆದಿ ಚಕ್ರವರ್ತಿಯಾದ ಭರತನನ್ನು ಕಥಾ ನಾಯಕನನ್ನಾಗಿ ಆರಿಸಿಕೊಂಡಿದ್ದಾನೆ. ಅವನು ಚಿತ್ರಿಸಿರುವ ಭರತ ಇನ್ನೂ ಉದಾತ್ತನಾದವನು. ಚಕ್ರವರ್ತಿಗೆ ತಕ್ಕಂತೆ ಅಪ್ರತಿಮ ಬಲಶಾಲಿಯಾದರೂ ಆದಿನಾಥನ ಹಿರಿಯ ಮಗನೆಂಬ ಘನತೆಗೆ ತಕ್ಕಂತೆ ಹಿಂಸೆಯನ್ನು ಸಂಪೂರ್ಣ ವಾಗಿ ತೊರೆದು ದೃಷ್ಟಿಯುದ್ಧಾದಿಗಳನ್ನು ಕೂಡ ಮಾಡಲೊಲ್ಲದೆ ತನ್ನ ಔದಾರ್ಯದಿಂದಲೆ ಬಾಹುಬಲಿಯನ್ನು ಗೆದ್ದುಬಿಡುತ್ತಾನೆ.

### ವೈದಿಕ ಧರ್ಮದಲ್ಲಿ ಈ ಮಹಾಪುರುಷರ ಕಥೆ

ಜೈನ ಮಹಾಪುರುಷರಾದ ವೃಷಭಭರತರು ವೈದಿಕ ಮತದವರಿಗೂ ಪೂಜ್ಯರಾಗಿದ್ದಾರೆ. ಇವರ ಕಥೆ ಭಾಗವತದ ಐದನೆಯ ಸ್ಕಂಧದಲ್ಲಿ ೪-೧೪ ನೆಯ ಅಧ್ಯಾಯಗಳಲ್ಲಿ ನಿರೂಪಿತವಾಗಿದೆ. ಆ ಕಥೆಯ ಮುಖ್ಯ ವಿಷಯಗಳನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು:

ಸ್ವಾಯಂಭುಮನುವಿನ ಮೊಮ್ಮಗನಾದ ಅಗ್ನೀಧ್ರ ಜಂಬೂದ್ವೀಪಕ್ಕೆ ಅಧಿ ಪತಿ. ಅವನು ತನ್ನ ಒಂಬತ್ತು ಮಕ್ಕಳಿಗೂ ಜಂಬೂದ್ವೀಪವನ್ನು ಹಂಚಿ ಕೊಟ್ಟನು. ಒಂದೊಂದು ಭಾಗಕ್ಕೂ ವರ್ಷವೆಂದು ಹೆಸರು. ಆ ಮಕ್ಕಳ

---

* ರಾಜಕಾರ್ಯ ಪ್ರಸಕ್ತ ಶ್ರೀ ಬೆಳ್ಳೂರು ಮೈಲಾರ ಶ್ರೀಕಂಠಯ್ಯನವರಿಗೆ ಅರ್ಪಿಸಿದ 'ಸಂಭಾವನೆ' ಎಂಬ ಗ್ರಂಥದಲ್ಲಿನ 'ಹಸ್ತಿಮಲ್ಲನ ಆದಿಪುರಾಣ' ಎಂಬ ಲೇಖನವನ್ನು ನೋಡಿ.

ಹೆಸರೇ ಅವರವರ ಭಾಗದ ನಾಡಿಗೂ ಬಂತು. ಅಗ್ನೀಧ್ರನ ಹಿರಿಯ ಮಗ ನಾಭಿ. ಅವನ ಹೆಂಡತಿ ಮೇರುದೇವಿ. ಬಹು ಕಾಲ ಸಂತಾನವಿಲ್ಲದಿರಲು ಆ ದಂಪತಿಗಳು ಭಗವಂತನನ್ನು ಉತ್ತಮವಾದ ಯಜ್ಞದಿಂದ ಆರಾಧಿಸಿದರು. ಭಗವಂತ ಪ್ರೀತನಾಗಿ ದಿಗಂಬರರೂ ಶ್ರಮಣರೂ ಆದ ಮಹರ್ಷಿಗಳ ಧರ್ಮಗಳನ್ನು ತೋರಿಸುವುದಕ್ಕಾಗಿ ಋಷಭನೆಂಬ ಹೆಸರಿನಿಂದ ನಾಭಿರಾಜನ ಮಗನಾಗಿ ಅವತಾರಮಾಡಿದನು.

ನಾಭಿರಾಜ ಕಾಲಕ್ರಮದಲ್ಲಿ ಋಷಭನಿಗೆ ಪಟ್ಟಾಭಿಷೇಕಮಾಡಿ ಮೇರುದೇವಿಯೊಡನೆ ತಪಸ್ಸಿಗೆ ಹೋದನು. ಭಗವಂತನಾದ ಋಷಭದೇವ ತನ್ನ ಅಜನಾಭವೆಂಬ ವರ್ಷ ಕರ್ಮಕ್ಷೇತ್ರವೆಂದು ತಿಳಿದು ಲೋಕಬೋಧನೆಗಾಗಿ ಗುರುಕುಲವಾಸ ಮಾಡಿ ಜಯಂತಿಯೆಂಬ ಕನ್ಯೆಯನ್ನು ಮದುವೆಯಾಗಿ ಅವಳಲ್ಲಿ ತನಗೆ ಸಮಾನರಾದ ನೂರು ಮಂದಿ ಮಕ್ಕಳನ್ನು ಪಡೆದನು. ಅವರಲ್ಲಿ ಹಿರಿಯವನಾದ ಭರತ ಮಹಾಯೋಗಿ, ಶ್ರೇಷ್ಠ ಗುಣಗಳುಳ್ಳವನು. ಅವನಿಂದಲೆ ಈ ವರ್ಷಕ್ಕೆ ಭಾರತವರ್ಷವೆಂದು ಹೆಸರಾಯಿತು. ಭರತನ ತಮ್ಮಂದಿರಲ್ಲಿ ಕಿರಿಯವರಾದ ೮೧ ಮಂದಿ ಬಹು ವಿನೀತರಾಗಿ ಮಹಾ ಶ್ರೋತ್ರಿಯರಾಗಿ ಯಜ್ಞಶೀಲರಾಗಿ ಬ್ರಾಹ್ಮಣರಾದರು.

ಭಗವಾನ್ ಋಷಭದೇವ ತಾನು ನಿತ್ಯಸ್ವತಂತ್ರನಾಗಿ ಕೇವಲಾನಂದಾನುಭವವುಳ್ಳ ಈಶ್ವರನೇ ಆದರೂ ಕಾಲವಶದಿಂದ ಖಿಲವಾದ ಧರ್ಮವನ್ನು ತನ್ನ ಆಚರಣೆಯಿಂದ ಲೋಕಕ್ಕೆ ಬೋಧಿಸುತ್ತ ಸಮಬುದ್ಧಿಯುಳ್ಳವನೂ ಉಪಶಾಂತನೂ ಮೈತ್ರಿಯುಳ್ಳವನೂ ಕಾರುಣಿಕನೂ ಆಗಿ ಗೃಹಸ್ಥಧರ್ಮದಲ್ಲಿ ಲೋಕವನ್ನು ನೆಲೆಗೊಳಿಸಿದನು. ಆ ಋಷಭಸ್ವಾಮಿ ಒಮ್ಮೆ ದೇಶಾಟನ ಮಾಡುತ್ತ ಬ್ರಹ್ಮರ್ಷಿಗಳ ಸಭೆಯಲ್ಲಿ ಸಕಲ ಪ್ರಜೆಗಳೂ ಕೇಳುವಂತೆ ತನ್ನ ಮಕ್ಕಳಿಗೆ ತತ್ತ್ವೋಪದೇಶ ಮಾಡಿದನು. ಅನಂತರ ಲೋಕಕ್ಕೆ ಪರಮಹಂಸ ಧರ್ಮವನ್ನು ಉಪದೇಶಿಸಬಯಸಿ ಭರತನಿಗೆ ಸಾಮ್ರಾಜ್ಯ ಪಟ್ಟಾಭಿಷೇಕಮಾಡಿ ತಾನು ಮನೆ ಬಿಟ್ಟು ದಿಗಂಬರನಾಗಿ ಹೊರಟುಹೋದನು. ಅಹಂಕಾರ ಮಮಕಾರಗಳಿಲ್ಲದವನಾಗಿ ಜನರಿಂದ ಆದ ಬಗೆಬಗೆಯ ಹಿಂಸೆಗಳನ್ನೆಲ್ಲ ಸಹಿಸಿಕೊಂಡು ಏಕಚರನಾಗಿ ಭೂಮಂಡಲವನ್ನೆಲ್ಲ ಸಂಚರಿಸಿದನು. ಕಡೆಗೆ ಅಜಗರ ವ್ರತವನ್ನವಲಂಬಿಸಿ ಮಲಮೂತ್ರಾದಿಗಳನ್ನು ಲಕ್ಷಿಸದೆ ಒಂದೇ ಕಡೆ ಮಲಗಿಬಿಟ್ಟನು. ಯೋಗಮಹಿಮೆಯಿಂದ ಅವನ ಮಲ ಕೂಡ ಸುಗಂಧಯುಕ್ತ

ವಾಯಿತು; ಅದರ ಮೇಲೆ ಬೀಸಿದ ಗಾಳಿ ಸುತ್ತ ಹತ್ತು ಯೋಜನದವರೆಗೆ ಪರಿಮಳಬೀರಿತು. ಕೈವಲ್ಯಪತಿಯಾದ ಋಷಭ ನಾನಾ ಬಗೆಯ ಯೋಗ ಚರ್ಯೆಗಳನ್ನು ನಡಸುತ್ತ ಆಕಾಶಗಮನ ಮೊದಲಾದ ಯೋಗ ಮಹಿಮೆಗಳು ತಾವಾಗಿಯೇ ಬಂದರೂ ಅವನ್ನು ಮೆಚ್ಚಲಿಲ್ಲ. ಕಡೆಗೆ ಅವಧೂತ ವೇಷ ಭಾಷೆ ಗಳುಳ್ಳವನಾಗಿ ದೇಹಾಭಿಮಾನವನ್ನು ತೊರೆದು ದೇಶಗಳನ್ನು ಸುತ್ತುತ್ತ ಕರ್ಣಾಟಕದ ಕುಟಕಾಚಲದ ವನದಲ್ಲಿ ಕಾಡುಬೆಂಕಿಗೆ ಸಿಕ್ಕಿ ಸುಟ್ಟು ಹೋದನು.

ಭರತನು ಧರ್ಮದಿಂದ ರಾಜ್ಯವಾಳಿ ಕಡೆಗೆ ತಪೋವನಕ್ಕೆ ಹೋದನು. ಸರ್ವಸಂಗ ಪರಿತ್ಯಾಗಮಾಡಿದ್ದ ಆತನು ಕರುಣೆಯಿಂದ ತಾನು ಸಾಕಿದ ಒಂದು ಜಿಂಕೆಯ ಮರಿಯ ಮೋಹಕ್ಕೆ ಸಿಕ್ಕಿ ಮುಕ್ತಿಮಾರ್ಗವಿಮುಖನಾದನು. ಆ ಮೋಹದಿಂದ ಆತನಿಗೆ ಜಿಂಕೆಯ ಜನ್ಮ ಬಂತು. ಆಗ ಜಾತಿಸ್ಮರನಾಗಿ ಭಗವದ್ಧ್ಯಾನದಲ್ಲಿ ಮನಸ್ಸಿಟ್ಟು ಸತ್ತು ಪರಮಜ್ಞಾನಿಯಾದ ಜಡಭರತನೆಂಬ ಬ್ರಾಹ್ಮಣನಾಗಿ ಹುಟ್ಟಿದನು. ಆ ಹುಟ್ಟಿನಲ್ಲಿ ರಹೂಗಣನೆಂಬ ದೊರೆಗೆ ತತ್ತ್ವೋಪದೇಶಮಾಡಿದನು. ಕಡೆಯಲ್ಲಿ ಮುಕ್ತನಾದನು. ಭರತನ ಈ ಕಥೆ ಆರೇಳು ಅಧ್ಯಾಯಗಳಲ್ಲಿ ಬಹು ಸುಂದರವಾಗಿ ವರ್ಣಿತವಾಗಿದೆ.

## ಜೈನ ಧರ್ಮದ ಆಸ್ತಿಕತೆ

ಋಷಭದೇವ ಶ್ರೀಮನ್ನಾರಾಯಣನ ಅವತಾರವೆಂದೂ ಭರತ ಪರಮ ಯೋಗಿಯೆಂದೂ ಪರಮ ಪೂಜ್ಯರಾಗಿದ್ದಾರೆ. ಭಗವಂತನಾದ ಋಷಭನ ಚರಿತ್ರೆ ಮತ್ತು ಉಪದೇಶಗಳಲ್ಲಿ ಸ್ವಲ್ಪಮಟ್ಟಿಗೆ ಜೈನಧರ್ಮದ ಹೋಲಿಕೆ ಕಂಡು ಬರುತ್ತದೆ.

ಜೈನಧರ್ಮ ಬೌದ್ಧಧರ್ಮದಂತೆಯೆ ವೈದಿಕಧರ್ಮದಲ್ಲಿ ಕೆಲವು ಕೊರತೆಗ ಳನ್ನು ಕಂಡು ಪ್ರತಿಭಟಿಸಿ ನಿಂತ ಸಂಸ್ಕಾರಕ ಧರ್ಮ. ವೈದಿಕಧರ್ಮವನ್ನು ಅನುಸರಿಸುತ್ತಿದ್ದವರಲ್ಲಿ ಈ ರೀತಿಯ ಮನೋಭಾವನೆಯುಳ್ಳವರು ಕೆಲವರು ಮೊದಲಿನಿಂದಲೂ ಇದ್ದಿರಬಹುದು. ಕಾಲಕ್ರಮದಲ್ಲಿ ಆ ಭಾವನೆ ಬೆಳೆದು ವೈದಿಕ ಯಜ್ಞಕರ್ಮಗಳನ್ನೊಪ್ಪದ ಅಹಿಂಸಾ ಪ್ರಧಾನವಾದ ಮತ್ತು ತೀವ್ರ ತಪಶ್ಚರ್ಯೆಯನ್ನು ಒತ್ತಿ ಹೇಳುವ ಜೈನಧರ್ಮ ರೂಪುಗೊಂಡಿರಬೇಕು.

ಋಗ್ವೇದಾದಿ ವೇದಗಳನ್ನೂ ಸೃಷ್ಟಿ ಸ್ಥಿತಿ ಲಯ ಕರ್ತನಾದ ದೇವರನ್ನೂ ಒಪ್ಪುವುದಿಲ್ಲವಾದ್ದರಿಂದಿರಬೇಕು, ಜೈನಮತ ನಾಸ್ತಿಕಮತವೆಂದು ಪರಿಗಣಿತ

ವಾಗಿದೆ. ಆದರೆ, 'ಜೀವವುಂಟು, ಆ ಜೀವ ಕರ್ಮಕ್ಷಯ ಮಾಡಿಕೊಂಡು ಸಂಸಾರವನ್ನು ದಾಟಿ ಮುಕ್ತಿ ಪಡೆಯಬಲ್ಲುದು, ಪಡೆಯಬೇಕು,' ಎಂದು ಪ್ರತಿಪಾದಿಸುವ ಈ ಜೈನ ಧರ್ಮವನ್ನು ನಾಸ್ತಿಕ ಧರ್ಮವೆನ್ನುವುದು ಉಚಿತ ವಲ್ಲ.

### ಹಿರಿಯರ ಧರ್ಮ ಸಮನ್ವಯ ದೃಷ್ಟಿ

ಧರ್ಮಕ್ಕೆ ಅಡಿಗಲ್ಲಾಗಿರುವ ಮುಖ್ಯ ತತ್ತ್ವಗಳಲ್ಲಿ ಜೈನಮತಕ್ಕೂ ವೈದಿಕ ಮತಗಳಿಗೂ ವಿಶೇಷ ಸಾಮ್ಯವುಂಟು. ಇದನ್ನರಿತೆ ಧರ್ಮಸಮನ್ವಯ ಬುದ್ಧಿ ಯುಳ್ಳ ನಮ್ಮ ಹಿರಿಯರು,

'ಆಕಾಶಾತ್ ಪತಿತಂ ತೋಯಂ ಯಥಾ ಗಚ್ಛತಿ ಸಾಗರಂ
ಸರ್ವದೇವ ನಮಸ್ಕಾರಃ ಕೇಶವಂ ಪ್ರತಿ ಗಚ್ಛತಿ' [1]

ಎಂದು ಭೇದವನ್ನು ಮರೆಯ ಬೋಧಿಸಿದರು. ಮತಕಲಹಗಳನ್ನು ಮೆಚ್ಚದೆ,

'ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನಃ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹನ್ ಇತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ' [2]

ಎಂದು ಬೇಲೂರಿನ ಚೆನ್ನಕೇಶವ ದೇವಸ್ಥಾನದಲ್ಲಿ ಶಾಸನ ನೆಡಿಸಿ ಧರ್ಮ ಸಮನ್ವಯ ಮಾಡಿದರು.

ಈ ಅಭಿಪ್ರಾಯವನ್ನೊಳಕೊಂಡ ಹಲವು ಶ್ಲೋಕಗಳು ಹಿರಿಯರ ಬಾಯಲ್ಲಿ ಕೇಳಬರುತ್ತವೆ. ಜೈನಸಮಾಜದಲ್ಲಿ ಪ್ರಚಾರದಲ್ಲಿರುವ ಕೆಲವು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ.

---

[1] ಆಕಾಶದಿಂದ ಬಿದ್ದ ನೀರು ಹೇಗೆ ಸಮುದ್ರಕ್ಕೆ ಹೋಗಿ ಸೇರುವುದೊ ಹಾಗೆ ಎಲ್ಲ ದೇವರಿಗೆ ಮಾಡಿದ ನಮಸ್ಕಾರವೂ ಕೇಶವನನ್ನು ಸೇರುತ್ತದೆ.

[2] ಯಾರನ್ನು ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮವೆಂದೂ, ಪ್ರಮಾಣ ಪಟುಗಳಾದ ನೈಯಾಯಿಕರು ಕರ್ತನೆಂದೂ, ಜೈನಶಾಸನದಲ್ಲಿ ಆಸಕ್ತರಾದವರು ಅರ್ಹ ನೆಂದೂ, ಮೀಮಾಂಸಕರು ಕರ್ಮವೆಂದೂ, ಉಪಾಸನೆಮಾಡುವರೊ ಆ ಶ್ರೀ ಕೇಶ ವೇಶನು ಯಾವಾಗಲೂ ಇಷ್ಟಾರ್ಥವನ್ನು ಕೊಡಲಿ.

ಭವಬೀಜಾಂಕುರ ಜನನಾ ರಾಗಾದ್ಯಾಃ ಕ್ಷಯಮುಪಾಗತಾ ಯಸ್ಯ
ಬ್ರಹ್ಮಾ ವಾ ವಿಷ್ಣುರ್ವಾ ಹರೋ ಜಿನೋ ವಾ ನಮಸ್ತಸ್ಮೈ[3]

ಯೋ ವಿಶ್ವಂ ವೇದ ವೇದ್ಯಂ ಜನನಜಲನಿಧೇರ್ಭಂಗಿನಃ ಪಾರದೃಶ್ವಾ
ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ ನಿಷ್ಕಲಂಕಂ ಯದೀಯಂ
ತಂ ವಂದೇ ಸಾಧುವಂದ್ಯಂ ಸಕಲಗುಣನಿಧಿಂ ಧ್ವಸ್ತಮೋಹದ್ವಿಷಂತಂ
ಬುದ್ಧಂ ವಾ ವರ್ಧಮಾನಂ ಶತದಲನಿಲಯಂ ಕೇಶವಂ ವಾ ಶಿವಂ ವಾ[4]

ವಿಷ್ಣುರ್ವಾ ತ್ರಿಪುರಾಂತಕೋ ಭವತು ವಾ ಬ್ರಹ್ಮಾ ಸುರೇಂದ್ರೋಽಥವಾ
ಭಾನುರ್ವಾ ಶಶಲಾಂಛನೋಥ ಭಗವಾನ್ ಸಿದ್ಧೋಽಥ ಬುದ್ಧೋಽಥವಾ
ರಾಗ ದ್ವೇಷ ವಿಷಾರ್ತಿ ದೋಷರಹಿತಃ ಸತ್ವಾನುಕಂಪೋದ್ಯತೋ
ಯಸ್ಸರ್ವೈಃ ಸಹ ಸಂಸ್ಕೃತೋ ಗುಣಗಣೈಸ್ತಸ್ಮೈ ನಮಸ್ಸರ್ವದಾ[5]

ಬುದ್ಧಸ್ತ್ವಮೇವ ವಿಬುಧಾರ್ಚಿತ ಬುದ್ಧಿಬೋಧಾತ್
ತ್ವಂ ಶಂಕರೋಽಸಿ ಭುವನತ್ರಯ ಶಂಕರತ್ವಾತ್
ಧಾತಾಸಿ ಧೀರ ಶಿವಮಾರ್ಗವಿಧೇರ್ವಿಧಾನಾತ್
ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಽಸಿ[6]

---

[3] ಸಂಸಾರವೆಂಬ ಬೀಜಕ್ಕೆ ಮೊಳಕೆಯುಂಟುಮಾಡುವ ರಾಗಾದಿಗಳು ಯಾರಲ್ಲಿ ನಾಶ ಹೊಂದಿವೆಯೊ ಆತನು ಬ್ರಹ್ಮನೊ ವಿಷ್ಣುವೊ ಹರನೊ ಅಥವಾ ಜಿನನೊ ಯಾರೆ ಆಗಿರಲಿ ಆತನಿಗೆ ನಮಸ್ಕಾರ.

[4] ತಿಳಿಯಬೇಕಾದದ್ದೆಲ್ಲವನ್ನೂ ಯಾರು ತಿಳಿದು ಬಲ್ಲನೊ, ಹುಟ್ಟುಸಾವುಗಳೆಂಬ ಕಡಲಿನ ಎಲ್ಲ ಪ್ರಕಾರಗಳ ದಡವನ್ನೂ ಯಾರು ಕಂಡಿರುವನೊ, ಯಾರ ವಚನವು ಪೂರ್ವಾಪರ ವಿರೋಧವಿಲ್ಲದೆ ಎಣೆಯಿಲ್ಲದ್ದಾಗಿ ಕಳಂಕರಹಿತವಾಗಿರುವುದೋ, ಮೋಹ ವೆಂಬ ಶತ್ರುವನ್ನು ಧ್ವಂಸಮಾಡಿದವನೂ ಸಾಧುಗಳ ವಂದನೆಗೆ ಅರ್ಹನೂ ಸಕಲಗುಣ ನಿಧಿಯೂ ಆದ ಆತನು ಬುದ್ಧನಾಗಲಿ ವರ್ಧಮಾನನಾಗಲಿ ಶತದಲ(ಕಮಲ)ದಲ್ಲಿ ನೆಲಸಿದ ಬ್ರಹ್ಮನಾಗಲಿ ಕೇಶವನಾಗಲಿ ಅಥವಾ ಶಿವನಾಗಲಿ ಆತನನ್ನು ವಂದಿಸುತ್ತೇನೆ.

[5] ವಿಷ್ಣುವಾಗಿರಲಿ, ತ್ರಿಪುರಾಂತಕ(ನಾದ ಶಿವ)ನಾಗಿರಲಿ, ಬ್ರಹ್ಮನೋ ದೇವೇಂ ದ್ರನೋ ಆಗಿರಲಿ, ಸೂರ್ಯನೋ ಚಂದ್ರನೋ ಆಗಿರಲಿ, ಭಗವಂತನಾದ ಸಿದ್ಧನಾಗಿ ರಲಿ ಅಥವಾ ಬುದ್ಧನಾಗಿರಲಿ, ರಾಗ, ದ್ವೇಷ, ಕ್ಲೇಶ ಮೊದಲಾದ ದೋಷಗಳಿಲ್ಲದ ವನೂ ಜೀವದಯೆಯುಳ್ಳವನೂ ಸಮಸ್ತ ಗುಣಗಣಗಳಿಂದ ಅಲಂಕೃತನೂ ಆದವನು ಯಾರೊ ಆತನಿಗೆ ಸದಾ ನಮಸ್ಕಾರ.

[6] ಜ್ಞಾನಿಗಳಿಂದ ಪೂಜೆಗೊಂಡ ಎಲೈ ಸ್ವಾಮಿಯೆ, ಬುದ್ಧಿಯನ್ನು (ಜ್ಞಾನವನ್ನು) ಬಲ್ಲವನಾದ್ದರಿಂದ ನೀನೆ ಬುದ್ಧನು. ಮೂರು ಲೋಕಕ್ಕೂ ಮಂಗಳವುಂಟುಮಾಡುವ ನಾದ್ದರಿಂದ ನೀನು ಶಂಕರನು; ಪರಮ ಮಂಗಳವೆನಿಸಿದ ಮೋಕ್ಷಮಾರ್ಗದ ವಿಧಿಗಳನ್ನು ವಿಧಿಸಿದವನಾದ್ದರಿಂದ ನೀನೆ ಬ್ರಹ್ಮನು. ಭಗವನ್, ಹೀಗೆ ನೀನೆ ಪುರುಷೋತ್ತಮ ನಾಗಿರುವೆಯೆಂಬುದು ವ್ಯಕ್ತವಾಗಿದೆ.

ಎಲ್ಲರೂ ಎಲ್ಲ ಮತಗಳ ಮೂಲತತ್ತ್ವಗಳನ್ನೂ ಅರಿತುಕೊಳ್ಳುವುದು ಸಮನ್ವಯ ದೃಷ್ಟಿಗೆ ಸಹಕಾರಿ. ಪಂಪ ತನ್ನ ಮೆಚ್ಚಿನ ಜೈನಧರ್ಮವನ್ನು ಕಾವ್ಯಧರ್ಮದೊಡನೆ ಬೆರಸಿ ಈ ಗ್ರಂಥದಲ್ಲಿ ಪರಿಚಯಮಾಡಿ ಕೊಟ್ಟಿದ್ದಾನೆ. ಅದನ್ನರಿತು ಜನ ಕೃತಾರ್ಥರಾಗಲಿ.

## ೫ ಪಂಪನ ಪುರಾಣ ಮಾರ್ಗ

ಪೂರ್ವಪುರಾಣ ಸ್ವಲ್ಪ ಕಡಮೆ ಹತ್ತು ಸಾವಿರ ಶ್ಲೋಕಗಳನ್ನೊಳಕೊಂಡಿರುವ ಮಹಾಗ್ರಂಥ. ಅದನ್ನು ಪಂಪ ಸುಮಾರು ೧೬೦೦ ಪದ್ಯಗಳಷ್ಟಕ್ಕೆ ಇಳಿಸಿದ್ದಾನೆ. ಮುಖ್ಯ ಕಥೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅದಕ್ಕೆ ಪುಷ್ಟಿ ಕೊಡುವ ಉಪಾಖ್ಯಾನಗಳನ್ನು ಉಚಿತವರಿತು ಸೇರಿಸಿದ್ದಾನೆ. ಕಾವ್ಯದೃಷ್ಟಿಯಿಂದ ನೀರಸವಾದರೂ ಧರ್ಮದೃಷ್ಟಿಯಿಂದ ಅತ್ಯಾವಶ್ಯಕವಾಗಿರುವ ಮತಪ್ರಕ್ರಿಯೆಗಳನ್ನೂ ಧರ್ಮೋಪದೇಶಗಳನ್ನೂ ಮುಖ್ಯವಾಗಿ ಗದ್ಯಗಳಲ್ಲಿ ಆದಷ್ಟು ಮಟ್ಟಿಗೆ ಅಡಕವಾಗಿ ಹೇಳಿದ್ದಾನೆ.

ಆದಿಪುರಾಣವನ್ನು ರಚಿಸುವಲ್ಲಿ ಪಂಪ ಹಲವು ನಿರ್ಬಂಧಗಳಿಗೆ ಒಳಗಾಗಿದ್ದಾನೆ. ಇಲ್ಲಿ ಪಂಚಕಲ್ಯಾಣಗಳ ವಿಸ್ತಾರವಾದ ವರ್ಣನೆಗಳಿಗೂ ಧರ್ಮಬೋಧೆಗಳಿಗೂ ಪ್ರಾಮುಖ್ಯ ಕೊಡಲೇಬೇಕು. ಕಥಾಸರಣಿಯಲ್ಲಾಗಲಿ ಸಂದರ್ಭವಿವರಣೆಯಲ್ಲಾಗಲಿ ಸ್ವಲ್ಪವೂ ಹೆಚ್ಚುಕಡಮೆ ಮಾಡುವಂತಿಲ್ಲ. ಸಂಪ್ರದಾಯವನ್ನು ಬಿಟ್ಟು ಅತ್ತಿತ್ತ ಅಲಗುವ ಹಾಗಿಲ್ಲ. ಅಲ್ಲದೆ ಕಥೆ ಕೂಡ ವೈವಿಧ್ಯವಿಲ್ಲದೆ ವೈರಾಗ್ಯಕ್ಕೆ ಮೀಸಲಾಗಿ ಹೋಗಿದೆ. ಇಲ್ಲಿ ಮನುಷ್ಯನ ಹೃದಯವನ್ನು ಉಬ್ಬಿಸಿ ಕೆರಳಿಸುವ ವಿಧವಿಧವಾದ ಭಾವಪ್ರವಾಹಕ್ಕೆ ತಕ್ಕಷ್ಟು ಅವಕಾಶ ದೊರೆಯದು. ಪ್ರೇಮ, ಸುಖಭೋಗ, ರಾಜ್ಯವೈಭವ, ವೀರಜೀವನ —ಇವುಗಳ ಪ್ರಸ್ತಾಪ ಬಂದರೂ ಗುರಿ ಮಾತ್ರ ಅವುಗಳಲ್ಲಿ ಹುರುಳಿಲ್ಲವೆಂದು ತೋರಿಸುವ ವೈರಾಗ್ಯನಿರೂಪಣೆಯೆ. ಭರತನ ಅರುವತ್ತು ಸಾವಿರ ವರ್ಷದ ದಿಗ್ವಿಜಯಯಾತ್ರೆ ಮನವಲುಗಿಸುವ ಘಟನೆಗಳಿಲ್ಲದೆ, ದೊಡ್ಡ ಮೆರವಣಿಗೆಯಂತೆ ತೋರುತ್ತದೆ. ಭರತ ಬಾಹುಬಲಿಗಳ ಹೋರಾಟ ಕುತೂಹಲವನ್ನು ಉಕ್ಕಿಸಿದರೂ ಯಥಾಪ್ರಕಾರ ವೈರಾಗ್ಯದ ಮಹತ್ತ್ವವನ್ನೆ ಎತ್ತಿ ಹಿಡಿಯುತ್ತದೆ. ಇವರ ಜೊತೆಗೆ ಆದಿಪುರಾಣವನ್ನು ಬರೆದಾಗ ಪಂಪ ಪೂರ್ವಪುರಾಣದ ಸಂಸ್ಕೃತಕ್ಕೆ ಪೂರ್ಣವಾಗಿ ಮನಸೋತಿದ್ದನು. ಅವನಿಗೂ ಪಾಂಡಿತ್ಯಾಭಿ

ಮಾನ ಹೆಚ್ಚಾಗಿದ್ದಂತೆ ತೋರುತ್ತದೆ. ಸಂಸ್ಕೃತವನ್ನು ಯಾವ ತಡೆಯೂ ಇಲ್ಲದೆ ಉಪಯೋಗಿಸಿದ್ದಾನೆ. ಅಚ್ಚ ಕನ್ನಡದಲ್ಲೇ ಲಲಿತವಾದ ಚೆಲುವಾದ ಹಲವು ಪದ್ಯಗಳನ್ನು ಬರೆದಿರುವನಾದರೂ ಒಟ್ಟನಲ್ಲಿ ಇಲ್ಲಿ ಸಂಸ್ಕೃತದ ಪ್ರಭಾವ ಹೆಚ್ಚು. ಗದ್ಯದಲ್ಲಂತೂ ಉದ್ದುದ್ದವಾದ ಸಂಸ್ಕೃತಸಮಾಸಗಳು ಅಡಿಗಡಿಗೆ ಎದ್ದು ನಿಲ್ಲುತ್ತವೆ. ಹೀಗೆ ಪೌರಾಣಿಕ ಆವರಣ, ಕಥೆಯ ಪರಿಮಿತಿ, ಮತ ಪ್ರಕ್ರಿಯೆಗಳ ಗೊಂದಲ, ಸಂಪ್ರದಾಯದ ಕಟ್ಟು, ಪಾಂಡಿತ್ಯದ ಠೀವಿ ಎಲ್ಲ ಸೇರಿ ಪಂಪನ ಅದ್ವಿತೀಯವಾದ ಕವಿತಾಶಕ್ತಿ ಉಕ್ಕಿ ಹರಿಯಲು ಇಲ್ಲಿ ಅವಕಾಶ ವಿಲ್ಲವಾಗಿದೆ. ತಡೆಯಿಲ್ಲದೆ ಭೋರ್ಗರೆದು ಹರಿಯುವ ಮಹಾನದಿ ಇಕ್ಕಟ್ಟಿನ ನಾಲೆಯಲ್ಲಿ ಸಿಕ್ಕಿ ಮುಂದುವರಿಯುವಂತಾಗಿದೆ.

ಇಷ್ಟು ನಿರ್ಬಂಧಗಳಿಗೊಳಗಾಗಿದ್ದರೂ ಪಂಪ ಕೈಕೊಂಡ ಕೆಲಸವನ್ನು ಅತ್ಯುತ್ತಮವಾಗಿ ನಿರ್ವಹಿಸಿದ್ದಾನೆ. ವೈರಾಗ್ಯನಿರೂಪಣೆಯನ್ನೂ ಧರ್ಮ ಬೋಧನೆಯನ್ನೂ ಕಾವ್ಯಾಮೃತದಲ್ಲಿ ಹುದುಗಿಸಿ ರಸವತ್ತಾಗಿಮಾಡಿದ್ದಾನೆ. ಹೆಜ್ಜೆ ಹೆಜ್ಜೆಗೂ ಮೂಲವನ್ನೆ ಅನುಸರಿಸುತ್ತ ಹೋಗುತ್ತಿದ್ದರೂ ಅಲ್ಲಲ್ಲೆ ಮೂಲ ದಲ್ಲಿಲ್ಲದ, ಸ್ವಂತ ಪ್ರತಿಭೆಯಿಂದ ಹೊಮ್ಮಿದ ಮಿಂಚುಕಳೆ ಕೊಟ್ಟಿದ್ದಾನೆ. ತನ್ನ ಅಪಾರವಾದ ಸಾಹಿತ್ಯಾನುಭವವನ್ನೂ ಲೋಕಾನುಭವವನ್ನೂ ಮೆರೆ ದಿದ್ದಾನೆ. ಇಲ್ಲಿನಂತೆ ನಿರ್ಬಂಧಗಳಿಲ್ಲದಿದ್ದ 'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪನ ಕವಿತಾಪ್ರವಾಹ ನಿರರ್ಗಳವಾಗಿ ಉಕ್ಕಿ ಹರಿದಿದೆ; ಪ್ರತಿಭೆ ತುತ್ತತುದಿ ಯನ್ನು ಮುಟ್ಟಿದೆ. ಅದರ ಪೂರ್ವ ಸೂಚನೆಯೋ ಎಂಬಂತೆ ಆದಿಪುರಾಣ ದಲ್ಲಿ ಕೆಲವು ಸನ್ನಿವೇಶಗಳು ಮೂಡಿಬಂದಿವೆ. ಅವುಗಳಲ್ಲಿ 'ನೀಲಾಂಜನೆಯ ನೃತ್ಯ' ಮುಖ್ಯವಾದ್ದು.

ಕಥೆಯನ್ನು ಅದರ ಅಂಗಾಂಗಗಳ ಹವಣು ಮೀರದಂತೆ, 'ಮೆಯ್ಗುಡ ಲೀಯ' ದಂತೆ ಅಡಗಿಸಿ ಹೇಳುವುದರಲ್ಲೂ ಅಗತ್ಯವಲ್ಲದ್ದನ್ನು ಬಿಡುವುದರಲ್ಲೂ ಪಂಪನ ಜಾಣ್ಮೆಗೆ ಎಣೆಯಿಲ್ಲ. ಆ ಕಥಾಸಂಗ್ರಹದ ರೀತಿಯನ್ನೂ 'ಆದಿ ಪುರಾಣ' 'ಪೂರ್ವಪುರಾಣ'ಗಳ ಪರಸ್ಪರ ಸಂಬಂಧವನ್ನೂ ಒಂದೆರಡು ನಿದರ್ಶನಗಳಿಂದ ಅರಿತುಕೊಳ್ಳಬಹುದು.

೧. ಆದಿಪುರಾಣದ ಕಥೆ ಮೊದಲಾಗುವುದು ಸ್ವಯಂಬುದ್ಧನ ಧರ್ಮೋಪ ದೇಶದಲ್ಲಿ. ಆ ಭಾಗ 'ಪೂರ್ವಪುರಾಣ'ದಲ್ಲಿ ಹೀಗಿದೆ—

"ವೈದ್ಯಾಧರೀಮಿಮಾಂ ಲಕ್ಷ್ಮೀಂ ವಿದ್ಧಿ ಪುಣ್ಯಫಲಂ ವಿಭೋ ॥ ೧೪ ॥
ಧರ್ಮಾದಿಷ್ಟಾರ್ಥಸಂಪತ್ತಿಸ್ತತಃ ಕಾಮಸುಖೋದಯಃ
ಸ ಚ ಸಂಪ್ರೀತಯೇ ಪುಂಸಾಂ ಧರ್ಮಾತ್ ಸೈಷಾ ಪರಂಪರಾ ॥ ೧೫ ॥
ರಾಜ್ಯಂ ಚ ಸಂಪದೋ ಭೋಗಾಃ ಕುಲೇ ಜನ್ಮ ಸುರೂಪತಾ
ಪಾಂಡಿತ್ಯಮಾಯುರಾರೋಗ್ಯಂ ಧರ್ಮಸ್ಯೈತತ್ ಫಲಂ ವಿದುಃ ॥ ೧೬ ॥

* * *

ಯತೋಽಭ್ಯುದಯನಿಃಶ್ರೇಯಸಾರ್ಥಸಿದ್ಧಿಃ ಸುನಿಶ್ಚಿತಾ
ಸ ಧರ್ಮಸ್ತಸ್ಯ ಧರ್ಮಸ್ಯ ವಿಸ್ತರಂ ಶೃಣು ಸಾಂಪ್ರತಂ ॥ ೨೦ ॥
ದಯಾಮೂಲೋ ಭವೇದ್ಧರ್ಮೋ ದಯಾ ಪ್ರಾಣಾನುಕಂಪನಂ
ದಯಾಯಾಃ ಪರಿರಕ್ಷಾರ್ಥಂ ಗುಣಾಃ ಶೇಷಾಃ ಪ್ರಕೀರ್ತಿತಾಃ ॥ ೨೧ ॥
ಧರ್ಮಸ್ಯ ತಸ್ಯ ಲಿಂಗಾನಿ ದಮಃ ಕ್ಷಾಂತಿರಹಿಂಸತಾ
ತಪೋ ದಾನಂ ಚ ಶೀಲಂ ಚ ಯೋಗೋ ವೈರಾಗ್ಯಮೇವ ಚ ॥ ೨೨ ॥
ಅಹಿಂಸಾ ಸತ್ಯವಾದಿತ್ವಮಚೌರ್ಯಂ ತ್ಯಕ್ತಕಾಮತಾ
ನಿಷ್ಪರಿಗ್ರಹತಾ ಚೇತಿ ಪ್ರೋಕ್ತೋ ಧರ್ಮಃ ಸನಾತನಃ ॥ ೨೩ ॥
ತಸ್ಮಾತ್ ಧರ್ಮಫಲಂ ಜ್ಞಾತ್ವಾ ಸರ್ವಂ ರಾಜ್ಯಾದಿಲಕ್ಷಣಂ
ತದರ್ಥಿನಾ ಮಹಾಭಾಗ ಧರ್ಮೇ ಕಾರ್ಯಾ ಮತಿಃ ಸ್ಥಿರಾ ॥ ೨೪ ॥
ಧೀಮನ್ನಿಮಾಂ ಚಲಾಂ ಲಕ್ಷ್ಮೀಂ ಶಾಶ್ವತೀಂ ಕರ್ತುಮಿಚ್ಛತಾ
ತ್ವಯಾ ಧರ್ಮೋಽನುಮಂತವ್ಯಃ ಸೋಽನುಷ್ಠೇಯಶ್ಚ ಶಕ್ತಿತಃ ॥ ೨೫ ॥
ಇತ್ಯುಕ್ತ್ವಾಥ ಸ್ವಯಂಬುದ್ಧೇ ಸ್ವಾಮಿಶ್ರೇಯೋನುಬಂಧಿನಿ
ಧರ್ಮ್ಯಮರ್ಥ್ಯಂ ಯಶಸ್ಯಂ ಚ ವಚೋ ವಿರತಿಮಾಯುಷಿ ॥ ೨೬ ॥

ಪಂಪ ಇಷ್ಟರ ಸಾರವನ್ನೂ ಈ ಮಾತುಗಳಲ್ಲಿ ಸಂಗ್ರಹಿಸಿದ್ದಾನೆ:

"ನಿನ್ನೀ ವಿದ್ಯಾಧರಲಕ್ಷ್ಮಿ ಪುಣ್ಯಜನಿತಂ ವಿದ್ಯಾಧರಾಧೀಶ್ವರಾ
ಭವ ವಾರಾಶಿನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರ ದೇವೇಂದ್ರರಾ
ಜ್ಯವಿಳಾಸಂ ಪೆಱತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ
ಎಂದು ಧರ್ಮಪ್ರಭಾವಮುಮಂ ತತ್‌ಫಲ ಸ್ವಭಾವಮುಮಂ ತಿಳಿಪುವಸರದೊಳ್"

ಸ್ವಯಂಬುದ್ಧನ ಉಪದೇಶವನ್ನು ಪ್ರತಿಭಟಿಸಿ ಜೀವ ಪರಲೋಕಗಳಿಲ್ಲ

ವೆಂದು ವಾದಿಸಿದ ಉಳಿದ ಮಂತ್ರಿಗಳ ವಾದಗಳೂ ಅವನ್ನು ಖಂಡಿಸಿ ಸ್ವಯಂಬುದ್ಧನು ಮಾಡಿದ ಧರ್ಮಸಮರ್ಥನೆಯೂ ಎರಡು ಕಡೆಯಲ್ಲೂ ತರ್ಕಸರಣಿಯಲ್ಲಿ ಅಚ್ಚುಕಟ್ಟಾಗಿ ನಿರೂಪಿತವಾಗಿವೆ. ಆದರೆ ಪಂಪನ ಕಾವ್ಯಪ್ರತಿಭೆಯಲ್ಲಿ ಮೂಡಿ ಬಂದಾಗ ಎರಡು ಕಡೆಯ ವಾದಗಳಲ್ಲೂ ಅಪೂರ್ವಕಳೆ ಮಿಂಚುತ್ತದೆ. ಆ ಮಿಂಚಿನಲ್ಲಿ ಹೊಳೆದ ಭಾವ ಮರೆತುಹೋಗದಂತೆ ಮನಸ್ಸಿಗೆ ನಾಟುತ್ತದೆ.

"ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬೞಿಕತ್ತ ಬೇೞ್ ಪೆಱತೊಂದೊಡಲೊಳ್ ಗಡ ತಾನೆ ಸಿಂದೊಡಂ
ಬಡಿಪುದು ಧರ್ಮಕರ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ

ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೇಳದಿರು ಬಾೞ್ವನಮಿಂದ್ರಿಯವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ'

ಎಂಬ ಜೀವಾಭಾವವನ್ನು ಸಮರ್ಥಿಸುವ ಪದ್ಯಗಳೆರಡೂ, ಮತ್ತು ಆ ವಾದವನ್ನು ಖಂಡಿಸಿ ಜೀವಾಸ್ತಿಕ್ಯವನ್ನು ಸ್ಥಾಪಿಸುವ,

"ಪುಸಿಯು ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೊಱಲ್ದ ದು
ರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರಸತ್ಯವಾದಮಂ
ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲಱನಿಲ್ಲ ಪರತ್ರೆಯಿಲ್ಲೆನ
ಲ್ಕಸಕಱಿಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್"

ಎಂಬ ಪದ್ಯವೂ ಪೂರ್ತಿಯಾಗಿ ಪಂಪನ ಸೃಷ್ಟಿ. 'ಪುಸಿ ಕಾಣ. ಡಂಬಮಿದು. ನೀನಿದನೆಂತು ನಂಬಿದೊ! ತಲೆವಱಿದು, ಉಟ್ಟುದಿಕ್ಕಿ, ಸುರಲೋಕಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು.'—ಈ ಮಾತುಗಳು ಎಷ್ಟು ಸಹಜವಾಗಿವೆ! ಎಷ್ಟು ನೇರವಾಗಿ ಗುರಿ ಮುಟ್ಟುತ್ತವೆ! 'ದುರ್ವ್ಯಸನಿಯ ಮಾಡಿದೋದೆ ನಿಮಗಾಗಮಂ. ಅಸಕಱಿಯಂತು ನಾಲಗೆ ಪೊರಳ್ವುದು' ಎಂಬ ಸ್ವಯಂಬುದ್ಧನ ಉತ್ತರವೂ ಅಷ್ಟೇ ಪರಿಣಾಮಕಾರಿಯಾಗಿದೆ.

೨. ನರಕಕ್ಕೆ ಬೀಳುವವರು ಯಾರೆಂಬುದನ್ನು ಮಹಾಪುರಾಣದಲ್ಲಿ ಹೀಗೆ ಹೇಳಿದೆ:

"ಹಿಂಸಾಯಾಂ ನಿರತಾ ಯೇ ಸ್ಯುರ್ಯೇ ಮೃಷಾವಾದ ತತ್ಪರಾಃ
ಚುರಾಶೀಲಾಃ ಪರಸ್ತ್ರೀಷು ಯೇ ರತಾ ಮದ್ಯಪಾಶ್ಚ ಯೇ ‖
ಯೇ ಚ ಮಿಥ್ಯಾದೃಶಃ ಕ್ರೂರಾಃ ರೌದ್ರಧ್ಯಾನ ಪರಾಯಣಾಃ
ಸತ್ತ್ವೇಷು ನಿರನುಕ್ರೋಶಾ ಬಹ್ವಾರಂಭ ಪರಿಗ್ರಹಾಃ ‖
ಧರ್ಮದ್ರುಹಶ್ಚ ಯೇ ನಿತ್ಯಮಧರ್ಮ ಪರಿಪೋಷಕಾಃ
ದೂಷಕಾಃ ಸಾಧುವರ್ಗಸ್ಯ ಮಾತ್ಸರ್ಯೋಪಹತಾಶ್ಚ ಯೇ ‖
ರುಷ್ಯಂತ್ಯಕಾರಣಂ ಯೇ ಚ ನಿರ್ಗ್ರಂಥೇಭ್ಯೋಽತಿಪಾತಕಾಃ
ಮುನಿಭ್ಯೋ ಧರ್ಮಶೀಲೇಭ್ಯೋ ಮಧುಮಾಂಸಾಶನೇ ರತಾಃ ‖
ವಧಕಾನ್ ಪೋಷಯಿತ್ವಾನ್ಯ ಜೀವಾನಾಂ ಯೇಽತಿನಿರ್ಘೃಣಾಃ
ಖಾದಕಾ ಮಧುಮಾಂಸಸ್ಯ ತೇಷಾಂ ಯೇ ಚಾನುಮೋದಕಾಃ ‖
ತೇ ನರಾಃ ಪಾಪಭಾರೇಣ ಪ್ರವಿಶಂತಿ ರಸಾತಲಂ" [೧೦: ೨೨-೨೭

ಈ ಭಾಗವನ್ನು ಪಂಪ,

"ಮಾಂಸ ಮಧುಮದ್ಯ ಸೇವನೆ
ಹಿಂಸಾರುಚಿ ಪರಮ ಜಿನಮತಾರುಚಿ ಕುಲಟಾ
ಸಂಸರ್ಗಮೆಂಬಿವಲ್ಲದೆ
ಸಂಸಾರ ಭ್ರಮಣ ಕಾರಣಂ ಪೆಱವೊಳವೇ

ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ
ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿ ಕ್ರೂರಾತ್ಮನುಂ ಸಾಧು ಸಂ
ಕುಳಮಂ ಕಂಡೊಡೆ ಕಾಯ್ವನುಂ ಪಱಿವನುಂ ಧರ್ಮಕ್ಕೆ ದ್ರೋಹನುಂ
ಖಳನುಂ ಕಳ್ಳಿಣಿಯುಂ ಘುಳುಮ್ಮನಿೞಿಗುಂ ಶ್ವಭ್ರಾಂತಮಂ ತಾಪಿನಂ"

ಎಂಬೆರಡು ಪದ್ಯಗಳಲ್ಲಿ ಸಂಗ್ರಹಿಸಿದ್ದಾನೆ. 'ಘುಳುಮ್ಮನಿೞಿಗುಂ' ಎಂಬ ಅನುಕರಣ ಶಬ್ದ ನರಕದಲ್ಲಿ ಪಾಪಿಗಳು ಮುಳುಗುವುದನ್ನು ಕಣ್ಣಿಗೆ ಕಟ್ಟಿಸುತ್ತದೆ.

೨. ಧರ್ಮಾಧರ್ಮಗಳ ಸ್ವರೂಪ:

ಧರ್ಮಃ ಪ್ರಾಣಿದಯಾ ಸತ್ಯಂ ಕ್ಷಾಂತಿಃ ಶೌಚಂ ವಿತೃಷ್ಣತಾ
ಜ್ಞಾನವೈರಾಗ್ಯಸಂಪತ್ತಿರಧರ್ಮಸ್ತದ್ವಿಪರ್ಯಯಃ ‖

ಮ. ಪು. ೧೦ : ೧೫

ಪುಸಿಯದುದು ಪರಾಂಗನೆಗಾ
ಟಿಸದುದು ಕೊಲ್ಲದುದು ಮೋಹಮಿಲ್ಲದುದಱಿವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮಮದಱ ತಡೆವುದಧರ್ಮಂ

ಆ. ಪು. ೫ : ೭೯

೪. ಜಿನಜನನಿಗೆ ದೇವತಾಸ್ತ್ರೀಯರು ಸೇವೆಸಲ್ಲಿಸುವಲ್ಲಿನ ಚಿತ್ರಗಳು:

ತಾಂಬೂಲದಾಯನೀ ಕಾ ಚಿದ್ಬಭೌ ಪತ್ರೈಃ ಕರಸ್ಥಿತೈಃ
ಶುಕಾಧ್ಯಾಸಿತಶಾಖಾಗ್ರಾ ಲತೇವಾಮರಕಾಮಿನೀ ॥

ಮ. ಪು. ೧೨ : ೧೭೭

ತಳದೊಳ್ ತಂಬುಲದೆಲೆಗಳ್
ಪೊಳೆಪಮರ್ದಿರೆ ದೇವಕನ್ಯೆ ಮತ್ತೊರ್ವಳ್ ಕೋ
ಮಳಲತೆಯ ನಿಮಿರ್ದ ಕುಡಿಯೊಳ್
ಗಿಳಿ ಪಾಯ್ದಂತೆನಿಸಿ ಸತಿಗೆ ತಂಬುಲಮಿತ್ತಳ್

ಆ. ಪು. ೭ : ೧೨

ಕಾ ಚಿದಾಭರಣಾನ್ಯಸ್ಯೈ ಧದತೀ ಮೃದುಪಾಣಿನಾ
ವಿಬಭೌ ಕಲ್ಪವಲ್ಲೀವ ಶಾಖಾಗ್ರೋದ್ಭಿನ್ನ ಭೂಷಣಾ ॥
ವಾಸಃ ಕ್ಸೌಮಂ ಸ್ರಜೋ ದಿವ್ಯಾಃ ಸುಮನೋಮಂಜರೀರಪಿ
ತಸ್ಯೈ ಸಮರ್ಪಯಾಮಾಸುಃ ಕಾಶ್ಚಿತ್ಕಲ್ಪಲತಾ ಇವ ॥

ಮ. ಪು. ೧೨ : ೧೭೮-೭೯

ಅಡಿಯಖೊಡಲ್ಕಲತಗೆಯಂ
ತುಡಲ್ಕೆ ತುಡುಗೆಯನುಡಲ್ಕೆ ದಿವ್ಯಾಂಬರಮಂ
ಮುಡಿಯಲ್ ಪೂಮಾಲೆಯನೋ
ಗಡಿಸದೆ ಕುಡುವಮರಿ ಕಲ್ಪಲತೆಯನೆ ಪೋಲ್ತಳ್

ಆ. ಪು. ೭ : ೧೧

೫. ನೀಲಾಂಜನೆಯ ನೃತ್ಯ:

ತತೋ ನೀಲಾಂಜನಾ ನಾಮ ಲಲಿತಾ ಸುರನರ್ತಕೀ
ರಸ ಭಾವ ಲಯೋಪೇತಂ ನಟಂತೀ ಸಪರಿಕ್ರಮಂ ॥
ಕ್ಷಣಾದದೃಶ್ಯತಾಂ ಪ್ರಾಪ ಕಿಲಾಯುರ್ದೀಪಸಂಕ್ಷಯೇ
ಪ್ರಭಾತರಲಿತಾಂ ಮೂರ್ತಿಂ ದಧಾನಾ ತಟಿದುಜ್ಜ್ವಲಾಂ ॥
ಸೌದಾಮಿನೀಲತೇವಾಸೌ ದೃಷ್ಟನಷ್ಟಾಭವತ್ ಕ್ಷಣಾತ್
ರಸಭಂಗಭಯಾದಿಂದ್ರಃ ಸಂದಧೇತ್ರಾಪರಂ ವಪುಃ
ತದೇವ ಸ್ಥಾನಕಂ ರಮ್ಯಂ ಸಾ ಭೂಮಿಃ ಸ ಪರಿಕ್ರಮಃ
ತಥಾಪಿ ಭಗವಾನ್ ವೇದ ತತ್‌ಸ್ವರೂಪಾಂತರಂ ತದಾ ॥

ಮ. ಪು. ೧೭ : ೭–೧೧

ಈ ಚಿತ್ರ ಪಂಪನಲ್ಲಿ ಅಸದೃಶವಾಗಿದೆ. 'ನೀಲಾಂಜನೆಯೆಂಬ ಸುರನರ್ತಕಿ ನಾಟ್ಯವಾಡುತ್ತ ಆಡುತ್ತ ಆಯುಸ್ಸು ಮುಗಿಯಲು ಮಿಂಚಿನಂತೆ ಅದೃಶ್ಯ ಳಾದಳು' ಎಂಬಿಷ್ಟೆ ಮಾತಿನ ಆಧಾರದ ಮೇಲೆ ಸುಂದರವಾದ ಮೂವತ್ತು

ಪದ್ಯಗಳನ್ನು ಕಟ್ಟಿ ಸುರಸುಂದರಿಯ ನರ್ತನ ಕಣ್ಮುಂದೆ ಹೊಳೆಯುವಂತೆ ಮಾಡಿದ್ದಾನೆ.

೬ ವಜ್ರದಂತ ಚಕ್ರವರ್ತಿ ಶ್ರೀಮತಿಯನ್ನು ಗಂಡನ ಮನೆಗೆ ಕಳಿಸಿ ಕೊಡುವಾಗ ಅಳಿಯನಿಗೂ ಮಗಳಿಗೂ ಮಾಡುವ ಹಿತೋಪದೇಶವೂ ಶ್ರೀಮತೀ ವಜ್ರಜಂಘರು ತಮ್ಮ ರಾಜಧಾನಿಯನ್ನು ಪ್ರವೇಶಿಸಿದಾಗ ಪುರಜನರು ಮಾಡಿದ ಪ್ರಶಂಸೆಯೂ (ಸಂಗ್ರಹದಲ್ಲಿ ೬೭, ೬೮ ಮತ್ತು ೬೯ನೆಯ ಪದ್ಯಗಳು) ಪೂರ್ವ ಪುರಾಣದಲ್ಲಿ ಕಾಣುವುದಿಲ್ಲ. ಈ ಮೂರರಲ್ಲಿ, 'ಬಗೆದುಂ ನಿನ್ನನ್ನವಾಯೋನ್ನತಿಯನ್' ಎಂದು ಮೊದಲಾಗುವ ಮೊದಲನೆಯ ಪದ್ಯದಲ್ಲಿ ಶಾಕುಂತಳ ನಾಟಕದಲ್ಲಿ ಕಣ್ವರು ಶಕುಂತಳೆಯನ್ನು ಗಂಡನ ಮನೆಗೆ ಕಳಿಸಿದಾಗ ದುಷ್ಯಂತನಿಗೆ ಹೇಳಿಕಳಿಸಿದ ಸಂದೇಶದ ಛಾಯೆ ಕಾಣಬರುತ್ತದೆ. ಅಲ್ಲದೆ ಮಗಳನ್ನೂ ಅಳಿಯನನ್ನೂ ಸ್ವಲ್ಪ ದೂರ ಜೊತೆಯಲ್ಲಿ ಹೋಗಿ ಕಳಿಸಿ ಹಿಂದಿರುಗುವಾಗಿನ ಕುಟುಂಬಚಿತ್ರವನ್ನು ಪಂಪ ತನ್ನ ಅನುಭವದಿಂದ ಹೀಗೆ ಚಿತ್ರಿಸಿದ್ದಾನೆ:

ಪೊಡೆವಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ
ಕೊಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇಳ್ವ ಕೈ
ಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ
ಮಿಡಿವ ಬಹು ಪ್ರಕಾರ ಜನಸಂಕಟಮೊಪ್ಪಿದುದಾ ಪ್ರಯಾಣದೊಳ್

ಆ. ಪು. ೮. ೫೨

ಹೀಗೆ ಇಡಿಯ ಪದ್ಯಗಳನ್ನೂ ಪದ್ಯಖಂಡಗಳನ್ನೂ ಪಂಪ ಅನುವಾದ ಮಾಡಿರುವುದಕ್ಕೂ ತನ್ನ ಸ್ವಂತ ಕಲ್ಪನೆಯಿಂದ ಹೊಸ ಪರಿಯ ಕಳೆ ಕಟ್ಟಿರುವುದಕ್ಕೂ ನಿದರ್ಶನಗಳನ್ನು ಎಷ್ಟು ಬೇಕಾದರೂ ಕೊಡಬಹುದು.

ಹನ್ನೊಂದನೆಯ ಆಶ್ವಾಸದಲ್ಲಿ ಭರತಚಕ್ರವರ್ತಿಯ ಅಂತಃಪುರಸ್ತ್ರೀಯರ ವನವಿಹಾರವನ್ನು ವರ್ಣಿಸುವಾಗ ಪಂಪ ಹೂವಿನ ಸಂತೆಯನ್ನೇ ನೆರಸಿಬಿಟ್ಟಿದ್ದಾನೆ (ಈ ಚಿತ್ರವೂ ಪಂಪನ ಸೃಷ್ಟಿ). ಕನ್ನಡ ನಾಡಿನ ಕಂಪಿನ ಸೊಂಪಿನ ಹೂವುಗಳನ್ನೆಲ್ಲ ಅಲ್ಲಿ ಕಾಣಬಹುದು. ಅವುಗಳಲ್ಲೆಲ್ಲ ಅವನಿಗೆ ಮೆಚ್ಚಾದ್ದು ಮಲ್ಲಿಗೆ. ಮಲ್ಲಿಗೆಯನ್ನು ಕುರಿತು ಎಷ್ಟು ಹಾಡಿದರೂ ಅವನಿಗೆ ತೃಪ್ತಿಯಿಲ್ಲ. ಹೂವುಗಳಲ್ಲಿ ಮಲ್ಲಿಗೆ, ಮರಗಳಲ್ಲಿ ಮಾವು, ಹಕ್ಕಿಗಳಲ್ಲಿ ಕೋಗಿಲೆ—ಇವು ಮೂರೂ ರಸಿಕಹೃದಯಕ್ಕೆ ತಣಿವಿತ್ತು ಸುಖದೊರತೆಯನ್ನು ಹರಿಸುವಂಥವು. ಪಂಪನ ಹೃದಯ ಅವಕ್ಕೆ ಮಾರುವೋಗಿಬಿಟ್ಟಿದೆ.

ಪಂಪ ಹೆಚ್ಚು ಮಾತಿನವನಲ್ಲ. ಕಿರಿದು ನುಡಿಗಳಲ್ಲಿ ಹಿರಿದಾದ ಅರ್ಥವನ್ನು ಅಡಗಿಸಿ ಹೇಳುವುದು ಅವನ ಸ್ವಭಾವ. ಅವನ ಮಾತಿನಲ್ಲಿ ತೊಡಕಿಲ್ಲ; ಸಂದಿಗ್ಧತೆಯಿಲ್ಲ. ಸ್ಪಷ್ಟವಾಗಿ ನೇರವಾಗಿ ಮನಮುಟ್ಟುವಂತಿರುತ್ತದೆ. ಅರ್ಥ ಗಾಂಭೀರ್ಯದಿಂದ ಕೂಡಿದ ಅವನ ಮಾತುಗಳು ಇಂಪಾಗಿಯೂ ಹಿತ ವಾಗಿಯೂ ಇವೆ. ವಿಚಾರ ಮಾಡಿದಷ್ಟೂ ಅವುಗಳ ಸ್ವಾರಸ್ಯ ಹೊಮ್ಮುತ್ತಿರು ತ್ತದೆ. ಹೀಗೆ ಪಂಪನ ಕವಿತೆ 'ಹಿತ ಮಿತ ಮೃದುವಚನ'ಗಳಿಂದ ತುಂಬಿ ಸದಾ ಹೊಸದಾಗಿ ಹೊಳೆಯುತ್ತ ಸರ್ವೋತ್ಕೃಷ್ಟವಾಗಿದೆ. ಸಾವಿರ ವರ್ಷ ವಾದರೂ ಅಚ್ಚಳಿಯದೆ ಪೂರ್ಣಕಾಂತಿಯಿಂದ ಬೆಳಗುತ್ತಿದೆ.

---



# ಅನುಬಂಧ ೧

## ಗ್ರಂಥಋಣ

೧ ಪೂರ್ವಪುರಾಣ (ಮಹಾಪುರಾಣದ ಮೊದಲನೆಯ ಭಾಗ)—ಜಿನಸೇನಾಚಾರ್ಯ

೨ ಉತ್ತರಪುರಾಣ (ಮಹಾಪುರಾಣದ ಎರಡನೆಯ ಭಾಗ)—ಗುಣಭದ್ರಾಚಾರ್ಯ

೩ ಆದೀಶ್ವರಚರಿತ್ರೆ (ಶ್ವೇತಾಂಬರ ಸಂಪ್ರದಾಯದ ಪ್ರಕಾರ ಆದಿತೀರ್ಥಂಕರನ ಚರಿತ್ರೆಯನ್ನು ವಿವರಿಸುವ ಪ್ರಾಕೃತ ಗ್ರಂಥ)—ಹೇಮಚಂದ್ರಾಚಾರ್ಯ

೪ ಪಂಚಾಸ್ತಿಕಾಯ—ಕುಂದಕುಂದಾಚಾರ್ಯ

೫ ತತ್ತ್ವಾರ್ಥಸೂತ್ರ—ಉಮಾಸ್ವಾತಿ

೬ Outlines of Jainism—Jaini

೭ ಆದಿಪುರಾಣ—ಪಂಪ

೮ ವಿಕ್ರಮಾರ್ಜುನ ವಿಜಯ (ಪಂಪ ಭಾರತ)—ಪಂಪ

೯ ಅಜಿತಪುರಾಣ—ರನ್ನ

೧೦ ತ್ರಿಷಷ್ಟಿ ಲಕ್ಷಣ ಮಹಾಪುರಾಣ (ಚಾವುಂಡರಾಯ ಪುರಾಣ)—ಚಾವುಂಡರಾಯ

೧೧ ರಾಮಚಂದ್ರಚರಿತ ಪುರಾಣ (ಪಂಪ ರಾಮಾಯಣ)—ನಾಗಚಂದ್ರ (ಅಭಿನವ ಪಂಪ)

೧೨ ಭರತೇಶ ವೈಭವ—ರತ್ನಾಕರವರ್ಣಿ

೧೩ ಭಾಗವತ ಪುರಾಣ—ಶ್ರೀ ಶುಕಯೋಗಿ

೧೪ ಹಸ್ತಿಮಲ್ಲನ ಆದಿಪುರಾಣ ('ಸಂಭಾವನೆ' ಯಲ್ಲಿ)—ಜಿ. ಕೆ. ಕುಂದಣಗಾರ

೧೫ ಮಹಾವೀರನ ಮಾತುಕತೆಗಳು—ಜಿ. ಪಿ. ರಾಜರತ್ನಂ
೧೬ ನಾಡೋಜ ಪಂಪ—ಮುಳಿಯ ತಿಮ್ಮಪ್ಪಯ್ಯ
೧೭ ಪಂಪನ ದೇಶಕಾಲಗಳ ವಿಚಾರ('ಭಾರತಿ'ಯಲ್ಲಿ)—ಎಂ. ಗೋವಿಂದ ಪೈ
೧೮ ಪಂಪನ ಆದಿಪುರಾಣದ ರಚನಕಾಲ ('ಕಂಠೀರವ'ದಲ್ಲಿ)—ಎಂ. ಗೋವಿಂದ ಪೈ
೧೯ ಕರ್ಣಾಟಕಕ್ಕೆ ಜೈನಧರ್ಮದ ಆಗಮನ (ಸಾಹಿತ್ಯ ಪರಿಷತ್ಪತ್ರಿಕೆ: ಸಂಪುಟ ೨೬, ಸಂಚಿಕೆ ೧, ೨)—ಎಂ. ಗೋವಿಂದ ಪೈ
೨೦ ಪರಭಣಿಯ ತಾಮ್ರಶಾಸನ ಮತ್ತು ಪಂಪಭಾರತ (ಪ್ರಬುದ್ಧ ಕರ್ಣಾಟಕ: ಸಂಪುಟ ೧೬, ಸಂಚಿಕೆ ೧)—ಎ. ಆರ್. ಕೃಷ್ಣಶಾಸ್ತ್ರೀ
೨೧ ನಮ್ಮ ರತ್ನತ್ರಯದ ವಿನಯ (ಸಾಹಿತ್ಯ ಪರಿಷತ್ಪತ್ರಿಕೆ: ಸಂಪುಟ ೨೬, ಸಂಚಿಕೆ ೧)—ಜಿ. ಪಿ. ರಾಜರತ್ನಂ
೨೨ ಶ್ರೀ ಗೋಮಟೇಶ್ವರ—ಜಿ. ಪಿ. ರಾಜರತ್ನಂ
೨೩ ಮದನಮದಭಂಗ (ಭರತಬಾಹುಬಲಿಗಳ ಹೋರಾಟದ ವಿಮರ್ಶೆ. ಕನ್ನಡ ನುಡಿಯಲ್ಲಿ ಲೇಖನಮಾಲೆ)—ಜಿ. ಪಿ. ರಾಜರತ್ನಂ
೨೪ History of Indian Literature—ಎಂ. ವಿಂಟರ್‌ನಿಟ್ಸ್
೨೫ ಜೈನಪುರಾಣಗಳಲ್ಲಿ ಭವಾವಳಿ ('ಸಂಭಾವನೆ'ಯಲ್ಲಿ)—ಜಿ. ಪಿ. ರಾಜರತ್ನಂ

## ಅನುಬಂಧ ೨

ಶ್ರೀ ಜೈನಿಯವರ Outlines of Jainism (ಜೈನಧರ್ಮದ ರೂಪರೇಖೆ) ಎಂಬ ಗ್ರಂಥದಲ್ಲಿ ಆಧಾರವಾಗಿ ಉದಾಹರಿಸಿರುವ ಗ್ರಂಥಗಳು—

೧ ಪಂಚಾಸ್ತಿಕಾಯ ಗಾಥಾ—ಕುಂದಕುಂದಾಚಾರ್ಯ
೨ ಅನುಪ್ರೇಕ್ಷಾಶ್ಲೋಕ—ಸ್ವಾಮಿ ಕಾರ್ತಿಕೇಯ
೩ ಬೃಹತ್ ಸ್ವಯಂಭೂ ಸ್ತೋತ್ರ—ಸಮಂತಭದ್ರಾಚಾರ್ಯ
೪ ದ್ರವ್ಯಸಂಗ್ರಹ—ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ

೫ ನಿಯಮಸಾರ—ಕುಂದಕುಂದಾಚಾರ್ಯ

೬ ಸಾಮಾಯಿಕಪಾಠ

೭ ಪುರುಷಾರ್ಥಸಿದ್ಧ್ಯುಪಾಯ—ಅಮೃತಚಂದ್ರ ಸೂರಿ

೮ ತತ್ತ್ವಾರ್ಥಸೂತ್ರ—ಉಮಾಸ್ವಾತಿ

೯ ಪರಮಾತ್ಮ ಪ್ರಕಾಶ—ಯೋಗೀಂದ್ರಾಚಾರ್ಯ

೧೦ ತತ್ತ್ವಾರ್ಥಸಾರ—ಅಮೃತಚಂದ್ರ ಸೂರಿ

೧೧ ಸಮಯಸಾರ ಕಲಶ—ಅಮೃತಚಂದ್ರ ಸೂರಿ

೧೨ ಗೊಮ್ಮಟಸಾರ—ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ

೧೩ ರತ್ನಕರಂಡಕ ಶ್ರಾವಕಾಚಾರ—ಸಮಂತಭದ್ರಾಚಾರ್ಯ

## ಅನುಬಂಧ ೩

### ಆಕರಗಳು

೧ ಮೈಸೂರು ಓರಿಯೆಂಟಲ್ ಲೈಬ್ರೆರಿಯವರು ಪ್ರಕಟಿಸಿದ ಮುದ್ರಿತ ಪ್ರತಿ. ಸಂಪಾದಕ: ಎಸ್. ಜಿ. ನರಸಿಂಹಾಚಾರ್ಯ.

೨-೩ ಶ್ರವಣಬೆಳುಗೊಳದ ಮಠದ ಎರಡು ಓಲೆಯ ಪ್ರತಿಗಳು.

೪-೫ ಮೂಡಬಿದರೆಯ ಮಠದ ಎರಡು ಓಲೆಯ ಪ್ರತಿಗಳು.

ಈ 'ಆದಿಪುರಾಣ ಸಂಗ್ರಹ'ದಲ್ಲಿ ಓರಿಯೆಂಟಲ್ ಲೈಬ್ರೆರಿಯ ಮುದ್ರಿತ ಪ್ರತಿಯನ್ನೇ ಸಾಮಾನ್ಯವಾಗಿ ಅನುಸರಿಸಿದೆ. ಉಚಿತವೆಂದು ತೋರಿದ ಕಡೆ, ಆ ಸಂಪಾದಕರು ಅಡಿ ಟಿಪ್ಪಣಿಯಲ್ಲಿ ಕೊಟ್ಟ ಪಾಠಾಂತರವನ್ನು ಅಂಗೀಕರಿಸಿದೆ. ಅಡಿ ಟಿಪ್ಪಣಿಯ ಪಾಠಾಂತರವೂ ಸಮರ್ಪಕವೆನಿಸದ ಕೆಲವು ಸಂದಿಗ್ಧಸಂದರ್ಭಗಳಲ್ಲಿ ಮಾತ್ರ ಓಲೆಗರಿಗಳನ್ನು ನೋಡಿ ಸರಿಕಾಣಿಸಿದ ಪಾಠವನ್ನು ಆಯ್ದುಕೊಂಡಿದೆ. ಒಂದೆರಡು ಕಡೆ ಹೊರತು ಈ ಸಂಗ್ರಹದಲ್ಲಿ ಎಲ್ಲೂ ಪಾಠಾಂತರಗಳನ್ನು ಗುರುತಿಸಿಲ್ಲ; ಅಂಗೀಕೃತ ಪಾಠವನ್ನು ಮಾತ್ರ ಮುದ್ರಿಸಿದೆ.

ಶ್ರವಣಬೆಳುಗೊಳದ ಮಠದ ಒಂದು ಪ್ರತಿ ಹೆಚ್ಚು ಶುದ್ಧವಾಗಿದೆ. ಅದೇ

ಪ್ರಾಚೀನ ಪುಸ್ತಕವೆಂದು ಕಾಣುತ್ತದೆ. ಮೂಡಬಿದರೆಯ ಪ್ರತಿಗಳೂ ಕೆಲವು ಕಡೆ ಬಹು ಸಮರ್ಪಕವಾದ ಪಾಠಗಳನ್ನು ಒದಗಿಸಿ ಕೊಟ್ಟವು.

ಶ್ರವಣಬೆಳುಗೊಳದ ಮಠದ ಓಲೆಗಳನ್ನು ಶ್ರೀ ಬಿ. ಎಂ. ಶ್ರೀಕಂಠಯ್ಯನವರು ತರಿಸಿಕೊಟ್ಟಿದ್ದರು. ಮೂಡಬಿದರೆ ಮಠದ ಪ್ರತಿಗಳಲ್ಲಿ ಒಂದು ತುಂಬ ಜೀರ್ಣವಾಗಿ ಟಪ್ಪಾಲಿನಲ್ಲಿ ಸಾಗಿಸಲು ಸಾಧ್ಯವಿಲ್ಲದಂತಿದೆಯೆಂದು ಅದರ ಪಾಠವನ್ನು ಶ್ರೀ ಲೋಕನಾಥ ಶಾಸ್ತ್ರಿಗಳು ಪ್ರತಿಮಾಡಿ ಕಳಿಸಿಕೊಟ್ಟರು

## ಅನುಬಂಧ ೪

### 'ಮಗುಳ್' ಪದಪ್ರಯೋಗ

ಕನ್ನಡದಲ್ಲಿ 'ಮಗುೞ್' ಎಂಬ ಪದವನ್ನು 'ಹಿಂತಿರುಗು' ಎಂಬ ಅರ್ಥದಲ್ಲಿ 'ೞ' ಕಾರಾಂತವಾಗಿ ಪ್ರಯೋಗಿಸುವುದು ರೂಢಿ. ಆದರೆ ಕೆಲವು ಕಡೆ ಈ ಪದಕ್ಕೆ 'ಸಂತೋಷಿಸು' ಎಂಬ ಅರ್ಥವಿರುವಂತೆಯೂ ಪ್ರಯೋಗಗಳಿಂದ ಕಂಡುಬರುತ್ತದೆ. ಇಂದಿಗೂ 'ೞ' ಕಾರ ಬಳಕೆಯಲ್ಲಿರುವ ಕನ್ನಡದ ಸೋದರ ಭಾಷೆ ತಮಿಳಿನಲ್ಲಿ ಸಂತೋಷಾರ್ಥದ 'ಮಗಿೞ್' ಪದ 'ೞ' ಕಾರಾಂತವಾಗಿಯೇ ಪ್ರಯೋಗವಾಗುತ್ತಿದೆ. ಈ ಅರ್ಥವ್ಯತ್ಯಾಸವನ್ನು ಸ್ಪಷ್ಟಪಡಿಸುವುದಕ್ಕಾಗಿ 'ಹಿಂದಿರುಗು' ಎಂಬ ಅರ್ಥದಲ್ಲಿ 'ಮಗುಳ್' ಎಂದು 'ಳ' ಕಾರಾಂತವಾಗಿಯೂ 'ಸಂತೋಷಿಸು' ಎಂಬರ್ಥದಲ್ಲಿ 'ಮಗುೞ್' ಎಂದು 'ೞ' ಕಾರಾಂತವಾಗಿಯೂ ಬಳಸುವುದು ಸೂಕ್ತವೆಂದು ಶ್ರೀ ಬಿ. ಎಂ. ಶ್ರೀಯವರು ಸಲಹೆಕೊಟ್ಟರು. ಈ ಸಂಗ್ರಹದಲ್ಲಿ ಅವರ ಸಲಹೆಯನ್ನನುಸರಿಸಿ ಪ್ರಯೋಗವನ್ನು ಪರಿಷ್ಕರಿಸಿದೆ.



# ಅನುಬಂಧ ೫

## ಆದಿಪುರಾಣ ಸಂಗ್ರಹದಲ್ಲಿ ಬಳಸಿರುವ ಛಂದೋಜಾತಿಗಳು

| ಛಂದಸ್ಸಿನ ಹೆಸರು (ಅವು ಗ್ರಂಥದಲ್ಲಿ ಬರುವ ಅನುಕ್ರಮದಲ್ಲಿ) | ಯಾವ ಪದ್ಯ | ಒಟ್ಟು ಪದ್ಯಗಳು |
|---|---|---|
| ೧ ಶಾರ್ದೂಲ ವಿಕ್ರೀಡಿತ— | ೧, ೪, ೧೬೯, ೫೦೮. .... .... | ೪ |
| ೨ ಮಹಾ ಸ್ರಗ್ಧರೆ— | ೨, ೩೧, ೪೭, ೪೮, ೫೫, ೫೯, ೬೨, ೬೩, ೬೫, ೬೭, ೬೯, ೭೦, ೭೧, ೯೦, ೯೪, ೧೦೧, ೧೦೯, ೧೧೦, ೧೧೨, ೧೨೧, ೧೪೨, ೧೫೨, ೧೫೮, ೨೧೨, ೨೩೮, ೨೪೭, ೨೫೯, ೨೬೩, ೨೯೨, ೩೦೦, ೩೨೩, ೩೩೩, ೩೩೭, ೩೬೦, ೪೦೮, ೪೧೨, ೪೧೩, ೪೧೪, ೪೨೯, ೪೫೩, ೪೬೯, ೪೯೦, ೪೯೬, ೫೧೦, ೫೧೫) | ೪೫ |
| ೩ ಸ್ರಗ್ಧರೆ— | ೩, ೨೪೯, ೨೮೫. .... .... | ೩ |
| ೪ ಮತ್ತೇಭ ವಿಕ್ರೀಡಿತ— | ೫, ೯, ೧೦, ೧೨, ೧೬, ೧೭, ೧೮, ೧೯, ೨೮, ೨೯, ೩೦, ೩೬, ೪೨, ೪೩, ೫೦, ೫೪, ೫೮, ೭೨, ೭೪, ೮೯, ೯೨, ೯೫, ೯೮, ೧೦೨, ೧೦೪, ೧೧೬, ೧೧೮, ೧೧೯, ೧೨೦, ೧೨೪, ೧೩೦, ೧೩೧, ೧೩೬, ೧೩೮, ೧೩೯, ೧೪೦, ೧೪೧, ೧೪೩, ೨೧೪, ೨೧೫, ೨೧೬, ೨೧೮, ೨೩೧, ೨೪೧, ೨೪೨, ೨೫೦, ೨೫೪, ೨೬೧, ೨೭೪, ೨೮೦, ೨೯೯, ೩೨೨, ೩೨೮, ೩೩೮, ೩೩೯, ೩೪೦, ೩೪೧, ೩೪೨, ೩೫೧, ೩೬೧, ೩೭೯, ೩೮೦, ೪೧೫, ೪೪೨, ೪೪೩, ೪೫೬, ೪೫೭, ೪೬೬, ೪೯೧, ೪೯೮, ೫೦೧, ೫೦೫, ೫೧೪ | ೭೩ |
| ೫ ಕಂದ— | ಗುರುತಿಸದೆ ಬಿಟ್ಟಿರುವ ಎಲ್ಲವೂ (ಕಂದ ಸರ್ವಸುಲಭವಾಗಿ ಗೊತ್ತು ಮಾಡಬಹುದಾದ್ದರಿಂದ ಪ್ರತ್ಯೇಕವಾಗಿ ಗುರುತಿಸಿಲ್ಲ.) | ೩೧೪ |

| | | |
|---|---|---|
| ೬ ಚಂಪಕಮಾಲೆ— | ೭, ೧೧, ೧೫, ೨೦, ೨೧, ೨೨, ೨೩, ೨೫, ೩೫, ೩೭, ೩೮, ೩೯, ೪೦, ೪೧, ೪೫, ೫೧, ೫೨, ೫೩, ೬೧, ೬೪, ೬೬, ೬೮, ೭೫, ೭೬, ೭೮, ೯೩, ೧೦೦, ೧೩೭, ೧೪೪, ೧೪೫, ೧೪೭, ೧೫೯, ೧೬೫, ೨೧೩, ೨೧೯, ೨೨೦, ೨೨೧, ೨೨೬, ೨೪೦, ೨೪೮, ೨೫೬, ೨೬೦, ೨೮೪, ೨೮೮, ೨೯೩, ೩೦೧, ೩೨೫, ೩೨೬, ೩೨೭, ೩೪೩, ೪೪೦, ೪೪೭, ೪೬೨. | ೫೩ |
| ೭ ಉತ್ಪಲಮಾಲೆ— | ೨೪, ೨೬, ೪೪, ೪೬, ೪೯, ೧೫೭, ೧೬೪, ೨೫೮, ೫೧೬. | ೯ |
| ೮ ಪಿರಿಯಕ್ಕರ— | ೨೭, ೫೦೪. .... .... | ೨ |
| ೯ ಪೃಥ್ವೀ— | ೫೬, ೫೭, ೩೫೨—೩೫೯. .... .... | ೧೦ |
| ೧೦ ಲಲಿತರಗಳೆ— | ೧೦೬. .... .... | ೧ |
| ೧೧ ಮಾಲಿನೀ— | ೧೬೭, ೨೮೭. .... .... | ೨ |
| | ಒಟ್ಟು .... | ೫೧೬ |

## ಲಕ್ಷಣ

೧ ಕಣ್ಗೊಪ್ಪಲ್ ಮಸಜಂ ಸತಂತಗಮುಮಾ ಶಾರ್ದೂಲವಿಕ್ರೀಡಿತಂ.

೨ ಸತತಂ ನಂ ಸಂರರಂಗಂ ನೆರೆದೆಸೆಯೆ ಮಹಾಸ್ರಗ್ಧರಾವೃತ್ತಮಕ್ಕುಂ.

೩ ತೋರಲ್ ಮಂ ರಂ ಭನಂ ಮೂಯಗಣಮುಮದೆ ತಾಂ ಸ್ರಗ್ಧರಾವೃತ್ತಮಕ್ಕುಂ.

೪ ಸಭರಂ ನಂ ಮಯಲಂಗಮುಂ ಬಗೆಗೊಳಲ್ ಮತ್ತೇಭವಿಕ್ರೀಡಿತಂ.

೬ ನಜಭಜ ಜಂಜರಂ ಬಗೆಗೊಳುತ್ತಿರೆ ಚಂಪಕಮಾಲೆಯೆಂದಪರ್.

೭ ಉತ್ಪಲ ಮಾಲೆಯಪ್ಪುದು ಭರಂ ನಭಭಂ ರಲಗಂ ನೆಗಟ್ಟಿರಲ್.

೯ ಜಸಂ ಜಸಯಲಂಗಮೊಂದಿದೊಡೆ ಪೃಥ್ವೀಯೆಂಬರ್ ಬುಧರ್.

೧೧ ನನಮಯಯುಗಣಂಗಳ್ ಮಾಲಿನೀವೃತ್ತಮಕ್ಕುಂ.

೫ ಕಂದ—"ಚತುರ್ಮಾತ್ರಾಗಣವು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಇದರ ಪೂರ್ವೋತ್ತರಾರ್ಧಗಳ ವಿಷಮ (೧-೩-೫-೭ನೆಯ) ಸ್ಥಾನ

ಗಳಲ್ಲಿ ಮಧ್ಯಗುರುವುಳ್ಳ (⏑ – ⏑) ಗಣವಾಗಲಿ ನಾಲ್ಕು ಲಘು ವುಳ್ಳ (⏑ ⏑ ⏑ ⏑) ಗಣವಾಗಲಿ ಇರಬೇಕು. ಎಂಟನೆಯ ಸ್ಥಾನಗಳಲ್ಲಿ ಅಂತ್ಯ ಗುರುವುಳ್ಳ (⏑ ⏑ –, – –) ಗಣಗಳೇ ಬರಬೇಕು."

೯ ಪಿರಿಯಕ್ಕರ—

ಮೊದಲೊಳಜಗಣಂ ಕುಂದದೆ ಬರ್ಕತ್ತನೆಯ್ದು ಗಣಂಗಳೆ ವಿಷ್ಣುವಕ್ಕುಂ
ತುದಿಯೊಳೆಂಬಾ ತಾಣದೊಳೆಲ್ಲಿಯುಂ ಕಂದರ್ಪರಿಪುಗಣಂ ನೆಲಸಿ ನಿಲ್ಕೆ
ಪದದೊಳೆರಡೆಂಬ ಸಂಖ್ಯೆಯೊಳಾಱಱೊಳಜಗಣಂ ಸಮುಪೇತಮಪ್ಪೊಡಕ್ಕುಂ
ಸದಮಲೇಂದುನಿಭಾನನೇ ಕರ್ತೃವಿನಿಷ್ಟದಿನರಿವುದು ಪಿರಿಯಕ್ಕರಂ

೧೦ ಲಲಿತರಗಳೆ—"ಪಾದವೊಂದಕ್ಕೆ ಐದು ಮಾತ್ರೆಯ ಗಣವು ನಾಲ್ಕಿರಲು ಲಲಿತ ರಗಳೆಯಾಗುವುದು."

---

# ಆದಿಪುರಾಣ ಸಂಗ್ರಹ

## ಮೊದಲನೆಯ ಭಾಗ

### ಪೂರ್ವ ಭವಾವಳಿ

### ೧ ಪೀಠಿಕೆ

ಶ್ರೀ ದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿ ಸಂ
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ
ಚ್ಛೇದೋಪಾಯನಿಯುಕ್ತಸೂಕ್ತಿವೃಷಮಾರ್ಗಾಗ್ರೇಸರಂ ಪಾಪಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ೧

ಪೆಣೆದೆಂಟುಂ ಕಿಲ್ಬಿಷಂಗಳ್ ಕಿಡೆ ಕಿಡದ ಗುಣಂ ಪೊರ್ದೆ ಬಂದೆಂಟುಮಾದಂ
ತಣಿವಂ ಕೈಕೊಂಡಮೂರ್ತರ್ ಚರಮತನುಸಮಾಕಾರರುದ್ಧೂತಲೇಪರ್
ಪ್ರಣುತರ್ ನಿತ್ಯರ್ ಜಗನ್ಮಂಗಳನಿಳಯರನಂತರ್ ತ್ರಿಲೋಕೈಕ ಚೂಡಾ
ಮಣಿಗಳ್ ಸಿದ್ಧರ್ ಸ್ವಕೀಯ ಪ್ರಭುತೆಯನೆಮಗಂ ಮಾಳ್ಕೆತಿ ಪ್ರೀತಿಯಿಂದಂ ೨

ಮೂವತ್ತಾಱುಂ ಗುಣಂಗಳ್ ತಮಗಮರ್ದಿರೆ ಸಂದೈದುಮಾಚಾರದೊಳ್ ಸ
ದ್ಭಾವಂ ಕೈಗಣ್ಮೆ ಶಿಷ್ಯಾಚರಣವಿಧಿಗಳಂ ತಿರ್ದಿ ಕಾರುಣ್ಯದಿಂದಂ
ಸಾವದ್ಯಂ ಸಾರದಂತಾಗಿರೆ ನಿಯಮಿಸುವಾಚಾರ್ಯರಿನ್ನೆಮ್ಮನೇನೋ
ದಾವಂ ತಳ್ತಬ್ಬದಂತೋಸರಿಸಿ ಕಳೆಗೆ ಸಂಸಾರಕಾಂತಾರದಿಂದಂ ೩

ಹೇಯಂಗಳ್ ಖಳಕರ್ಮಬಂಧನಕರಕ್ರೋಧಾದಿಗಳ್ ಮತ್ತುಪಾ
ದೇಯಂಗಳ್ ದುರಿತೇಂಧನಾನಳಲಸದ್ರತ್ನತ್ರಯಂಗಳ್ ಸುಖೋ
ಪಾಯಂಗಳ್ ಗಡಿವೆಂದು ಭವ್ಯಜನಮುಂ ಕಣ್ಣೂಱೆ ಕಲ್ಪಿಪ್ಪುಪಾ
ಧ್ಯಾಯರ್ ಜ್ಯೋತಿಸುಗೆಮ್ಮ ಚಿತ್ತಗೃಹದೊಳ್ ರತ್ನತ್ರಯಜ್ಯೋತಿಯಂ ೪

ಬಗೆಯೊಳ್ ಪೊಣ್ಮೆ ದಯಾರಸಂ ಚರಿತದೊಳ್ ಕೈಗಣ್ಮೆ ಚಾರಿತ್ರಮಾ
ವಗಮಾವಶ್ಯಕದೊಳ್ ತಗುಳ್ದು ಪಲವುಂ ಶೀಲಂಗಳಂ ತಾಳ್ದಿ ದಂ
ದುಗಮೊಂದುಂ ತಮಗಾಗದಂತೆಸಗುವರ್ ಸರ್ವೋತ್ತಮರ್ ಸರ್ವಸಾ
ಧುಗಳೋರಂತೆ ಕಬಲ್ಚುಗೆಮ್ಮ ಮನದಿಂ ದುರ್ಮೋಹ ಸಂದೋಹಮಂ ೫

ಕಾರ್ಯಮೆಮಗಿದುವೆ ಶಿವಪದ
ಪರ್ಯಂತಂಬರಮಮೋಘಮುದ್ಧರಿಸುಗೆ ತಾ
ತ್ಪರ್ಯದಿನರ್ಹತ್ಸಿದ್ಧಾ
ಚಾರ್ಯೋಪಾಧ್ಯಾಯ ಸರ್ವಸಾಧುಗಳೆಮ್ಮಂ ೬

ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ
ಧರಿಯಿಸಿ ಸಿಂದುದಲ್ತದುವೆ ಭಾವಿಸಿಯೋದುವ ಕೇಳ್ವ ಪೂಜಿಪಾ
ದರಿಸುವ ಭವ್ಯಕೋಟಿಗೆ ನಿರಂತರಸೌಖ್ಯಮನೀವುದಾನದ
ರ್ಕೆರೆದಪೆನಾ ಸರಸ್ವತಿಯೆ ಮಾಟ್ಕೆಮಗಿಲ್ಲಿಯೆ ವಾಗ್ವಿಳಾಸಮಂ ೭

ಶ್ರೀಮತ್ಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧಕವಿಪರಮೇಷ್ಠಿ
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಂ ೮

ಗುರು ದೇವೇಂದ್ರ ಮುನೀಂದ್ರನಿಂದ್ರನಮಿತಂ ದೇವಂ ಕಥಾನಾಯಕಂ
ಪುರುದೇವಂ ಕಥೆಯುಂ ತದಾದಿಪುರುಷ ಪ್ರಸ್ತುತ್ಯ ಜನ್ಮಾಳಿ ಬಂ
ಧುರಮೆಂದಂದೆ ಮದೀಯ ವಾಗ್ವಿಭವವಿನ್ಯಾಸಂ ಬಲಂಬೆತ್ತುದಿ
ನ್ನಿರು ಬಲ್ಲಿತ್ತಱ ಕೋಡು ಕೂರಿತಧನಂತಿಂತುಂತೆನಲ್ ಬರ್ಕುಮೇ ೯

ಪುರುದೇವಾದಿ ಜಿನೇಂದ್ರಮಾಲೆ ಗಣಭೃತ್ಸಂತಾನಮೆಂದೀ ಪರಂ
ಪರೆಯಿಂ ವಿಶ್ರುತ ವೀರಸೇನ ಜಿನಸೇನಾಚಾರ್ಯಪರ್ಯಂತಮಾ
ಗಿರೆ ಬಂದೀ ಕಥೆ ಗುಣ್ಪುವೆತ್ತುದವರುಂ ಜ್ಞಾನರ್ಧಿಸಂಪನ್ನರೆಂ
ದಿರದಾಂ ಧೃಷ್ಟನೆನೀ ಕಥಾಬ್ಧಿಯುಮನೇನೀಸಲ್ ಮನಂದಂದೆನೋ ೧೦

ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಮೆಂ
ಬಿವೆ ವಲಮಿಂದ್ರಪೂಜೆ ಭುವನಸ್ತುತಮಪ್ಪ ನೆಗಟ್ತೆ ಮುಕ್ತಿ ಸಂ
ಭವಿಸುವ ಲಾಭಮೆಂಬಿವು ಜಿನೇಂದ್ರಗುಣಸ್ತುತಿಯಿಂದೆ ತಾಮೆ ಸಾ
ರವೆ ಪೆಱರೀವುದೇಂ ಪೆಱರ ಮಾಡುವುದೇಂ ಪೆಱರಿಂದಮಪ್ಪುದೇಂ ೧೧

ಪೆಸರ್ಗೊಂಡಿಂದ್ರನರೇಂದ್ರ ವಂದ್ಯನನೊಱಲ್ದಿ ತ್ತಾನುಮೋರೊರ್ಮೆ ಚಿಂ
ತಿಸಿದೊಂಗಂ ಪವಣಿಲ್ಲ ಪುಣ್ಯಮೆನೆ ಪೂಣ್ದೊಳ್ಪಿಂದಮೋರಂತೆ ಭಾ
ವಿಸಿ ತಾಂ ತನ್ಮಯನಾಗಿ ತಚ್ಚರಿತಮಂ ಕಾವ್ಯಂಗಳೊಳ್ ಕೂಡೆ ಬ
ಣ್ಣಿಸಿ ಪೇೞ್ದಾತನ ಕರ್ಮನಿರ್ಜರೆಯನಂತಿಂತುಂತೆನಲ್ ಬರ್ಕುಮೇ ೧೨

ಇದುವೆ ಸುಕವಿ ಪ್ರಮೋದ
ಪ್ರದಮಿದುವೆ ಸಮಸ್ತಭವ್ಯಲೋಕ ಪ್ರಮುದ
ಪ್ರದಮೆನೆ ನೆಗೞ್ದಾದಿ ಪುರಾ
ಣದೊಳಱಿವುದು ಕಾವ್ಯಧರ್ಮಮಂ ಧರ್ಮಮುಮಂ ೧೩

ಪ್ರಾಣಿಹಿತಮಂ ವಿನೇಯ
ಪ್ರೀಣನಕರಮಂ ಜಗತ್ರಯಪ್ರಕಟಿತ ಕ
ಲ್ಯಾಣಮನೀ ನೆಗೞ್ದಾದಿ ಪು
ರಾಣಮನಪರಿಮಿತ ಭಕ್ತಿಯಿಂ ವಿರಚಿಸುವೆಂ ೧೪

## ೨ ಮಹಾಬಲಂ

ಲೋಕತ್ರಯ ಮಧ್ಯದೊಳ್ ಮಧ್ಯಮಲೋಕವೆಂಬ ತಿರ್ಯಗ್ಲೋಕದ ನಟ್ಟ ನಡುವೆ ಲವಣಜಲಧಿ ಪರಿವೃತಮಾಗಿ ಜಂಬೂದ್ವೀಪಂ ನೆಗೞ್ದುದು. ಆ ಜಂಬೂದ್ವೀಪದ ನಟ್ಟನಡುವೆ ನಿಂದ ಮಂದರದ ಪೂರ್ವಾಪರ ದಿಗ್ವಿಭಾಗಂಗಳೊಳ್ ವಿದೇಹಂಗಳಿರ್ದುವು. ಅಲ್ಲಿ ಪಶ್ಚಿಮ ವಿದೇಹಕ್ಕಳಂಕಾರಮಪ್ಪ ಸೀತೋದಾನದಿಯ ಬಡಗಣ ಗಂಧಿಳವಿಷಯದ ನಡುವೆ ವಿಜಯಾರ್ಧ ಪರ್ವತಮೊಪ್ಪುಗುಂ.

ನನೆಯನೆ ಪೇಱ್ ಕೆಂದಳಿರೊಳೆಯ್ದೆ ಬಲಿಲ್ದೆಳವಾವು ಬಂದ ಮಾ
ವನೆ ಮಱಿಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್
ಜಿನುಗುವ ತುಂಬಿ ತುಂಬಿಯೊಳರಲ್ದಲರೆಂಬಿವಱಿಂ ಬಸಂತ ರಾ
ಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ ನಂದನಾಳಿಗಳ್ ೧೫

ಬೆಸನಂ ಪಾರ್ವುವು ಮಂತ್ರದೇವತೆಗಳಾದೇಬಾಲ್ತಿಗಂ ಬೇಗಮಾ
ಗಸದೋಳ್ ವಿದ್ಯೆಗಳೆಯ್ದೆ ಬರ್ಪವು ಜಗಕ್ಕಾಶ್ಚರ್ಯಮೈಶ್ವರ್ಯಮಾ
ವಸಥಂ ರೂಪ್ಯಮಹೀಧರೇಂದ್ರಮೆನೆ ಪೂಣ್ದಾವಂಗಮಂತೆಯ್ದೆ ಬ
ಣ್ಣಿಸಲೇಂ ಬರ್ಕುಮೆ ಬಾರದಂಬರಚರಶ್ರೀಯಂ ಪುರಶ್ರೀಯುಮಂ ೧೬

ಜಿನಪೂಜೋತ್ಸವಮಂಗಳಾನಕಮೃದುಪ್ರಧ್ವಾನದೊಳ್ ಗಾಯಕೀ
ಜನಗೀತಾನ್ವಿತವಲ್ಲಕೀಕ್ವಣಿತದೊಳ್ ವಿದ್ಯಾಧರೀರಮ್ಯನ
ರ್ತನರಾಗೋತ್ಥಿತಪಾರಿಹಾರ್ಯರಶನಾಮಂಜೀರಿಕೋದ್ದಾಮನಿ
ಸ್ವನದೊಳ್ ಪೊಂಪುಳಿವೋಗುತಿರ್ಪುವೆರಡುಂ ವಿದ್ಯಾಧರಶ್ರೇಣಿಗಳ್ ೧೭

ಅವಱೊಳುತ್ತರಶ್ರೇಣಿಯೊಳಲಕಾಪುರಮೊಪ್ಪಿ ತೋಱುಗುಂ. ಅದನಾಳ್ವ ನತಿಬಳನೆಂಬಂ. ಆತನ ಮಾಹಾದೇವಿ ಮನೋಹರಿಯೆಂಬಳ್. ಆ ಮಹಾದೇವಿಗಂ ಆ ವಿಯಚ್ಚರಾಗ್ರಣಿಗಂ ಮಗಂ ಮಹಾಬಳಂ. ಮಹಾಬಳ ಕುಮಾರಂ ಯುವರಾಜಪದವಿಗೆ ಯೋಗ್ಯನಾಗೆ ಖೇಚರೇಂದ್ರಂ ಕಂಠಿಕೆಯಂ ಕಟ್ಟಿದಂ. ಅತಿಬಳಂ ರಾಜ್ಯಂಗೆಯ್ಯುತ್ತಿರ್ಪಿನಂ,

ತೊಡರ್ದೀ ಪುತ್ರಕಳತ್ರಮೋಹದೊಳಿದೇಕಱ್ದಿರ್ದಪಯ್ ನಿನ್ನ ಮೈ
ಳ್ಪಡಿದೇ ಕಾರಣಮಂತಕಂ ಕಡುಪಿನಿಂ ಕಂಠಗ್ರಹಂಗೆಯ್ಯದಿನ್
ತಡೆಯಂ ಚೇತರಿಸೆಂದು ಬಂದು ಕಿವಿಯೊಳ್ ಪೇಳ್ವಂತೆವೊಲ್ ಕೆನ್ನೆಯಿಂ
ದೊಡೆದೋರೊಂದೊಗೆತಂದುವಂದು ನರೆಗಳ್ ವಿದ್ಯಾಧರಾಧೀಶನಾ ೧೮

ಅಂತು ಬಂದ ಪಳಿತಂಗಳಂ ಕಂಡು ಅದುವೆ ಸಂಸಾರನಿರ್ವೇಗಕಾರಣಮಾಗೆ ಮಹಾಬಳಂಗಂಬರಚರಶ್ರೀಯನಿತ್ತು ಗುಣಧರಕೇವಳಿಗಳ ಪಾದಮೂಲದೊಳ್ ತಪೋವೃತ್ತಿಯನಾಂತಂ. ಇತ್ತ ಮಹಾಬಳಖಚರಪತಿಯುಂ ಗಗನಚರರಾಜ್ಯಭಾರಮುಂ ಸ್ವಯಂಬುದ್ಧ ಮಹಾಮತಿ ಸಂಭಿನ್ನಮತಿ ಶತಮತಿ

ಗಳೆಂಬ ನಾಲ್ವರುಮಮಾತ್ಯರ ಮೆಯ್ಯೊಳ್ ನಿಱಿಸಿ ನಿರಾಕುಳ ಸ್ವಾಂತನಾಗಿ ರಸವದ್ಗೇಯಂಗಳೊಳ್ ಮೂಡುತುಂ ಮುೞುಗುತ್ತುಂ ಖಚರೀಜನಾನನ ನವಾಂಭೋಜಂಗಳೊಳ್ ಕಂಪನೀಱುತ್ಕಾಳೆತುಂ ನಂದನ ರಾಜಿಯೊಳ್ ನಲಿಯುತುಂ ಪೊೞ್ತುಗಳೆವಂ. ತನ್ನ ವರ್ಷವರ್ಧನ ದಿನದೊಳ್ ಆಸ್ಥಾನ ಮಂಟಪದೊಳ್ ಒಡ್ಡೋಲಗಂಗೊಟ್ಟರೆ,

### ಸ್ವಯಂಬುದ್ಧೋಪದೇಶಂ

ಸ್ವಯಂಬುದ್ಧಂ ಸದ್ಧರ್ಮೋಪದೇಶ ಲಬ್ಧಾವಸರನಾಗಿ, "ವಿದ್ಯಾಧರಾಧೀಶ್ವರಾ, ನಿನ್ನೀ ವಿದ್ಯಾಧರಲಕ್ಷ್ಮಿ ಪುಣ್ಯಜನಿತಂ.

ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬರಮಾನುಷಂಗಿಕ ಫಲಂ ಭೂಪೇಂದ್ರ ದೇವೇಂದ್ರರಾ
ಜ್ಯವಿಳಾಸಂ ಪೆಱತಲ್ತು ನಂಬು ಖಚರಕ್ಷ್ಮಾಪಾಲ ಚೂಡಾಮಣೀ" ೧೯

ಎಂದು ಧರ್ಮಪ್ರಭಾವಮುಮಂ ತತ್ಫಲಸ್ವಭಾವಮುಮಂ ತಿಳಿಪುವವಸರದೊಳುೞಿದ ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತ ವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಚ್ಚುವಿಡಿದು,

"ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬಱಿಕತ್ತ ಬೇಱೆ ಪೆಱತೊಂದೊಡಲೊಳ್ ಗಡ ತಾನೆ ನಿಂದೊಡಂ
ಬಡುವುದು ಧರ್ಮಕರ್ಮಫಲಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ ೨೦

ತಲೆವೆಱೆದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೇಳದಿರು ಬಾೞ್ಪಿನಮಿಂದ್ರಿಯ ವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗೆರ್ಗಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ ೨೧

ಜೀವನೆಂಬುದೆಲ್ಲಿತ್ತು? ಪರಲೋಕಮೆಂಬುದಾವೆಡೆಯದು? ಅದರ್ಕೆ ಕಾರಣಮಪ್ಪ ಪಾಪಪುಣ್ಯಂಗಳೆತ್ತಣಿಂ ಬಂದುವು? ಇವೆಲ್ಲಂ ಗಂಧರ್ವನಗರ ವಿಳಾಸವಿಳಸಿತಂಗಳ್. ಅದನಱಿಯದಬೋಧ ಬೋಧಿತ ತಪೋದಾನ ವಿಧಾನ ದಿಂ ಮುಧಾ ಕ್ಲೇಶಾಯಾಸನಿರತರಾಗಿ ನಮೆವರ್" ಎಂದು ಜೀವಾಭಾವ ಮನೆ ಸಮರ್ಥಿಸೆ, ಸ್ವಯಂಬುದ್ಧನವಧಾರಿಸಿ ಅನಾದ್ಯನಿಧನ ಸ್ವಭಾವನುಂ ಸುಕೃತದುಷ್ಕೃತ ಕರ್ಮೋಪಾರ್ಜನನುಂ ತತ್ಫಲಭಾಜನನುಂ ಸೂಕ್ಷ್ಮರೂಪನು ಮನಂತಜ್ಞಾನಾದಿ ಗುಣ ಸಂಪೂರ್ಣನುಮಪ್ಪ ಜೀವನುಂಟೆಂದು ಮೂವರುಂ ಪ್ರತಿವಾದಿಗಳನಪ್ರತಿಹತ ಪ್ರತಿಭೆಯಿನಪಗತ ಪ್ರತಿಭರ್ಮಾಡಿ ಸಭಾಪತಿ ಯಾಗಿರ್ದ ಮಹಾಬಳನುಮಂ ಪ್ರಾಶ್ನಿಕರಾಗಿರ್ದ ವಿದ್ವಜ್ಜನಮುಮಂ ಸಭಾ ಜನಮುಮಂ ತಿಳಿಪಿ,

"ಪುಸಿಯ ಪರಾಂಗನಾರತದ ಮದ್ಯದ ಮಾಂಸದ ಮೆಯ್ಗೊಱಲ್ದು ದು
ರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರೆಸತ್ಯವಾದಮಂ।
ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲಱನಿಲ್ಲ ಪರತ್ರೆಯಿಲ್ಲೆನ
ಲ್ಕಸಕಱಿಯಂತು ನಾಲಗೆ ಪೊರಳ್ವುದು ರಾಜಸಭಾಂತರಾಳದೊಳ್" ೨೨

ಎಂದು ಮತ್ತವರನೆ ತಿಳಿಪುವ ಬಗೆಯಿಂ ದೃಷ್ಟಶ್ರುತಾನುಭೂತ ಕಥಾನೀಕಂ ಗಳಿಂ ಯುಕ್ತಿಯಿಂ ಸ್ವಪಕ್ಷಸ್ಥಾಪನಂಗೆಯ್ದು ಸಭಾಸದರಿಂ ಲಬ್ಧಪ್ರಶಂಸನಾಗಿ ಜಯಪತ್ರಮಂ ಪಡೆದಂ. ಮಹಾಬಳಖಚರೇಂದ್ರಂ ಸ್ವಯಂಬುದ್ಧನೆ ತನಗೆ ಪರಮ ವಿಶ್ವಾಸಭೂಮಿಯಾಗೆ ತತ್ಪರ್ಯಾಳೋಚಿತ ಕಾರ್ಯನುಂ ಮನೋಭಿ ಲಷಿತ ವಿಷಯಸುಖಾನುಭವ ನಿರತನುಮಾಗಿ ಮೂವತ್ತಾಱು ಲಕ್ಕೆ ಪೂರ್ವಂ ರಾಜ್ಯಂಗೆಯ್ಯೆ,

ಪೊಡರದೆ ಕಪ್ಪಮೀವ ಪರಮಂಡಳಿಕರ್ ಮನೆದೀವಿ ಮಕ್ಕಳಂ
ಪಡೆದಬಳಾಜನಂ ನೆಱೆದ ಮಕ್ಕಳ ಮಕ್ಕಳ ನೀಳ್ದದೊಂದು ದಾಂ.
ಗುಡಿವಿಡಿದೀವ ಚಾಗಮೆಡಱೋಡುವಿನಂ ಪೊರೆವೊಳ್ಳೆಗಟ್ಟೆಯೊಳ್
ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ, ೨೩

ಚಾರಣಾದೇಶಂ

ಮತ್ತೊಂದು ಪುಣ್ಯದಿನದೊಳ್ ಸ್ವಯಂಬುದ್ಧಂ ಅಪರಿಮಿತ ಭಕ್ತಿಯಿಂ ಮೇರುವನೆಯ್ದಿ ಅದಱ ನೆಲೆಯೊಳಿರ್ದಕೃತ್ರಿಮ ಚೈತ್ಯಾಲಯಂಗಳನನುಕ್ರಮಂ ದಪ್ಪದರ್ಚಿಸಿ ಜಿನಭವನಂಗಳೊಳಿನಿಸಾನುಂ ಬೇಗಮಿರ್ಪನ್ನೆಗಂ ಆದಿತ್ಯಗತಿ ಗಳುಮರಿಂಜಯರುಮೆಂಬರವಧಿಜ್ಞಾನಿಗಳ್ ಪವಮಾನಮಾರ್ಗದಿಂದಿೞಿವು ದಂ ಕಂಡು ಇದಿರ್ಗೊಂಡು ಬಂದಿಸಿ ಧರ್ಮಕಥಾಪ್ರಸಂಗದೊಳಂ ಲಬ್ಧಪ್ರಸ್ತಾವಂ ಆದಿತ್ಯಗತಿಗಳನಱ್ತಿಯಿಂ ಬಿನ್ನವಿಕುಂ: "ಮಹಾಬಳನಸ್ಮದೀಶನಿನ್ನುಂ ಭೋಗ ಕಾಂಕ್ಷೆಯನಣಂ ಬಿಸುಡಲ್ ಬಗೆದಾರಂ. ಆತನಭವ್ಯನೊ, ಭವ್ಯನೊ, ದೂರ ಭವ್ಯನೋ?

ಪೋದುದು ಜೌವನಂ ಕ್ರಮದಿನಾದುದು ಮುಪ್ಪಿನಿಸಾದೊಡಂ ಸ್ಮರೋ
ನ್ಮಾದದೊಳೀ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೆ
ಳ್ಳಾದಪನಕ್ಕಟಾ ಖಚರನೆಂದೆನಗಿಂತಿದೆ ನಾಡೆಯುಂ ಮನಃ
ಖೇದಮಿದಂ ಪ್ರಬೋಧಿಸಿ ನಿಜಾವಧಿಯಿಂ ಕಳೆಯಿಂ ಮುನೀಶ್ವರಾ" ೨೪

ಜಯವರ್ಮ ಜನ್ಮಾಖ್ಯಾನಂ

ಎಂದು ಬೆಸಗೊಂಡೊಡೆ, "ಆತನಭವ್ಯನಲ್ಲನ್; ಭವ್ಯನೇ. ಭವ್ಯನಾಗಿಯು ಮಾಸನ್ನಭವ್ಯನ್. ಎಂತೆಂದೊಡೆ: ಜಂಬೂದ್ವೀಪದಪರ ವಿದೇಹದೊಳ್ ಗಂಧಿಳಮೆಂಬುದು ವಿಷಯಂ. ಅದನಾಳ್ವಂ ಶ್ರೀಷೇಣನೆಂಬರಸಂ. ಆತಂಗೆ ಹೃತ್ಸುಂದರಿ ಸೌಂದರಿ; ಜಯವರ್ಮ ಶ್ರೀವರ್ಮರೆಂಬರಿರ್ವರ್ ತನಯರ್. ಅವರೊಳ್ ಕಿಱಿಯಾತನೆ ನೃಪತಿಗಂ ಪರಿವಾರಕ್ಕಮುಣುಗನಾಗಿ ಬಳೆಯೆ ಶ್ರೀಷೇಣಂ ತಪಕ್ಕೆ ಪೋಪ ಪದದೊಳ್ ಅಗ್ರಪುತ್ರಂ ಜಯವರ್ಮನಿರ್ದೊಡ ಮವಂ ಮುಟ್ಟಲ್ಲನೆಂದು ಕಿಱಿಯಾತನಂ ಶ್ರೀವರ್ಮನಂ ರಾಜ್ಯದೊಳ್ ನಿಱಿ ಸಿದಂ. ಆ ಜಯವರ್ಮನುಮವಮಾನ ಪವಮಾನಾವಧೂತನಾಗಿ ಪೋಗಿ,

ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನನವಸ್ತುಮಾಡಿ ಪೂ
ಣ್ದಭಿಭವಮಾಗಳೀ ಭವದೊಳಿಂತಿದು ನೀಗದು ರಾಜ್ಯಲಕ್ಷ್ಮಿಗ
ನ್ಯಭವದೊಳಪ್ಪೊಡಂ ನೆಱೆಯೆ ನೋನ್ಪೆನೆನುತ್ತೆ ಜಗನ್ನುತ ಸ್ವಯಂ
ಪ್ರಭಗುರುಪಾದಮೂಲದೊಳೆ ಕೊಂಡನಖಂಡಿತ ಜೈನದೀಕ್ಷೆಯಂ ೨೫

ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಕುಂತಳಂಗ ತೆಮುಳ್ದಿಕೊಂಡುಯ್ದು ಮಡಗಿಡಲೆಂದು ಪುತ್ತಿನೊಳಗೆ ಕುತ್ತಿದ ಕಯ್ಯನಾ ಭೋಂಕೆನೊಗೆತರ್ಪ ಮಹೋರಗಂ ಪಲ್ಗಳಟ್ಟೊಡೆ ಕೊಂಡುದು. ೮

ಪ್ರಸ್ತಾವದೊಳ್ ಲೀಲೆ ಕಣ್ಗ ಸದಳವಾಗೆ ಪಾಱುವ ಮಹೀಧರನೆಂಬ ವಿಯಚ್ಚರೇಂದ್ರನಂ ಕಂಡು, ವಿಷಮ ವಿಷಪೂರಿತ ಶರೀರಮನೊಯ್ಯನೊಯ್ಯನೆ ಆಱಿ ಬಂದು ಕಿವಿಯೊಳ್ ಪಳಂಚಲೆರ್ದೆಯಂ ಪಿಡಿದಲುಗುವ ಸೀಯನಪ್ಪ ಗೀತಾತೋದ್ಯನಾದಕ್ಕಂ ಇದಿರೊಳೆ ಕಣ್ಗೆವಂದು ಬಗೆಯನುಱೆ ಸೆಱೆವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು, 'ಈಗಳೆನ್ನ ತಪಂಬಟ್ಟ ಫಲಮುಂಟಕ್ಕುಮಪ್ಪೊಡೆ ವಿದ್ಯಾಧರನಪ್ಪೆನಕ್ಕೆ' ಎಂದು ಆ ವಿದ್ಯಾಧರ ವಿಮಾನಮಂ ನೋಡಿ,

ಅಲ್ಲಿಯೆ ಕಣ್ ಪಳಂಚೆ ಮನಮಲ್ಲಿಯೆ ಕೀಲಿಸೆ ನೆಚ್ಚು ಮೆಚ್ಚು ತ
ಳ್ತಲ್ಲಿಯೆ ಸೋಲ್ತು ಪತ್ತೆ ಗತಜೀವಿತನಾಗವಿವೇಕದಿಂ ತಪೋ
ವಲ್ಲಿಯೊಳಪ್ಪನಲ್ಪಸುಖಮೆಲ್ಲಮನಲ್ಪಸುಖಕ್ಕೆ ಮಾಱಿ ಬಂ
ದಿಲ್ಲಿ ನಿದಾನದಿಂದತಿಬಳಂಗೆ ಮಹಾಬಳನಾಗಿ ಪುಟ್ಟಿದಂ ೯೧

ಅಂತು ಬಯಸಿ ಪಡೆದ ವಿದ್ಯಾಧರ ಶ್ರೀಯನಿನ್ನೆಗಂ ಬಿಸುಡಲಾಱದಿರ್ದೊಮೇನಾದುದು? ಇಂದು ಕನಸಿನೊಳ್ ಮೂವರುಮಮಾತ್ಯರಸುಂಗೊಳೆ ಕಱೆತಂದು ಕೊಳ್ಕಿಸಱ ಬಾವಿಯೊಳಟ್ಟಿ ನೀನನಿಬರುಮಂ ಬಗ್ಗಿಸಿ ಹರಿಪೀಠದೊಳ್ ಮಿಸಿಸುವಂದಮಂ ಎಬ್ಬರಿ ನಂದುವಂದಮುಂ ಕಂಡು ಅಶುಭಸ್ವಪ್ನದರ್ಶನಕ್ಕೆ ಕೊಕ್ಕರಿಸಿ ಭವದಾಗಮನ ಪ್ರತೀಕ್ಷಣ ಪರನಾಗಿರ್ದಂ. ಆತಂಗೆ ಒಂದು ತಿಂಗಳಾಯುಷ್ಯಂ. ಆತನಿಂ ಮುನ್ನಂ ನೀನೀ ಕನಸುಗಳಂ ಪೇೞ ಪೇೞಲೊಡಮಾತಂ ನಿನ್ನ ಮಾತನೆ ಪವಣ್ಮಾಡಿ ಪೇೞ್ದುದಂ ಕೈಕೊಳ್ಗುಂ ಕೈಕೊಂಡು,

ಈಗಳ್ ನೀನಿರ್ದು ನೋನಿಸೆ ನೋಂತು ಮಹಾಬಳಂ ಲಲಿತಾಂಗಂ ವಜ್ರ [ಜಂಘಂ
ಭೋಗಭೂಮಿಜಂ ಶ್ರೀಧರದೇವಂ ಸುವಿಧಿನರಾಧಿಪನಚ್ಯುತೇಂದ್ರಂ
ಸಾಗರಾತಂ ನೆಲನೆನಿತನಿತುಮಂ ಚಕ್ರದಿಂ ಬೆಸಕಯ್ಸಿ ವಜ್ರನಾಭಿ
ಯಾಗಿ ಸರ್ವಾರ್ಥಸಿದ್ಧಿಯೊಳ್ ಪುಟ್ಟಿ ಭರತದೊಳಿನ್ನಾದಿ ದೇವನಪ್ಪೊಂ ೯೨

ನೀನುಂ ತೃತೀಯಜನ್ಮದೊಳ್ ವಿಗಳಿತಸಂಸೃತಿ ನಿಗಳನೆಯಪ್ಪೆ" ಎಂದುಂ ಚಾರಣಯುಗಳ ಚರಣಯುಗಳಕ್ಕೆ ಕರಕಮಳ ಯುಗಳಮಂ ಮುಗಿದು ಬೀಳ್ಕೊಂಡು,

ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ ಕೂಡೆ ಜೋ
ಲ್ದು ಸಡಿಲ್ದಿರ್ದೊಡಲಳ್ಳೆ ಜೊಳ್ಳೆತನಮಂ ಮೇಣ್ ಕಾಣನೋ ಸಂತತ
ವ್ಯಸನೋದ್ರೇಕದ ಕುಂದನೇನೊಣರನೋ ಶಕ್ತಿಕ್ಷಯಂಗಾಣನೋ
ವಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜರಂ ೨೮

ಅಂತಾತ್ಮಗತದೊಳೆ ಬಗೆಯುತ್ತುಂ ಬಂದು ಖಚರಪತಿಯನೆಯ್ದಿ,

"ಮಸೆದಂಗೋದ್ಭವನಸ್ತ್ರದಂತೆಸೆವ ನಿನ್ನೀ ರೂಪು ವೃದ್ಧತ್ವದೊಳ್
ಪ್ರಸತೊಂದಾಯ್ತು ಮಮತ್ವಮಂ ಬಿಸುಟು ನೀನೇಕತ್ವಮಂ ಭವ್ಯ ಭಾ
ವಿಸು ನಿನ್ನೀ ತನುವಂ ತಪೋವನವನಕ್ರೀಡಾಸುಖಕ್ಕೊಡ್ಡು ಚಿಂ
ತಿಸದಿರ್ ಮುನ್ನಿನ ನಿನ್ನ ಯೌವನವನಕ್ರೀಡಾವಿಳಾಸಂಗಳಂ ೨೯

ನೀನಗೀ ಸಂಸೃತಿ ವಾರಿರಾಶಿತಟಮತ್ಯಾಸನ್ನಮಾಸನ್ನ ಭ
ವ್ಯನೆಯೆಂದೆಯ್ದೆ ಮುನೀಂದ್ರ ದಿವ್ಯಮತದಿಂ ನಿಶ್ಚೈಸಿದೆಂ ಮಾಣಲಿ
ನ್ನಸುಂ ಬಾರದು ನಿನ್ನೊಳಾತ್ಮಹಿತಮಂ ನಿಶ್ಚೈಸು ಸನ್ಮಾರ್ಗಸೂ
ಚನೆಗೆಯ್ದೆಂ ಶರಣಂ ಜಿನೇಂದ್ರಚರಣಂ ವಿದ್ಯಾಧರಾಧೀಶ್ವರಾ" ೩೦

ಎಂದು ಮುಟ್ಟೆ ನುಡಿದು ತನ್ನ ಕಂಡ ಕನಸುಗಳನನುಕ್ರಮಂದಪ್ಪದಱಿಪಿದ ಮಂತ್ರಿಮುಖ್ಯನ ನುಡಿಯೊಳಪಗತಕಲುಷಹೃದಯನಾಗಿ,

"ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪೆನಗಿದೆ ಮುನ್ ಸಾಲದೇ ಕಾಳರಾಜಂ
ಬರೆಯುಂ ಮಾಣ್ದಿರ್ಪನೇ ನಿಶ್ಚಯಿಸು ತನುವನಿನ್ನೊಪ್ಪುಗೊಳ್ ಮುನ್ನಮಿನ್ನುಂ
ಶರಣೀಯಂ ನಿನ್ನ ವಾಕ್ಯಂ ನಿಜಮತಮೆ ಮತಂ ಮೆಚ್ಚಿದಂತೆನ್ನನೀ ಸಂ
ಸರಣಾಂಭೋರಾಶಿಯಿಂದಂ ಪೊಱಮಡಿಸೆನಗಿನ್ ನೀನೆ ಹಸ್ತಾವಲಂಬಂ" ೩೧

ಪ್ರಾಯೋಪಗಮನಂ

ಎಂದು ಪರಿಚ್ಛೇದಿಸಿ ನುಡಿದು ನಿಜಗೃಹೋದ್ಯಾನದ ಜಿನಭವನದೊಳೆಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯಂ ಮಾಡಿದಿನ್ ಬಱಿಯಂ

ನಿಜಸುತನತಿಬಳಕುಮಾರನಂ ರಾಜ್ಯಭಾರದೊಳ್ ನಿಱಿಸಿ ಪೊಱಲಂ ಪೊಱ ಮಟ್ಟು ಸಿದ್ಧಕೂಟಮಂ ತ್ರಿಃಪ್ರದಕ್ಷಿಣಂಗೆಯ್ದು ಜಿನೇಂದ್ರಾರ್ಚನಾಪುರಸ್ಸರಂ ವೀರಸಂಸ್ಥಾನಾರೂಢನಾದಾಗಳ್ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯ ನಾಗಿ ಪಂಚಗುರುಸಮಕ್ಷದೊಳ್ ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು ತೊಱೆಯಿಸಿದಂ. ತೊಱೆಯಿಸಿ,

"ಮಂಗಳಕಾರಣ ಪಂಚ ಪ
ದಂಗಳನಪವರ್ಗಮಾರ್ಗವಿರಚಿತಸೋಪಾ
ನಂಗಳನಕ್ಷಯಮಂತ್ರ ಪ
ದಂಗಳನೋದುವುದು ನೆಱೆಯೆ ನಿಶ್ಚಳಮತಿಯಿಂ ೩೭

ಮುನಿವೃಂದೋಚ್ಚಾರಿತ ಪಂ
ಚ ನಮಸ್ಕೃತಿಗಾಂತು ಕಿವಿಯನರ್ಹತ್ಪದಮಂ
ನೆನೆಯುತ್ತುಮನುಪ್ರೇಕ್ಷೆಯೆ
ಮನದೊಳ್ ಕಣ್ಮಲೆಯೆ ಸೇಸೆಗೊಳ್ ಖಚರಪತೀ ೩೮

ಮಿಡಿದನಿತು ಬೇಗದಿಂದಱ
ಮೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ
ಪಡೆದಪೆಯಾಗಳೆ ಬಲ್ಪಿಡಿ
ವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ ೩೪

ಎಂದಾ ಮಹಾನುಭಾವನ ಪೇೞ್ದ ನುಡಿಯ ಸಾಕ್ಷಿಯೊಳಿರ್ಪತ್ತೆರಡು ದಿವಸಂಬರಂ ಮಹಾಬಳಂ ವೀರಶಯ್ಯಾಗತನಾಗಿ ನೋಂತು ಸಮಾಧಿವಿಧಿಯಂ ತಾಳ್ದಿದಂ. ಇಂತು ಪತಿಯಂ ನಡೆಯಲ್ಕೆ ಪೇೞ್ದು ತಾನುಮುಗ್ರತಪಮಂ ಕೊಂಡು ತತ್ಸಚಿವೋತ್ತಮನೊಳ್ಪಿಕಯ್ದಂ.

## ೩ ಲಲಿತಾಂಗಂ

ಮಹಾಬಳಖಚರೇಂದ್ರಂ ಪ್ರಾಯೋಪಗಮನವಿಧಿಯಿಂದಮಾತ್ಮೀಯ ಶರೀರಭಾರಮನಿೞಿಪಿ ತತ್ಸಮಯದೊಳನಲ್ಪಸುಖನಿವಾಸಮೆನಿಸಿದೀಶಾನಕಲ್ಪ ದೊಳ್ ದಿವ್ಯತಳ್ಪದ ಪೊರೆಯೊಳಗೆ ಜೌವನಂ ನೆಱೆದಿರೆ ದಿವ್ಯಮೂರ್ತಿ ಸಹ

ಜಾಂಬರ ಭೂಷಣ ದಿವ್ಯಮಾಲೆಗಳೊಡವುಟ್ಟಿ ಮಱಲುಂದಿದನೆಲ್ಚಱುವಂತೆ ಪುಟ್ಟಿದಂ. ಅಂತು ಪುಟ್ಟಿದಾಗಳ್,

ದೇವಲೋಕ ಸುಖಾನುಭವಂ

ಸುರ ತರು ನಂದನಂಗಳಿನಲರ್ವಱಿ ಬಂದೆಱಗಿತ್ತು ದೇವ ಸೌಂ
ದರಿಯರ ದಿವ್ಯಮಪ್ಪ ಪೊಸಗಂಪಿನಲಂಪನವುಂಕಿ ಕೊಂಡವ
ಳ್ದಿರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ ಪುಷ್ಪಕೇಸರಂ
ತೆರಳೆ ತೆರಳ್ಚಿ ಬೀಸಿದುದು ತೆಂಬೆಲರೆಂಬೆಲರಪ್ಪಿಕೊಳ್ವವೋಲ್ ೩೫

ಮತ್ತಂ ಪೂತ ಜಂಗಮಲತೆಗಳಂತೆಱಗಿ ತನ್ನ ಮುಂದೆ ಬಂದಾಡುವಚ್ಚರಸಿಯರುಮಂ ಸೇಸಿಕ್ಕಲೆಂದು ಬಂದಮರಪುರಂಧ್ರಿಯರುಮಂ ಪರಿವಾರದೇವಿಯರುಮಂ ಭೋಂಕನೆ ಕಂಡು ಭವಪ್ರತ್ಯಯಜ್ಞಾನಂ ಪುಟ್ಟಿ ಪೂರ್ವಭವವೃತ್ತಾಂತಮಂ ನೆಱೆಯಱಿದು,

“ಇದು ದೇವೇಂದ್ರ ನಿವಾಸಮೆನ್ನ ನೆಲೆಯುಂ ಶ್ರೀ ಶ್ರೀಪ್ರಭಂ ಮುಂದೆ ನಿಂ
ನು ದೇವವ್ರಜಮಿಂತಿದೆಲ್ಲಮಮರೀ ಸಂದೋಹಮಾನ್ ದೇವನ
ನು ಮುನ್ ಖೇಚರರಾಜನಾದ ಭವದೊಳ್ ಸಯ್ಪಿಂ ಸ್ವಯಂಬುದ್ಧನೆಂ
ದನಾನೆಂದೆನದಲ್ಲದಂದೆನಗವಿಾ ಲೋಕಕ್ಕಮೇಂ ಸಮ್ಮದಂ” ೩೬

ಎಂದು ಬಗೆವನ್ನೆಗಂ ಮಹತ್ತರ ದೇವಿಯರ್ ಬಂದು ಪೊಡೆವಟ್ಟು,

“ಇದು ನಿಜ ಪೂರ್ವ ಪುಣ್ಯಫಲದಿಂ ದೊರೆಕೊಂಡ ವಿಮಾನವಿಾ ವಿಮಾ
ನದೊಳನುಬಂಧಿಸಿರ್ದುದಿದು ದೇವನಿಕಾಯಮಿದೀ ತ್ರಿದಂಘ್ರಿ ಪ
ದ್ಮದ ಬಳಸಿರ್ಪ ದಿವ್ಯ ಗಣಿಕಾಜನಮಿಂತಿದನಾಳ್ದು ದೇವ ರಾ
ಗದೊಳಿರು ನೀನುಮಿಲ್ಲಿ ಲಲಿತಾಂಗತೆಯಿಂ ಲಲಿತಾಂಗದೇವನಯ್ ೩೭

ಇದು ಸುಖದೊಂದು ತುತ್ತತುದಿ ರಾಗದ ಮೊತ್ತಮೊದಲ್ ನಿರಂತರಾ
ಭ್ಯುದಯದ ಸಾಗರಂ ವಿಭವದಾಗರವಿಾ ದಿವಿಜೇಂದ್ರ ರುಂದ್ರ ಲೋ
ಕದೊಳಮಿದೊಂದೆ ಸಾರಮಿದು ಜೈನ ಪದಾಬ್ಜ ವರಪ್ರಸಾದದಾ
ದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯ ರಾಜಿಯಂ” ೩೮

ಎಂಬುದುವಿಾಶಾನ ಕಲ್ಪದಕೃತ್ರಿಮ ಚೈತ್ಯಾಲಯಂಗಳನರ್ಚಿ: ತಪ್ತ ತಪನೀಯಚ್ಛಾಯನುಂ ನಿದ್ರಾಲಸ್ಯಾಕ್ಷಿನಿಮೇಷ ಜರಾ ಶೋಕ ವಿಷಾದ ವಿರಹಿತನುಂ ಏಕಪಾರಾವಾರೋಪಮಾಯುಷ್ಯನುಮಾಗಿ ನಾಲ್ಸಾಸಿರ್ವರ್ ಮನೋನಯನ ವಲ್ಲಭೆಯರೊಳಂ ಸ್ವಯಂಪ್ರಭೆ, ಕನಕಲತೆ, ಕನಕಮಾಳೆ, ವಿದ್ಯುಲ್ಲತೆಯೆಂಬ ನಾಲ್ವರ್ ಮಹಾದೇವಿಯರೊಳಂ ಸುರಲೋಕಸೌಖ್ಯಮಂ ಆಯುರಬ್ಧಿಯೊಳ್ ಪಳಿತೋಪಮಂಗಳಯ್ದು ಱವಿನಮುಂಡಂ. ಅನ್ನೆಗಂ ಸ್ವಯಂಪ್ರಭಾಭಿಧಾನೆಯರ್ ಪಲಂಬರುಮತಿಕ್ರಾಂತೆಯರಾಗೆ ತತ್ಸಂತಾನದೊಳ್

ಅಭಿನವ ಪಾರಿಜಾತ ಕುಸುಮಾಸವಮೊರ್ಮೊದಲುಣ್ಮೆ ದೇವದುಂ
ದುಭಿ ನಭದೊಳ್ ಪೊದಟ್ದಿಸೆಯಿ ಕಣ್ಗೆಸೆದಿರ್ಪ ನಿಜಾಂಗಸಂಗತ
ಪ್ರಭೆ ಸುರಲೋಕಮಂ ಬೆಳಗೆ ವಿಸ್ಮಯಮಪ್ಪಿನಮಾಗಳಾ ಸ್ವಯಂ
ಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟವೆ ಪುಟ್ಟಿ ಪುಟ್ಟಿದಳ್ ೩೯

ಸ್ವಯಂಪ್ರಭಾನುರಾಗಂ

ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ಟ್ಪ್ಮೊದಲದು ಚಿತ್ತಜಂಗೆ ಕುಲದೈವಮದಂಗಜ ಚಕ್ರವರ್ತಿಗೆ
ತ್ರಿದ ಪೊಸವಟ್ಟಮಂತದು ಮನೋಜನ ಕೈಪಿಡಿಯೆಂದು ಮಾಣ್ದೆನಾ
ಸುದತಿಯ ರೂಪನಿನ್ ಪೆಱತನೆಂದೊಡೆ ಚಿಃ ಕರಮೆಗ್ಗನಾಗೆನೇ ೪೦

ನೆಗಟ್ದಮರಾಂಗನಾಜನದ ರೂಪುಗಳೆಲ್ಲಮದೀಕೆಯೊಂದು ದೇ
ಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕಮಪೊರ್ದು ದಗುಂತಿಗೊಂದು ಭಂ
ಗಿಗೆ ನೆಗಟ್ಪ್ಪೊಂದು ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವೇ
ನೊಗಸುಗಮೆಂದು ತಳ್ತಗಲನಾಕೆಯನಾ ಲಲಿತಾಂಗವಲ್ಲಭಂ ೪೧

ಬ್ರತದಿಂದಂ ಪಡೆದಿಂದ್ರಲೋಕವಿಭವಂ ಮುನ್ನಾದ ದೇವಾಂಗನಾ
ತತಿಯಿಂದಂದಿನಿತಿಂಪನೀಯದು ಮನಕ್ಕಾಹ್ಲಾದಮಂ ಮಾಟ್ಪ ತ
ತ್ಸತಿಯಿಂ ನೆಟ್ಟನೆ ಸಾರಮಾದುದು ಗಡಂ ತತ್ಕಲ್ಪಜಂಗೆಂದೊಡಾ
ಜಿತವಿದ್ಯುತ್ಪ್ರಭೆಯಂ ಸ್ವಯಂಪ್ರಭೆಯನಿನ್ನೇವಣ್ಣಿಪಂ ಬಣ್ಣಿಪಂ ೪೨

ಆಕೆವೆರಸು ನಂದೀಶ್ವರ ಮಹಾಮಹಿಮೆಗಂ ಪಂಚಕಲ್ಯಾಣೋತ್ಸವಕ್ಕ

ಮಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ ವಿವಿಧ ದಿವ್ಯ ದ್ರವ್ಯಾರ್ಚನೆಗಳಿಂ ತ್ರೈಲೋಕ್ಯಪೂಜ್ಯನಂ ಪೂಜಿಸಿ,

ಅಣಿಮಾದ್ಯಷ್ಟಗುಣ ಪ್ರಭೂತ ವಿಭವಂ ದೇವಾಂಗನಾ ಸನ್ಮನಃ
ಪ್ರಣಯ ಪ್ರೀಣಿತ ಮಾನಸಂ ಸುರವಧೂ ಲೀಲಾವಧೂತ ಪ್ರತಿ
ಕ್ಷಣ ಚಂಚಚ್ಚಮರೀರುಹಂ ಪಟುನಟಪ್ರಾರಬ್ಧ ಸಂಗೀತಕಂ
ತಣಿದಂ ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ ೪೩

ಅಂತಾತ್ಮಪುಣ್ಯೋಪಾರ್ಜಿತಾಮರಲೋಕಭೋಗಮೇಕ ಸಾಗರಪ್ರಮಿತ ಜೀವಿತಮುಱುದಿಂಗಳುೞಿದುದೆಂಬಂದಿಂಗೆ

## ದೇವಲೋಕ ಚ್ಯುತಿ

ಸೂಡಿದ ಪಾರಿಜಾತದ ನವೇರುವ ಬಾಸಿಗವೊಯ್ಯನೊಯ್ಯನಿ
ಪೋರ್ಱಡಿದುದಂದಿನಂಗರುಚಿ ಕಣ್ಗೆಳಿದಾಯ್ತು ವಿಭೂಷಣಂಗಳೊಳ್
ತೀಡುವ ರಶ್ಮಿಗಳ್ ಮಸುಳ್ದುವಾಗುಳಿಯಾಯ್ತಿನಿತುಬ್ಬೆಗಂ ಮೊಗಂ
ಬಾಡೆ ತಗುಳ್ದು ಸೂಚಿಸಿದುವಾ ದಿವಿಜಂಗವಸಾನಕಾಲಮಂ ೪೪

ಮತ್ತಂ ತನ್ನ ಪೋಗಿಂಗೆ ನಡನಡನಡುಗುವಂತೆ ನಡುಗುವುಪವನದ ಕಲ್ಪವೃಕ್ಷಂಗಳುಮಂ ತನ್ನಗಲ್ಕೆಗೆ ಬಿನ್ನನಿರ್ಪಂತೆ ಬಿನ್ನನಾಗಿರ್ಪ ವಿಮಾನದ ಮಣಿಕುಟ್ಟಿಮ ಭೂಮಿಗಳುಮಂ ಆಗಳಾಗಳೆ ತನ್ನಂ ಪೆಱರ್ ಪಿಡಿದು ತೆಗೆವಂತೆ ತನಗೆ ತಾನೇ ಪೊಣ್ಮುವ ಭಯಮುಮಂ ಭೋಂಕೆನೆ ಕಂಡು ನಾಕಲೋಕ ಚ್ಯುತಿಯನಾಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ,

ಸುರತರು ನಂದನಂಗಳಿರ ರತ್ನ ಪಿನದ್ಧ ವಿಮಾನ ಕುಟ್ಟಿಮಾಂ
ತರ ಸುರತಾಲಯಂಗಳಿರ ಚಾರು ವಿಲೋಲ ಕಟಾಕ್ಷಪಾತ ಸೌಂ
ದರ ಪರಿವಾರ ದೇವಿಯರಿರಾ ಕಡುಕಯ್ದು ಕೃತಾಂತನಿಂತು ನಿ
ರ್ನೆರಮೆೞೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ ೪೫

ಸಂತಸದಂತನೆಯ್ದಿ ಸುರತಾಮೃತದೊಳ್ ತಣಿದಲ್ಕಱಿಂ ಜಿಗಿ
ಲ್ತಂತಿರೆ ಪತ್ತಿ ಮೆಯ್ಗೆಳೆರಡಾದೊಡಮೇನಸುವೊಂದೆ ನೋೞ್ಪೊಡೆಂ
ಬಂತಿರೆ ಕೂಡಿ ನಿನ್ನೊಡನೆ ಭೋಗಿಸಲೀಯದೆ ಕೆಮ್ಮನೆನ್ನನು
ಯ್ವಂತಕನೆಂಬ ಬೂತನೆಲೆ ಮಾಣಿಸಲಾಗದೆ ಪೇೞ್ ಸ್ವಯಂಪ್ರಭೇ ೪೬

ಎಂದು ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗ ದೇವನಂ ಸಾಮಾನಿಕದೇವರೆಯ್ದೆವಂದು,

“ನಿನಗೊರ್ವಂಗಲ್ಲವಸ್ಥಾಂತರಮುಮುರಜನಕ್ಕೆಲ್ಲವಿಾ ಪಾಂಗೆ ಕಾರು
ಣ್ಯಾನಿನಾದಂ ನಿನ್ನನಾದಂ ನಗಿಸುಗುಮೆಱೆದುಯ್ವಂತಕಂಗಿಲ್ಲ ದೇವಾಂ [ದಾ
ಗನೆಯರ್ ಮಾಱೆಂಪರೇ ಪೇೞ್ ಜನನಮೃತಿ ಜರಾಂತಕ ಶೋಕಾಗ್ನಿಯಿಂ
ವನುವಿಾ ಸಂಸಾರದೊಳ್ ಬೇಯದನೊಳನೆ ಶರಣ್ ಧರ್ಮದಿಂದೊಂದು
ಮುಂಟೇ ೪೭

ಜಿನಚೈತ್ಯ ಬ್ರಾತಮಂ ಬಂದಿಸು ಜಿನ ಪದಪದ್ಮಂಗಳಂ ದಿವ್ಯಮಪ್ಪ
ರ್ಚನೆಯಿಂದಂ ಭಕ್ತಿಯಿಂದರ್ಚಿಸು ಜಿನನ ನಮಸ್ಕಾರಮಂತ್ರಗಳೊಳ್ ಭಾ
ವನೆಯಂ ತಾಳ್ದಱ್ತಿಯಿಂದಂ ಜಿನಮಹಿಮೆಗಳಂ ಮಾಡು ನೀಂ ಭವ್ಯನಯ್ ಮ
ತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪಯ್” ೪೮

ಎನೆ ಬಗೆಗೊಂಡು ಆಱು ಮಾಸಂ ಜಿನೇಂದ್ರನನೊಸೆದರ್ಚಿಸುತ್ತುಂ ನೋಡೆ ನೋಡೆ ಶರತ್ಸಮಯ ಜಳಧರರೂಪದಿಂದದೃಶ್ಯನಾಗಿ,

## ೪ ವಜ್ರಜಂಘಂ

ಉತ್ಪಳಖೇಟಮೆಂಬುದು ಪೊೞಲ್; ಅದನಾಳ್ವ ಭೂಪತಿ ವಜ್ರಬಾಹು ನೃಪಂ; ಆ ನೃಪನ ಕಾಂತೆ ವಸುಂಧರೆ; ಅವರ್ಗಗ್ರಸೂನು ವಜ್ರಜಂಘನೆನೆ ಬಂದು ಪುಟ್ಟಿದಂ. ಆ ರಾಜಕುಮಾರಂ ಯೌವನ ಪ್ರಾದುರ್ಭಾವಮಂ ಪ್ರಕಟಂ ಮಾಡೆ,

ಆ ದಿವಿಜೇಂದ್ರಲೋಕದಿರವುಂ ಪೆಸರುಂ ತನಗಿಲ್ಲಿ ಬಂದು ಬೇ
ಱಾದುದೆ ಭೇದಮಂಗರುಚಿ ರೂಪಿನ ಪೊಂಪುೞಿ ಗಾಡಿಯೇೞ್ಗೆ ಮೇ
ಲಾದ ವಿಲಾಸದೊಡ್ಡವಿನಿತುಂ ದಿವದಿಂದೊಡವಂದುವೆಂಬನಿ
ತ್ತಾದುದು ರೂಪು ಜವ್ವನಮನೊತ್ತರಿಸುತ್ತಿರೆ ವಜ್ರಜಂಘನಾ ೪೯

ಗಗನಕುಸುಮಮನೆ ಬಯಸಿ ಮರುಳ್ಗೊಂಡ ಮರುಳಂತೆ ಅವನ್ ದೇವ ಲೋಕದೊಳಿನಿತಾನುಂ ಕಾಲಮನುಭವಿಸಿದನುಭವಕ್ಕೆ ಮೊದಲಿಗೆಯೆನಿಸಿದಾ ಸ್ವಯಂಪ್ರಭೆಯಂ ನೆನೆನೆನೆದು,

ಕುಡುಮಿಂಚಂ ಮಸೆದನ್ನರಪ್ಪ ಪೞರೊಳ್ವೆಂಡಿರ್ ಮನಂಗೊಂಡು ಬಂ
ದೊಡಮಾ ರಾಜಕುಮಾರನೊಲ್ಲನೆ ದಳನ್ಮಂದಾರಿಕಾ ಮಾಲೆಯೊಳ್
ಕಡುಗಂಪಂ ಸವಿದೊಂದು ತುಂಬಿ ಪಸಿವಿಂ ಮೆಳ್ಪಟ್ಟು ಬಂಡುಣ್ಣದಿ
ರ್ಪೊಡಮಿರ್ಕುಂ ಬೞೆಕೆಂತುಮನ್ಯ ಕುಸುಮಾಮೋದಕ್ಕೆ ಮೆಯ್ದುರ್ಕುಮೇ ೫೦

ಅನ್ನೆಗಮಿಶಾನಕಲ್ಪದೊಳಾ ಶ್ರೀಪ್ರಭವಿಮಾನದೊಳ್

"ಮುರಿದೆೞೆದುಯ್ಯೆ ನಿನ್ನ ನಿರದಂತಕನಾಂ ನಡೆ ನೋಡೆ ನೋಡೆ ನೀಂ
ಕರಗಿವೆಯೆಂತುಮೆನ್ನ ಸುಶರೀರದೊಳಿರ್ದುದು ಜೀವಮಾಯೊಡಲ್
ಕರಗಿದುದಿಲ್ಲದೆನ್ನ ಬಸಮಲ್ತೊಡಲಿಂದೆಮ ಶೋಕದೊಳ್ ಮನಂ
ಕರಗಿದುದೆಯ್ದೆವಾರದಿರೆಯಿರ್ದೆಡೆಯಿಂ ಲಲಿತಾಂಗವಲ್ಲಭಾ ೫೧

ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಛೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ" ೫೨

ಎಂದು ನಿಜಪ್ರಾಣವಲ್ಲಭ ವಿಯೋಗ ಶೋಕ ವ್ಯಾಕುಳೆಯಾಗಿರ್ದ ಸ್ವಯಂಪ್ರಭಾದೇವಿಯ ಸಮೀಪಕ್ಕೆ ಮಹತ್ತರದೇವಿಯರ್ ಬಂದು, 'ಇಂತು ಬಾಯೞೆವುದೆ? ಗಾಂಪು. ಜಿನಪತಿಯಂ ಪೂಜಿಸು. ಮಱುಭವದೊಳನಿಯನಂ ಪಡೆವೆ' ಎಂಬುದುಮದನೆ ಮನದೆಗೊಂಡು ಗುರುಪಂಚಕಮಂ ನೆನೆಯುತ್ತುತ್ಸನ್ನಶರೀರೆಯಾಗಿ ಪುಂಡರೀಕಿಣಿಯೆಂಬ ಪೊೞಲನಾಳ್ವ ವಜ್ರದಂತಭೂಪತಿಗಂ ಲಕ್ಷ್ಮೀಮತಿಮಹಾದೇವಿಗಂ ಮಗಳ್ ಶ್ರೀಮತಿಯೆಂಬಳಾಗಿ ನವಯೌವನ ಲಕ್ಷ್ಮಿಯಂ ತಾಳ್ದಿದಳ್; ಪಂಡಿತೆಯೆಂಬ ದಾದಿ ಓದಿಸುತಿರೆ ಪರಮಪಂಡಿತೆಯಾದಳ್.

ಅಲರ್ವ ಪದಕ್ಕೆ ಬಂದಲೆವ ತೆಂಬೆಲರಿಲ್ಲದೆ ಮಾಣ್ದ ಮಲ್ಲಿಕೋ
ಜ್ಜ್ವಲ ಮುಕುಳಕ್ಕಮಾದ ಪೊಸಗಂಪಸುಗುಟ್ಟಿರಲಿರ್ದ ರಾಗದಿಂ
ನಲಿವ ಮದಾಳಿಯಿಲ್ಲದಿನಿಸಂ ತಡೆದಂತರಿಸಿರ್ದ ಪದ್ಮಕು
ಟ್ಮಲ ವಿಭವಕ್ಕಮೇಂ ದೊರೆಗೆವಂದುದೊ ಯೌವನದೇೞ್ಗೆ ಕನ್ನೆಯಾ ೫೩

ಒಂದು ದಿವಸಮಾ ಕನ್ನೆ ಕನ್ನೆಮಾಡದೋವರಿಯೊಳಗೆ ಪವಡಿಸಿರೆ ನಿಶಾವಸಾನ ಸಮಯದೊಳ್ ಘೋಂಕೆನೆೞ್ಚತ್ತು ಯಶೋಧರ ಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಗೆ ನೆರೆವ ದೇವಾಗಮನಮಂ ನೋಡಲೊಡಂ ಪೂರ್ವಭವ ಸ್ಮರಣಮಾಗಿ ದೇವಲೋಕದ ಲಲಿತಾಂಗದೇವನಂ ನೆನೆದು ಬೆಚ್ಚನುಸಿರ್ದು ಮೂರ್ಛೆವೋಪುದುಂ; ಪರಿಚಾರಿಕೆಯರುಂ ಕೆಳದಿಯರುಂ ಪರಿತಂದು ಎಂತಾನುಂ ಮೂರ್ಛೆಯಿಂದೆೞ್ಚಱಿಸಿ ಬೆಸಗೊಳೆ, ಮಱುಮಾತುಗುಡದೆಯುಂ ಮನಂಗುಡದೆಯುಮಿರೆ ನಡುಗಿ ಬಂದು ವಜ್ರದಂತಂಗಂ ಲಕ್ಷ್ಮೀಮತಿ ಮಹಾದೇವಿಗಮಱಿಪಿದೊಡವರಿರ್ವರುಂ ಬಂದು, "ಇನಿತೇಕಾದುದೊ ನೋವು? ಆವುದು ನಿನ್ನ ಬೈಗಂ? ಪೇೞ್" ಎಂಬುದುಂ, ಆ ಕನ್ನೆ ಕಣ್ಬನಿಯಂ ಸೂಸಿದಳ್; ಒಂದುಮಂ ನುಡಿದಳಿಲ್ಲ. ಮೂಗುವಟ್ಟೆ ನೀಮೆಂಬುದನೆನ್ನಿಮೆಂದು ಉಸಿರದಿರ್ದ ತನೂಜೆಯ ಭಾವಮಂ ಮಹೀಶಂ ಬಗೆದು, ಪಂಡಿತೆಯಂ ನೀನೀಕೆಯಂ ಬಲ್ಲಮಾಱ್ಕೆಯೊಳೊಡಂಬಡಿಸಿ ಮನಂಗಲ್ಪುದೆಂದು ನಿಯೋಜಿಸಿ ಪೋದಂ. ಅನ್ನೆಗಂ ಗುರುಗೆ ಯಶೋಧರ ಮುನಿಗೆ ಕೇವಲಬೋಧಂ ಆಯುಧಾಗಾರದೊಳ್ ಚಕ್ರರತ್ನಮೊಡವುಟ್ಟೆ ನೃಪಂ ಜಿನಪತಿಗೆ ಪೂಜೆಯಂ ಮಾಡಿ ಅವಧಿಯಂ ಪಡೆದಂ. ಮಗುೞ್ದು ಬಂದು ಚಕ್ರಪೂಜೆಯಂ ನಿರ್ವರ್ತಿಸಿ ಬಲಂಬೆರಸು ದಿಗ್ಜಯೋದ್ಯೋಗದಿಂ ಪೋದಂ.

## ಶ್ರೀಮತೀ ಪೂರ್ವಜನ್ಮಕಥಾವಳಿ

ಇತ್ತ ಪಂಡಿತೆಯುಂ ಶ್ರೀಮತಿಯನೊರ್ಬಳನೆ ಕನ್ನೆಮಾಡದ ಪೆಱಗಣ ನಂದನವನಕ್ಕುಯ್ದು ಅಳಕಂಗಳನೋಸರಿಸುತ್ತುಂ ಮೆಲ್ಲನೆ ಮೇಳಿಸಿ ನುಡಿದಳ್; "ಎನಗಿಂತು ನಿನ್ನ ಬಗೆಯಂ ಕಾದು ಅಕ್ಕ ಪೇೞಾರೊಳಿನ್ ನುಡಿವೋ? ಮನದೊಳಾದ ನಿರ್ವೇಗಂ ಕೂರ್ಪರೊಳ್ ನುಡಿದೊಡಲ್ಲದೆ ಪೋಕುಮೇ? ಬಗೆಯ ಬಯ್ಕೆಯನೆನಗೊಪ್ಪಿಸು" ಎಂಬುದುಂ, ಸ್ವಭಾವಮುಗ್ಧೆ ನೆಲನಂ ಬರೆಯುತ್ತುಂ, "ಪೇೞ್ದಪೆಂ; ಕೇೞ್. ದೇವಾಗಮಮಂ ನೋಡಲೊಡಂ ಪ್ರಾಗ್ಜನ್ಮಕಥಾವಳಿಯೆಲ್ಲಮಂ ಬಗೆದು ಎನಗೆ ನೋವಾದುದು. ಆಸೀ ಭವಕ್ಕೆ ಮೂಱನೆಯ ಭವದೊಳ್ ಗಂಧಿಳ ವಿಷಯದ ಪಾಟಳಿಗ್ರಾಮದೊಳ್ ನಾಗದತ್ತನೆಂಬ ಪರಗದಂಗವಾತನ ಪರದಿತಿ ವಸುದತ್ತೆಗಂ ಅಯ್ವರ್ ತನಯರಿಂದಂ ಇರ್ವರ್ ತನೂಜೆಯರಿಂದಂ ಕಡೆಯ ಗರ್ಭದೊಳ್ ನೆಲಸಲೊಡಂ ಅನ್ಯಜನ್ಮೋಪಾ

ರ್ಜಿತ ಕರ್ಮಪ್ರೇರಣೆಯಿಂದೆನ್ನೊಡವುಟ್ಟಿದರುಂ ತಂದೆಯುಮೊರ್ವರುೞಿಯ ದಂತೆ ಪೋಪುದುಂ, ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ, ಪೆಱರ ಕೀೞಿಲೊಳೆಮ್ಮಬ್ಬೆಯುಂ ಮುತ್ತಬ್ಬೆಯುಂ ಬದಗುಗೆಯ್ದುಣೆ ನವ ಮಾಸಂ ನೆಱೆದಾಂ ಪುಟ್ಟುವುದುಂ, ಎನ್ನ ಮೆಯ್ಯ ದುರ್ಗಂಧಕ್ಕೆ ಪೇಸಿ ಕಂಡವರೆಲ್ಲಮೆೞೆದು ಕಳೆಯೆ ಪರೇತವನ ಭೂಮಿಯೊಳ್ ಜೀರ್ಣ ಶೀರ್ಣ ಚೀರಂಗಳಿಂದಂ ಪುದಿದಿರಿಸಿ ಪೋಗಿ ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲ ವುಱುಮಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯಾಗಿ ಬಳೆಯೆ, ಅವರುಮನಂ ತಕಂ ಸವಿನೋೞ್ಪುದುಂ, ಆನುಂ ಅಂಬರ ತಿಳಕಮೆಂಬ ಗಿರಿವರದ ಮೇಗೆ ಪಿಹಿತಾಸ್ರವ ಮುನಿಗಳಂ ಕಂಡು ಪೊಡೆವಡುವನಿತುವರಮಱಿವಿಲ್ಲದೆಯುಂ ಅಸವಸದೊಳಾದ ಮನದೆಱಕದಿನೆಱಗಿ, 'ಎನಗೀ ವಿಧದಿಂ ದುಃಖಮಾವುದು ಕರ್ಮದೊಳಾಯ್ತು? ಕಾವುದನಾಥೆಯ'ನೆನೆ ಯತಿಪತಿ ನುಡಿದಂ: 'ಮಗಳೆ, ನಿನ್ನಂ ಬಿಡದಲೆದು ಪಿೞಿದು ಪಿಂಡಿದ ದುಃಖವ್ರಾತಮಿದು ನಿನ್ನ ಪುರಾತನ ದುಷ್ಕರ್ಮ ಫಲಂಗಳ್. ಅದೆಂತೆಂದೊಡೀ ವಿಷಯದ ಪಳಾಳಕೂಟ ಗ್ರಾಮ ದೊಳ್ ದೇವಿಲನೆಂಬ ಗ್ರಾಮಕೂಟಂಗವಾತನ ಕುಟುಂಬಿನಿ ವಸುಮತಿಗಂ ಧನಶ್ರೀಯೆಂಬ ಮಗಳಾಗಿ ನೀಂ ಪುಟ್ಟಿ ಸಮಾಧಿಗುಪ್ತರೆಂಬ ಯತಿಗಳಧ್ಯಯನಂ ನಿನಗನಿಷ್ಟಮಪ್ಪುದಱಿಂದವರೋದುವಾವಾಸದೊಳ್ ಸಾರಮೇಯ ಪೂತಿ ಕಳೇ ವರಮನಿಕ್ಕಿದೊಡವರ್, 'ಮತಿಗೆಟ್ಟ ಮಗಳೆ, ನೀನಿದಂ ನೆಗೞ್ದೈ? ದುರ್ಗತಿ ಹೇತು; ಕಿಱಿದು ದುಃಖಮಂ ಮಾಡುಗುಮೇ?' ಎಂಬುದುಮಾ ನುಡಿಗೆ ನೀಂ ಬೆರ್ಚಿ ಬೇಗಮದನೆೞೆದು ಕಳೆದು ಅಱಿಯದೆ ಗೆಯ್ದುದರ್ಕೆ ಕ್ಷಮಿಯಿಪ್ಪು ದೆಂದು ಕಾಲ್ಗೆಱಗಿದ ನಿನ್ನುಪಶಮಂ ಮನುಷ್ಯಜನ್ಮಮಂ ಪಡೆದತ್ತು. ಮುನ್ನಿನ ದೋಷಂ ನಿನ್ನನೀ ಪದಕೆ ತಂದುದು.' ಎಂಬುದುಮಾ ಮುಮುಕ್ಷುಗಳ ಸಮಕ್ಷದೊಳವರ ಪೇೞ್ದ ಮಾೞ್ಕೆಯೊಳೆ ನೋಂತು ಆಯುಷ್ಯಾವಸಾನದೊಳೀ ಶಾನ ಕಲ್ಪದೊಳ್ ಶ್ರೀಪ್ರಭ ವಿಮಾನದೊಳ್ ಲಲಿತಾಂಗದೇವಂಗೆ ವಲ್ಲಭೆಯೆಂ ಸ್ವಯಂಪ್ರಭೆಯೆಂಬೆನಾಗಿ ಪೂರ್ವೋಪಕಾರಮಂ ನೆನೆದು ಪಿಹಿತಾಸ್ರವ ಭಟ್ಟಾ ರಕರನಾನುಮಾತನುಂ ಬಂದಿಸಿ ಪೂಜಿಸಿ ಪೋಗಿ ಸುರಲೋಕಸುಖಂಗಳನೆನಿ ತಾನುಂ ಕಾಲಮನುಭವಿಸಿ ಪುಣ್ಯಾವಸಾನದೊಳ್ ಮದೀಯ ಜೀವಿತೇಶಂ ಧರಾತಳಕ್ಕೆ ಕೆಡೆವುದುಮಾನುಮಾತನ ವಿಯೋಗದೊಳಱುದಿಂಗಳ್ವರಂ ಜಿನೇಂದ್ರಮಹಿಮೆಯುಂ ಮಾಡಿ ಬಂದಿಲ್ಲಿ ಪುಟ್ಟಿದೆಂ.

ಲಳಿತಾಂಗಂ ದಿವದಿಂದಮಂದಿೞಿದು ಬಂದೀ ವಿಶ್ವ ವಿಶ್ವಂಭರಾ
ತಳದೊಳ್ ಭೂಚರಖೇಚರರ್ಕಳೊಳಗಿನ್ನೆಲ್ಲಿರ್ದೊಡಂ ಕೂಡದಾ
ಗಳಣಂ ಕೂಡದು ಬಾಳ್ವ ಮಾತೆನಗದರ್ಕಾಗೇನನೇನೆಂಬೆನೆಂ
ದೊಳಕೊಂಡಿರ್ಪುದಱಿಂದಮಾದುದೆನಗೀ ವಾಚಂಯಮಂ ಸಂಯಮಂ ೫೪

ಎನ್ನೆರ್ದೆಯೊಳ್ ಲಲಿತಾಂಗದೇವನಾ ಸೌಂದರರೂಪಮಿನ್ನುಂ ಶಾಸನಂ ಬರೆದುದು; ಬೆಚ್ಚುದು, ಅಚ್ಚಿೞಿದುದು. ಅದಱಿಂದಮೆನ್ನ ಬಯಕೆಯಪ್ಪುದು ಮಾನಸರ ದೆಸೆಯೊಳ್ ತೀರ್ವುದಲ್ತು. ಇದಂ ಮದೀಯ ಮಾನಸದೊಳೆ ತಾಳ್ದು ಪಿರಿದುಮನುರಾಗದಿಂದಂ ಬರೆದ ಪಟಮನಿದನರ್ಚಿಸಿ ಕನ್ಯಾಬ್ರತದೊಳೆ ಕಾಲಮಂ ಕೞಿಪುವೆಂ." ಎಂದು ನುಡಿದು ಮಾಣ್ದ ಕನ್ನೆಯ ನುಡಿಯಂ ಪಂಡಿತೆ ಮನದೆಗೊಂಡು, "ನಿನ್ನ ನಿರ್ವೇಗಮನಱಿದೆಂ. ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ. ನಿನ್ನ ನಿಯನನಱಸಲ್ ಸಾರ್ವೆಂ. ಚಿಂತಿಸದಿರ್." ಎಂದು ಮುನ್ನಮಾ ಪಟದೊಳಾಕೆ ಬರೆಯದೆ ಬಂಚಿಸಿದ ಅವಿನಾಣಂಗಳನಱಿಯೆ ಬೆಸಗೊಂಡು ಪಟಮಂ ಕೈಕೊಂಡು ಪೋಗಿ ಮಹಾಪೂತ ಜಿನಾಲಯಕ್ಕೆ ಬಂದು ಕೆಲದ ಪಟ್ಟಸಾಲೆಯ ಮುಂತೆ ನೇಱಿ ಕಾರ್ಯಸಿದ್ಧಿಯನೆ ಪಾರುತ್ತಮಿರ್ದಳ್.

ಇತ್ತ ವಜ್ರದಂತಂ ಷಟ್ಖಂಡಮಂಡಿತ ವಸುಂಧರಾತಳಮಂ ಬಾಯ್ಕೇಳಿಸಿ ನಿಜಾನ್ವಯ ರಾಜಧಾನಿಯಂ ಪೊಕ್ಕು ಚಕ್ರವರ್ತಿಪದದೊಳ್ ನಿಂದು ಮಗಳ ಮದುವೆಯಂ ಮಾಡಲೆಂದು ಬಱಿಯನಟ್ಟಿದಾಗಳ್ ಮೆಲ್ಲನೆ ಬಂದು ಕಾಲ್ಗೆಱಗೆ ಕಲ್ಯಾಣ ಭೋಗ ಭಾಗಿಯಾಗೆಂದು ಪರಸಿ ತೞ್ಕೈಸಿಕೊಂಡು, "ಮಗಳೆ, ನಿನಗೆ ಮನಸ್ತಮವಿಾಗಳೆ ಪಿಂಗುಗೆ. ನಾಳೆ ನಾಡಿದು ಮಹೋತ್ಸವದಿಂ ಜೀವಿತೇಶನೊಳ್ ಕೂಡುವೈ. ಯಶೋಧರಗುರುಗಳ ಕೇವಳಜ್ಞಾನೋತ್ಪತ್ತಿಯೊಸಗೆಯೊಳವಿಚಳ ಭಕ್ತಿಯೊಳೆನಗೆ ಪುಟ್ಟಿದವಧಿ ಜ್ಞಾನದೊಳೆನ್ನ ನಿನ್ನ ನಿನ್ನ ಕಾಂತನ ಜನ್ಮಾಂತರಂಗಳನಱಿದೆನ್. ನೆನೆವೋ ನೀಂ?" ಎನೆ, "ಪೂರ್ವ ಜನ್ಮ ಸಂಸ್ಕಾರಮದೆಲ್ಲಮಂ ನೆನೆವುದೆನ್ನ ಮನಂ. ಮದೀಯ ಪ್ರಾಣವಲ್ಲಭನಪ್ಪ ಲಲಿತಾಂಗದೇವನೆಲ್ಲಿ ಪುಟ್ಟಿದಂ ಬೆಸಸಿಂ" ಎಂಬುದುಂ, "ಆನ್ ನಿಮ್ಮಿಂ ಮುನ್ನಂ ಅಚ್ಯುತಕಲ್ಪದಿಂ ಪರಿಚ್ಯುತನೆನಾಗಿ ಬಂದಿಲ್ಲಿ ವಜ್ರದಂತನಾದೆಂ. ನಿನ್ನ ದೇವನಪ್ಪ ಲಲಿತಾಂಗದೇವನುವಿಾಶಾನ ಕಲ್ಪದಿಂ ಬಂದು ಉತ್ಪಳಖೇಟಮನಾಳ್ವ ಎನ್ನ ಮೆಯ್ದುನನಪ್ಪ ವಜ್ರಬಾಹುಗಮೆನ್ನ ತಂಗೆಯಪ್ಪ ವಸುಂಧರೆಗಂ

ವಜ್ರಜಂಘನೆಂಬ ತನುಜನಾದಂ. ಆ ಸ್ವಯಂಪ್ರಭೆಯೆ ನೀನುಮೆನಗೀಗಳ್ ಶ್ರೀಮತಿಯಾಗಿ ಪುಟ್ಟಿದೌ. ನಿನ್ನ ನಲ್ಲನಿಂದೆ ಬಂದಪಂ. ಪಂಡಿತೆಯುಮಾ ವೃತ್ತಾಂತದುತ್ಸವಮಂ ಕೊಂಡು ಬರ್ಕುಂ" ಎಂದು ಕನ್ಯಾಂತಃಪುರಕ್ಕೆ ಪೋಗಲ್ವೇೞ್ದು ವಜ್ರದಂತನಾಸ್ಥಾನದಿಂದೆೞ್ದು ಪೋದಂ.

## ಚಿತ್ರಪಟ ವ್ಯತಿಹಾರಂ

ಅನ್ನೆಗಮಿತ್ತ ಪಂಡಿತೆಯುಂ ತನ್ನ ಪೂಣ್ದು ಪೋದ ಕಜ್ಜಮಂ ಸಾಧ್ಯಂ ಮಾಡಿ ಬಂದು ಶ್ರೀಮತಿಯಂ ಕಂಡು, "ನಿನ್ನ ಬರೆದ ಪಟಮಂ ಮಹಾಪೂತ ಜಿನಾಲಯದ ಮುಂದೆ ನೇಱಿದಾಗಳ್, ವಾಸವ ದುರ್ದಂತರೆಂಬರ್ ದುರ್ವಿದಗ್ಧರ್ ಮೆಲ್ಲನೆ ಸಾರ್ದು ನೋಡುವಲ್ಲಿ ವಾಸವನದಂ ನೀಡುಂ ಭಾವಿಸಿ ನೋಡಿ, 'ಇದು ನಾಕಲೋಕವಿಭವಂ ಮದ್ವೃತ್ತಕಂ. ಈ ಮೃಗಶಾಬೇಕ್ಷಣಿ ಮನ್ಮನೋರಮೆ. ಎಲ್ಲಿ ಪುಟ್ಟಿದಳೊ ಮತ್ಪ್ರಾಣೇಶೆ' ಎಂದಿಲ್ಲದುಬ್ಬೆಗಮಂ ತಾಳ್ದಿದಂ. ದುರ್ದಂತನಳೀಕೋದಂತಂಗಳಿನಾಱಿಸುತ್ತಿರ್ಪುದುಮಾಂ ಪೋಗಿ, 'ಏಕಿನಿತಾಕುಳಂ ಪ್ರಭುಗೆ? ಪಟಮೆಮ್ಮಯ ಕೂಸಿನ ಚಿತ್ರಂ. ಈಕೆಯೊಳ್ ಪೂರ್ವಭವಾನುರಾಗಮುಳ್ಳೊಡೆ ಆಕೆಯ ತನ್ನ ಬಯ್ಕೆಯವಿನಾಣಮಂ ಪೇೞ್ಗೆ' ಎಂಬುದುಂ ನಾಣ್ಚಿ ಇರ್ವರುಂ ಪೋಪುದುಂ, ಅನ್ನೆಗಂ ಒರ್ವಂ ರಾಜಕುಮಾರಂ

ಧನು ಕಾಮಂಗಿಕ್ಷುದಂಡಂ ಪಟಯಿಗೆ ಮಕರಂ ಬಾಣಸಂಘಾತಮಬ್ಜಂ
ನನೆಯೆಂಬೀ ಚಿಹ್ನಮಿಲ್ಲೆಂಬನಿತೆ ಮನಸಿಜಾಕಾರಮಾಕಾರಮೇಂ ಜಾ
ಣನೊ ಧಾತ್ರಂ ರೂಪನಿಷ್ಪಾದನ ವಿಧಿಯೊಳಿವಂ ಮುನ್ನ ಮೇಂ ನೋಂಪಿಯಂ
ನೋಂತನೊ ಪೇೞೆಂಬಂತೆ ಬಂದಂ ಸುಕವಿಜನಮನೋಮಾನಸೋತ್ತಂಸ
[ಹಂಸಂ ೫೫

ಅಂತು ಬಂದು ಶ್ರೀಮಜ್ಜಿನಭವನಮಂ ಮೂಮೆ ಬಲಗೊಂಡು ಸಿದ್ಧಶೇಷೆಯಂ ಕೊಂಡು ಪೊಱಮಟ್ಟು, ಇದಿರೊಳ್ ನರರ ಖಚರರ ಗುಂಡಂ ಕಂಡೀ ನೆರವಿಯೇನಂ ನೋಡಿದಪ್ಪುದೆಂದೆಯ್ದೆವಂದು ನೋೞ್ಪನ್ನೆಗಮಲ್ಲಿ ಪಸರಿಸಿದ ಚಿತ್ರಪಟಮಂ ಭೋಂಕೆನೆ ಕಂಡು ನೀಡುಂ ಭಾವಿಸಿ ನೋಡಿ ಇರುಳ್ ಕಂಡ ಕನಸಂ ಮಱುದೆವಸಂ ನೆನೆವಂತೆ ಸುರಲೋಕಸುಖಾನುಭವಮನಾಗಳೆ ನೆನೆದು,

'ಎಲೇ ಬಗೆದೆನೀಗಳೀ ಬರೆದ ಕಲ್ಪವಿಮಾಶಾನವಿಾ
ಚಲಲ್ಲುಳಿತ ಕೇತನಂ ಸುರವಿಮಾನವಾ ಶ್ರೀಪ್ರಭಂ
ಸಲೀಲವದನಾರವಿಂದವಿಮದು ದೇವವೃಂದಂ ಲಸ
ದ್ವಿಲಾಸ ದರಹಾಸ ರಮ್ಯಮಿದು ದಿವ್ಯಕಾಂತಾಜನಂ ೫೬

ಇದಂದು ಲಲಿತಾಂಗದೇವನೆನೆ ಸಂದ ಮದ್ರೂಪವಿಾ
ಮದಾಲಸ ವಿಲೋಲ ಲೋಚನೆ ದಲೆನ್ನ ಮಾದೇವಿ ತ
ಪ್ಪದೀ ಲಲನೆ ತತ್ಸ್ವಯಂಪ್ರಭೆಯೆ ನೋಟ್ಪೊಡೀ ಚಿತ್ರಮಿಂ
ತಿದಾಕೆಯದೆ ಬಲ್ಮೆ ಪೇೞ್ ಪೆಱರ್ಗಮಿಂತುಟೊಂದಕ್ಕುಮೇ ೫೭

ಮತ್ತಂ ಕನಕ ಕದಳೀವನದೊಳಗಣ ಮಣಿಭವನದೊಳಗೆ ಮನವೊಲ್ವಿನೆ ಗಮೆನ್ನ ಸೋಂಕಿನೊಳ್ ಕುಳ್ಳಿರ್ದು ವೀಣೆಯಂ ಬಾಜಿಸುವ ರೂಪಮುಮಂ ಅಚ್ಯುತೇಂದ್ರ ಪೂಜಾವಿಳಾಸಮುಮಂ ಮಂದರ ಕಂದರ ವಿಹಾರಮುಮಂ ಇಲ್ಲಿಯೇ ಕಾಣಲಾದಪುದು; ಪೆಱವುಮೆನ್ನಾಕೆಯಱಿಕೆಯವಿನಾಣಂಗಳ್ ಕೆಲವು ಬರೆದುವಿಲ್ಲ' ಎಂದು ತನ್ನೊಳೆ ಬಗೆದು, 'ಹಾ! ಸ್ವಯಂಪ್ರಭೇ!' ಎಂದು ಮೂರ್ಛೆವೋಪುದುಂ, ಪರಿಜನಂ ತುರಿಪದೆ ಕರಕಾಂಬುವಂ ತಳಿದೆಟ್ಟಿಱಿಸೆ ಕುಮಾರಂ ಮೂರ್ಛೆ ತಿಳಿದು, 'ಈ ಪಟಮನಿಲ್ಲಿಗಾರ್ ತಂದರ್?' ಎಂಬನ್ನೆಗಂ ಭವದೀಯವಲ್ಲಭಂ ಲಲಿತಾಂಗಚರ ವಜ್ರಜಂಘನೆಂಬುದನಾಂ ತಿಳಿದು ಆ ಮಹಾನುಭಾವನಂ ಬೇಗಮೆಯ್ದೆ ಪೋಗಿ,

'ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚಿ ಬಂ
ದುದು ಧಾತ್ರಂಗಮಳಂಕೆಗೊಂಡ ಪಿರಿದುಂ ಚಿಂತಾಂತರಂ ಪೋಯ್ತು ಕೂ
ಡಿದುದಾ ಶ್ರೀಮತಿಗಂ ಮನೋರಥಫಲಂ ಶ್ರೀ ವಜ್ರದಂತಂಗಮಾ
ದುದು ರಾಗೋತ್ಸವಮೆಲ್ಲಮಿಲ್ಲಿಗೆ ಜಯಂ ಭದ್ರಂ ಶುಭಂ ಮಂಗಳಂ ೫೮

ನೀಂ ಲಲಿತಾಂಗಚರನ್. ಸ್ವಯಂಪ್ರಭಾದೇವಿ ನಿಮ್ಮ ಮಾವಂ ವಜ್ರದಂತ ಚಕ್ರವರ್ತಿಗಂ ನಿಮ್ಮತ್ತೆ ಲಕ್ಷ್ಮೀಮತಿ ಮಹಾದೇವಿಗಂ ಶ್ರೀಮತಿಯೆಂಬ ಮಗಳಾಗಿ ಪುಟ್ಟಿದಳ್. ಆಕೆ ನಿನ್ನೊಳಾದ ವೃತ್ತಾಂತಮನೀ ಪಟದೊಳ್ ಬರೆದು ಆನ್ ತನಗೆ ಪರಮ ವಿಶ್ವಾಸ ಭೂಮಿಯೆನಾಗಿ ಕಿಱಿಯಂದಿಂದಿತ್ತ ನಡಪಿದೋದಿಸಿದ ದಾದಿಯೆನಪ್ಪುದಱಿಂ ಈ ಪಟಮಂ ಪ್ರಾಣಮನೆ ಕೈಯೆಡೆಗುಡುವಂ

ತೆನ್ನ ಕೈಯೊಳ್ ಕೊಟ್ಟು ಮದೀಯ ಪ್ರಾಣವಲ್ಲಭನನೆಲ್ಲಿ ಪೊಕ್ಕುಮೆಲ್ಲಂದದೊಳ ಮಱಸೆಂದಟ್ಟಿದೊಡೆ ಬಂದು ಇದನಿಲ್ಲಿ ಪಸರಿಸಿರ್ದೆಂ. ಮದೀಯ ಕ್ಲೇಶಫಳ ಮಿಂದು ನಿನ್ನ ಬರವಿನಿಂದಂ ಸಫಳಮಾದುದೆ'ಂಬುದುಂ ಆತಂ ರೋಮಾಂಚ ಕಂಚುಕಿತ ಶರೀರನಾಗಿ,

'ನಿನಗಾನೇನೆಂಬೆನೆನ್ನಿರ್ದಿರವನಱಿದು ನೀನಿರ್ದೆಯಿನ್ನಾಕೆಗಂ ನೀಂ ಮನದನ್ನಯ್ ತೋಱು ನಿನ್ನೀ ಪಟಮನೆನಗದಂ ನೋಡಿ ಮತ್ಕಾಂತೆಯುಂ ಕಾಣ್ಬೆನೆಗಂ ಸೈರಿಪ್ಪೆನೆನ್ನೀ ಬರೆದ ಪಟಮುಮಂ ಕೊಂಡು ಪೋಗಾಕೆಗೆಂದಿಂತಿನಿತುಂ ವೃತ್ತಾಂತಮಂ ನಿನ್ನಿನಿಯನಱಿಯೆ ಪೇೞ್ದಟ್ಟಿದಂ ಲೋಲನೇತ್ರೇ'' ೫೯

ಎಂದು ಪ್ರಿಯತಮನ ಬರೆದ ಸಾಭಿಜ್ಞಾನ ಪಟಮನೀವುದುಮಾಕೆಯುಮದಂ ನಿಮಿರ್ಚಿ ನೋಡಿ,

ಅವಿನಾಣಮನಿತುಮೆರ್ದೆವುಗೆ
ಕಿವಿವುಗೆ ಪಂಡಿತೆಗೆ ನುಡಿದ ನಲ್ಲನ ನುಡಿ ತ
ಳ್ತವಿರಳ ರೋಮಾಂಚದೆ ಮಾ
ಧವ ಸಮಯದೊಳಲರ್ದ ಚೂತಲತೆಯನೆ ಪೋಲ್ತಳ್ ೬೦

ಶ್ರಿಮತೀ ವಜ್ರಜಂಘ ವಿವಾಹಂ

ಅನ್ನೆಗಮತ್ತ ಶ್ರೀಮತೀ ವಜ್ರಜಂಘರ ಚಿತ್ರಪಟ ವ್ಯತಿಹಾರಮಂ ವಜ್ರಜಂಘಾನುಚರರಿಂದಮಱಿದು ವಜ್ರಬಾಹು ಮಹೀನಾಥಂ ಪುಂಡರೀಕಿಣಿಗೆ ಬಂದು ಮುಂದಟ್ಟಿದ ದೂತಂಗೆ ವಜ್ರದಂತ ಚಕ್ರವರ್ತಿಯುಂ ಮೆಚ್ಚಿತ್ತು ಪರಿವಾರ ಪರಿವೃತನಾಗಿ ವಜ್ರಬಾಹು ಕ್ಷಿತಿಪತಿಗಿದಿರ್ವೋಗಿ ವಿಜಯ ಗಜೇಂದ್ರಮನೇಱಿಸಿಮುಂದಿಟ್ಟೊಡಗೊಂಡು ಬಂದು ವಿವಿಧ ವಿಶೇಷ ಸತ್ಕಾರಂಗಳಿಂ ಸಂತಸಂಬಡಿಸಿ "ನಿನಗಾವುದು ಮನೋರಥಮದಂ ಬೇಡಿಕೊಳ್ಳೆ" ನೆ,

"ಎನಗರಿದುಂಟೆ ನಿಮ್ಮ ದಯೆಯಿಂದುೞಿದಾವುದುಮೆಲ್ಲಮುಂಟು ನೀ
ನೆನಗೆ ನರೇಂದ್ರಮೌಳಿ ಮಣಿ ರಾಜಿ ವಿರಾಜಿತ ಪಾದಪೀಠ ನೆ
ಟ್ಟನೆ ದಯೆಗೆಯ್ವೊಡೀ ನಿಜ ತನೂಜೆಯನುತ್ಸವ ಮಂಗಳಾನಕ
ಧ್ವನಿ ದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್" ೬೧

ಎಂಬುದುಂ, ಚಕ್ರಧರಂ,

"ಒಡೆಯಂ ಕೂಸಿಂಗದೊಂದೇ ಕುಲದ ಚಲದ ಪೆಂಪೊಂದೆ ಚೆಲ್ವೊಂದೆ ಸಂದೊಳ್ನುಡಿಯೊಂದೇ ವಿದ್ಯೆಯೊಂದೇ ಪುದಿದೊದವಿದ ಜನ್ಮಾಂತರಸ್ನೇಹಮೊಂದೇ ನುಡಿಯಲ್ಪಿಕ್ಕಲ್ಕದೊಂದಲ್ತೆನಲೆಡೆ ಪೆಱರ್ಗಿನ್ನಿಲ್ಲ ಮುನ್ನಾ ವಿಧಾತ್ರಂ ಕುಡಲಿರ್ದಂ ಕನ್ನೆಯಂ ಪೇೞ್ ನಿನಗಮೆನಗಮೇನ್ ದಂದುಗಂ ವಜ್ರಬಾಹೂ" ೬೨

ಎಂದು ನಿಜ ರಾಜಧಾನಿಯೊಳೊಸಗೆಯಂ ಮಾಡಿ ವಧೂವರರಿರ್ವರುಮಂ ಮಂಗಳ ಜಳಂಗಳಿಂದಂ ಮಿಸಿಸಿ ನೆಱೆಯೆ ಕೈಗೆಯ್ದು ವಿವಾಹಮಂಟಪದ ನಡುವಣ ಮಣಿಮಯ ವೇದಿಕೆಯ ಮೇಲೆ ಪಾಸಿದ ದಳಿಂಬದೊಳಿರಿಸಿದಾಗಳ್

ನೆಱೆದತ್ತೆತ್ತಾನುಮಿಾ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕಣ್ದೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತುಂ ರಾಗಮಂ ಬೀಱಲಾದಲ್ಕಱ ಪೆಂಪಂ ತೋಱಲಾಗಳ್ ಕನಕ ಕಳಶಮಂ ತಾನೆ ಬಂದೆತ್ತಿ ಕೈನೀರೆಱೆದಂ ಶ್ರೀ ವಜ್ರದಂತ ಕ್ಷಿತಿಪತಿ ಸತತೋತ್ಸಾಹ ಸಂದೋಹದಿಂದಂ ೬೩

ಅಂತು ಪಾಣಿಗ್ರಹಣಂಗೆಯಿಸಿದಾಗಳ್ ಶ್ರೀಮತಿ

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಲ್ದ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬೆಚ್ಚನೆ ಬಸಿವಿಂದುಕಾಂತ ಕರ ಸಂಕುಳಮೊಯ್ಯನವುಂಕಿ ಸೋಂಕೆ ಸೋಂಕಿನೊಳೊಱೆವಿಂದುಕಾಂತ ಮಣಿಪುತ್ರಿಕೆಯಂದದಿನೊಪ್ಪಿ ತೋಱಿದಳ್ ೬೪

ವಜ್ರಜಂಘಂ

ಪುಳಕಪ್ರೋದ್ಭೇದ ಘರ್ಮೋದಕ ವಿಸರಮನೊತ್ತಂಬದಿಂ ತಾಗೆಯುಂ ನಿಶ್ಚಳ ಧೈರ್ಯವ್ಯಾಜ ತಿರ್ಯಗ್ವಳನ ತರಳಿತಂ ದೃಷ್ಟಿ ಪೇಟ್ಟಿತ್ತು ನಿರ್ವ್ಯಾಕುಳಮಾಗಳ್ ರಾಜಪುತ್ರ ಸ್ಮಿತ ಮಧು ಮಧುರಾಪಾಂಗ ಜೈತ್ರಾಂಗಜಾಸ್ತ್ರಂಗಳ ಕೋಳಂ ನೂತನ ಪ್ರೇಮದೆ ನಿಮಿರ್ವೆಡೆಯೊಳ್ದೃಷ್ಟಿಯಂ ಕಾವನಾವಂ ೬೫

ಅಂತಭಿನವ ಸಂಗ ರಮಣೀಯತರ ಮುಗ್ಧವಧೂ ವದನ ವಿಲೋಕನ ಸುಖಮನನುಭವಿಸಿ,

"ಇನಿವಿರಿದೊಂದು ಮೇಳಮುವೊಡಂಬಡುವಲ್ಕಿಱುಮೆನ್ನ ನಿನ್ನ ಮು
ನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದೀ ಭವದಿಂದಮಾದ ವಾ
ಸನೆ ಮಱುಮೆಯ್ಗ್ಗಮಕ್ಕುಮದಱಿಂದೆನಗಂ ನಿನಗಂ ಸಮಂತು ಮು
ನ್ನಿನ ಭವವಿಾ ಭವಂ ಮಱುಭವಂ ಸಫಲಂ ಮೃಗಲೋಲಲೋಚನೇ" ೬೬

ಎಂದು ಕೆಚ್ಚುವಿರ್ದ ಮಚ್ಚುಮನಳವಿಗಱಿದಲಂಪುಮಂ ಬಳವಿವಡೆದಲ್ಕಿಱು ಮನೋರೊರ್ವರೊಳ್ ನೆಱೆದು ನಿತ್ಯೋತ್ಸವಂಗಳ್ ಕೆಲವು ಕಾಲಂ ಸಲೆ, ಸಲ್ಗೆವೆರಸಿದ ತನ್ನ ನಣ್ಪಂ ತೋಱಿ ವಜ್ರಬಾಹುಮಹೀಪತಿಯುಂ ಕರೆದು, "ಎನ್ನ ತನಯಂ ಅಮಿತತೇಜಂಗೆ ಭವದೀಯಾತ್ಮಜೆಯುನನುಂದರಿಯಂ ಕುಡು" ಎಂದು ಬೆಳ್ಗೊಡೆಯಾತನಲ್ತಿವಡೆ ಕೊಳ್ಕೊಡೆಗೆ ವಜ್ರಬಾಹು ಕುಡೆ ವಿವಾಹ ಮಂಗಳಂ ರಯ್ಯಮಾಯ್ತು. ಆ ವಿವಾಹ ಕಲ್ಯಾಣಾನಂತರಂ ನಿಜ ತನೂಜೆಯುನಳಿಯನೊಡನೆ ಕಟಿಪುವುದ್ಯೋಗಮನೆತ್ತಿಕೊಂಡು ಯಶೋಲಾಂಛನಂ ಶ್ವೇತಾತಪತ್ರಂ ಕಳೆದುಱಿದುವುಮನಿನಿತಾನುಂ ವಸ್ತುವಂ ತರಿಸಿ ಕೊಟ್ಟು ಪಂಡಿತೆಯುಮನೊಡವೋಪಂತು ಮಾಡಿ ರಾಜಾಧಿರಾಜನಳಿಯನ ಮೊಗಮಂ ನೋಡಿ,

"ಬಗೆದುಂ ನಿನ್ನನ್ವವಾಯೋನ್ನತಿಯನಿವಳತಿ ಸ್ನೇಹಸಂಬಂಧಮಂ ನೀಂ
ಬಗೆದುಂ ಸಂದೆಮ್ಮ ನಣ್ಪಂ ಬಗೆದುಮಱಿಯದೇನಾನುಮೆಂದಾಗಳುಂ ಮೆ
ಲ್ಲಗೆ ನೀಂ ಕಲ್ಪಿಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ
ಮೃಗಶಾಬೇಕ್ಷಾಕ್ಷಿಯಂ ಮನ್ನಿಸುವುದಿನಿತನಾಂ ಬೇಡಿದೆಂ ವಜ್ರಜಂಘಾ" ೬೭

ಎಂದು ನುಡಿದು ಲಕ್ಷ್ಮೀಮತಿಮಹಾದೇವಿಯುಂ ತಾನುಮಾತ್ಮೀಯ ಪ್ರಿಯಾತ್ಮಜೆಯ ಮೊಗಮನಲ್ಕರ್ತು ನೋಡಿ,

"ಮನಮಱಿದಂಜಿ ಬೆರ್ಚಿ ಬೆಸಕಯ್ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ
ದನರನಗಣ್ಯಪುಣ್ಯಧನರಂ ಪಡೆ"ಯೆಂದಮರ್ದಪ್ಪಿಕೊಂಡು ತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ೬೮

ಅಂತು ವಜ್ರದಂತ ಚಕ್ರವರ್ತಿ ಪರಿವಾರಂಬೆರಸು ಪೋಗಿ ಕಿಱಿದಂತರಂ

ಬರಂ ಕಟಿಸಿ ಮಗುಳೆ, ವಜ್ರಬಾಹುಮಹೀಭುಜಂ ವಜ್ರಜಂಘನುಮಂ ಶ್ರೀಮತಿಯುಮಂ ಮುಂದಿಟ್ಟು ಕತಿಪಯ ಪ್ರಯಾಣಂಗಳಿಂ ಪೋಗಿ ಉತ್ಪಳ ಖೇಟಮಂ ಪುಗುವಾಗಳ್ ಅಪೂರ್ವವಧೂವರರಿರ್ವರಂ ನೋಡಲೆಂದು ಎತ್ತಂ ನೆರೆದು, [ಸಿರ್ದಿ

"ದಿವಿಜೇಂದ್ರಾವಾಸದೊಳ್ ಮುನ್ನೊಡನೆ ದಿವಿಜಭೋಗಂಗಳಂ ಭೋಗಿ
ಭವದೊಳ್ ಬಂದಿಲ್ಲಿ ಜಾತಿಸ್ಮರರೆನೆ ನೆರೆದೋರೊರ್ವರೊಳ್ ಮತ್ತಮತ್ಯ
ತ್ಸವದಿಂದಂ ಮರ್ತ್ಯಭೋಗಂಗಳನನುಭವಿಸಲ್ ನೋಂತರಿಂತೀಗಳಿಂತುಂ
ತವರಂತೇಂ ಪುಣ್ಯಮಂ ಪುಂಜಿಸಿದರೊ ಪಿರಿದುಂ ಶ್ರೀಮತೀವಜ್ರಜಂಘರ್" ೬೯

ಎಂದತಿ ಪ್ರಮೋದ ಮತ್ತ ಪುರಜನಾನುರಾಗದೊಡನೆ ರಾಜಮಂದಿರಮಂ ಪೊಕ್ಕು ಪಂಡಿತೆಗೆ ವಿವಿಧವಿನೋದಂಗಳಂ ತೋಱಿ ಮೆಱೆದು ದಾನಸನ್ಮಾನಾದಿಗಳೊಳ್ ಸಂತೋಷಂಬಡಿಸಿ ಪುಂಡರೀಕಿಣಿಗೆ ಕಟಿಸಿ ಕೆಲವು ದಿವಸ ಮಿರ್ಪನ್ನೆಗಂ, ಶ್ರೀಮತಿಗೆ ಗರ್ಭಚಿಹ್ನಂಗಳ್ ತೋಱೆ, ಅನುಕ್ರಮದಿಂ ನಾಲ್ವತ್ತೊಂಬತ್ತುಮಳ್ಗಳ್ ಪುಟ್ಟಿದುವು.

ಅನ್ನೆಗಂ ವಜ್ರಬಾಹುಮಹಾರಾಜನೊಂದು ದಿವಸಂ ಒಂದು ಸೌಂದರ ನೀರದಮಂ ನೋಡಿ ಆದರಱಂದಮಂ ಬರೆವನ್ನೆಗಂ ಶರದಂಬುಧರಂ ಭೋಂಕೆನೆ ಕರಗಿದೊಡೆ, ಆ ಜವಂಜವವಿಭಾವಕ್ಕೇವಯಿಸಿ ವಜ್ರಜಂಘನೊಳ್ ಧರಾಭಾರಮಂ ನಿಱಿಸಿ, ವಸುಂಧರೆವೆರಸು ಪಲಂಬರರಸಿಯರುಂ ಶ್ರೀಮತೀತನೂಜರ್ ನಾಲ್ವತ್ತೊಂಬತ್ತುಮಳ್ಗಳುಂಬೆರಸು ಪರಿಚ್ಛೇದಿಸಿ ಯಮಧರಮುನೀಂದ್ರ ಪಾದ ಪದ್ಮೋಪಕಂಠಮೊಳ್ ಜಾತರೂಪಧರನಾದಂ. ಇತ್ತ ವಜ್ರದಂತ ಚಕ್ರವರ್ತಿಯುಂ ಒಂದು ದಿವಸಂ ಲೀಲಾಕಮಳಮಂ ಲೀಲೆಯಿಂ ತಿರಿಪಿದಾಗಳ್ ಮುನ್ನಿನ ದಿವಸಂ ಮಡಿದಳಿ ತೊಟ್ಟನೆ ಬೀೞೆ, ತಲೆಯಂ ತೂಗಿ ನಿರ್ವಾಣ ಸಾಮ್ರಾಜ್ಯಮನೆ ಬಯಸಿ ಅಮಿತತೇಜಂಗಮನುಂದರಿಗಂ ಪುಟ್ಟಿದ ಪುಂಡರೀಕನೆಂಬ ಬಾಳಕನಂ ಸಂತಾನ ಪಾಲನಾರ್ಥಂ ನಿಱಿಸಿ, ಅಂಗನಾಜನಮುಂ ಮಕುಟಬದ್ಧರುಂ ಪಂಡಿತೆಯುಂ ಬೆರಸು ಯಶೋಧರ ಮುನೀಂದ್ರ ಪಾದ ಪದ್ಮೋಪಾಂತದೊಳ್ ದಿಗಂಬರ ವಿಳಾಸದಿಂ ತ್ರಿಲೋಕ ಶಿಖರಿ ಶೇಖರನಾದಂ.

ಚಾರಣದರ್ಶನಂ

ಲಕ್ಷ್ಮೀಮತಿ ಮಹಾದೇವಿಯುಮನುಂದರಿವೆರಸು ಪುಂಡರೀಕನಂ ಕೈಕೊಂ

ಡಿರೆ, ಅದಂ ಕಂಡು ಕಪ್ಪವಿಾಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮಂ ಅಱಿದು ಲಕ್ಷ್ಮೀಮತಿ ಮಹಾದೇವಿ ವಜ್ರಜಂಘಂಗೆ ಬಱಿಯನಟ್ಟಿದೊಡೆ, ಧರಣೀಶ್ವರಂ ಚತುರಂಗ ಬಲಂಬೆರಸು ಪುಂಡರೀಕಿಣೀಗಭಿಮುಖನಾಗಿ ಪಯಣಂಬಂದು ಬೀಡಂ ಬಿಟ್ಟಿರ್ಪನ್ನೆಗಂ, ಧರ್ಮವರ ಸಾಗರಸೇನರೆಂಬ ಗಗನಚಾರಣರ್ ಕಾಂತಾರ ಚರ್ಯಾ ಮಾರ್ಗದೊಳ್ ತಮ್ಮಾವಾಸಕ್ಕೆ ಬರ್ಪರಂ ಶ್ರೀಮತಿಯುಂ ತಾನುಂ ಕಂಡು, ಸಂಭ್ರಮಂಬೆರಸಿದಿರಂ ನಡೆದು ಬದ್ಧಾಂಜಲಿಪುಟರಾಗಿ ನಿಲ್ಕೆಂದು ನಿಲಿಸಿ ಮುನಿ ಯುಗಕ್ಕೆ ದಾನಮನಿತ್ತರ್.

ಸುರತೂರ್ಯ ಧ್ವಾನಮೆಯ್ದುತ್ತಿರ್ಪಲರ ಸರಿ ಪೊದಱ್ದಿರ್ದ ರೈಧಾರೆ ದೇವೇಂ
ದ್ರರಹೋ ದಾನ ಪ್ರಸಿದ್ಧ ಧ್ವನಿ ಸುರಭಿ ಸಮಿಾರ ಪ್ರಚಾರಂ ಜಗಕ್ಕ
ಚ್ಚರಿ ಪಂಚಾಶ್ಚರ್ಯಮೆತ್ತಂ ನೆಗೞೆ ಶಿಬಿರದೊಳ್ ವಿಸ್ಮಯಾಕ್ರಾಂತನಿರ್ದಂ
ಪಿರಿದೊಂದಾನಂದದಿಂದಂ ಸುಕವಿಜನ ಮನೋ ಮಾನಸೋತ್ತಂಸ ಹಂಸಂ ೭೦

ಮತಿವರಾದಿಗಳ ಭವಾವಳಿ

ಅರಸಂ ತನ್ಮುನಿಗಳ ಪಾದಪ್ರಕ್ಷಾಳನೋದಕದೊಳ್ ಪೊರಳ್ದು ಪುಷ್ಪ ವರ್ಷದ ಪೂಗಳೊಳ್ ಪುದಿದು ದಾನಾನುಮೋದ ಪ್ರಭಾವದಿಂದುಪಶಮ ಭಾವ ಮಂ ತಾಳ್ದಿರ್ದ ಶಾರ್ದೂಲ ವರಾಹ ಗೋಲಾಂಗೂಲ ನಕುಲಂಗಳಂ ನೋಡು ತ್ತುಮವರ್ಕೆ ಭಕ್ಷ್ಯಧೂಪಂಗಳಂ ನೀಡುತ್ತುಮಿರ್ದು ಆತ್ಮೀಯ ಮಂತ್ರಿಸೇನಾ ನಾಯಕ ಪುರೋಹಿತ ಶ್ರೇಷ್ಠಿ ಪದ ನಿಯುಕ್ತರಪ್ಪ ಮತಿವರಾಕಂಪನಾನಂದ ಧನ ಮಿತ್ರರೆಂಬ ನಾಲ್ವರ ಭವಾವಳಿಯಂ ಬೆಸಗೊಳೆ ದಮವರಮುನಿ ಅವಧಿ ಬೋಧದಿಂ ನುಡಿದಂ:

"ಈ ಮತಿವರನೀ ಭವಕ್ಕಯ್ದನೆಯ ಭವದೊಳ್ ಅತಿಗೃದ್ಧನೆಂಬರಸನಾಗಿ ಲೋಭಗ್ರಸ್ತನುಪಾದ್ರಿಯೊಳ್ ದ್ರವಿಣಮಂ ಬಯ್ತು ತನ್ನುಸಿರ್ ತವೆ, ಪಂಕ ಪ್ರಭೆಯೊಳ್ ದುಃಖಾಗ್ನಿಯೊಳ್ ಬೆಂದು ಮತ್ತಮಲ್ಲಿಂ ಪೊಱಮಟ್ಟು ಮುನ್ನ ಧನಮಂ ಬಯ್ತಿರ್ದರಣ್ಯದೊಳ್ ಪುಲಿಯಾಗಿ ಪುಟ್ಟಿ, ತನ್ಮಂಡಲನಾಥಂ ಪ್ರೀತಿ ವರ್ಧನಂ ಆ ನಗದ ಬಳಸಿ ಬೀಡಂ ಬಿಡೆ, ಪಿಹಿತಾಸ್ರವಮುನಿಪನರಸನ ಬೀಡಂ ಚರಿಗೆವೊಕ್ಕಂ. ನೃಪನಿದಿರಂ ಬಂದಲ್ತಿಯೊಳಱಿದು ನಿಱಿಸೆ ದಾನೋನ್ನತಿ ಯೋಳ್ ಪಂಚಾಶ್ಚರ್ಯಂ ನೆಗೆದತ್ತು. ಆಗಳ್ ಆ ಪರ್ವತದೊಳಿರ್ದ ಶಾರ್ದೂಲಂ

ಜಾತಿಸ್ಮರನಾಗಿ ಪರಿತ್ಯಕ್ತಾಹಾರನಾಗಿರ್ದುದೆಂಬುದಂ ತನ್ಮುನೀಂದ್ರರವಧಿ ಜ್ಞಾನದಿಂದಱಿದು, ಆ ಪ್ರೀತಿವರ್ಧನನಂ ಪ್ರತಿಬೋಧಿಸುವ ಬಗೆಯೊಳಾ ಶಾರ್ದೂಲನ ಪೂರ್ವಭವ ವೃತ್ತಾಂತಮುಮಂ ಕಾಲಲಬ್ಧಿ ದೊರೆಕೊಳೆ ಶರೀರ ಪರಿತ್ಯಾಗಂಗೆಯ್ದಿರ್ದುದೆಂಬುದುಮನಱಿಪಿ, ತದ್ಗಿರಿ ತಟದೊಳ್ ಮುನ್ನೆ ಪೂಳ್ದಿ ಸುವರ್ಣ ಕಟಾಹಂಗಳಂ ತೋಱಿದಾಗಳ್, ಅರಸಂ ಚೋದ್ಯಂಬಟ್ಟು ಪಿರಿದುಂ ಪೂಜೆಯಂ ಮಾಡೆ, ಶಾರ್ದೂಲಂ ನೋಂತು ಸಮಾಧಿವಡೆದು ಈಶಾನ ಕಲ್ಪ ದೊಳ್ ದಿವಾಕರಪ್ರಭನೆಂಬ ದೇವನಾದಂ. ಆ ಪ್ರೀತಿವರ್ಧನನುಮಾ ಭಟ್ಟಾರ ಕರ್ ದಯೆಗೆಯ್ದ ದೀಕ್ಷೆಯ ಫಲದಿಂದಮೃತಪದವಿಯಂ ಪಡೆದಂ. ಆತನ ಸೇನಾ ನಾಯಕ ಮಂತ್ರಿ ಪುರೋಹಿತರ್ ಮೂವರುಂ ನೃಪನ ದಾನಾನುಮೋದದ ಫಲದಿಂದಮುತ್ತರಕುರುವಿನೊಳಾರ್ಯರಾಗಿ ಜೀವಿತಾಂತ್ಯದೊಳೀಶಾನ ಕಲ್ಪ ದೊಳ್ ಸೇನಾನಾಯಕನಪ್ಪಾರ್ಯಂ ಪ್ರಭಾಕರನೆಂಬೊಂ ದೇವನಾದಂ; ಮಂತ್ರಿ ಯಪ್ಪಾರ್ಯಂ ಕನಕಪ್ರಭನೆಂಬ ದೇವನಾದಂ; ಪುರೋಹಿತನಪ್ಪಾರ್ಯಂ ಪ್ರಭಂಜನನೆಂಬೊಂ ದೇವನಾದಂ; ಮುನ್ನ ಪೇಳ್ದ ಶಾರ್ದೂಲ ಚರನಪ್ಪ ದೇವಂಬೆರಸು ಅಂತು ನಾಲ್ವರ್ ದೇವರ್ ಲಲಿತಾಂಗ ದೇವನಾದಂದು ನಿನಗೆ ಪರಿವಾರ ದೇವರಾದರ್. ಆ ಲಲಿತಾಂಗ ದೇವನಯ್ ನೀನಿಲ್ಲಿ ಬಂದು ವಜ್ರ ಜಂಘನಾದಯ್. ನಿನ್ನ ದೇವಿಯಪ್ಪ ಸ್ವಯಂಪ್ರಭೆಯುಮಾಗಳ್ ಶ್ರೀಮತಿ ಯಾದಳ್. ಶಾರ್ದೂಲ ಚರನಪ್ಪ ದಿವಾಕರದೇವಂ ಬಂದು ನಿನಗೆ ಮಂತ್ರಿ ಮತಿವರನಾದಂ; ಪ್ರಭಾಕರಾಮರಂ ಬಂದು ಸೇನಾನಾಯಕನಕಂಪನಾದಂ; ಕನಕಪ್ರಭದೇವಂ ಬಂದು ಪುರೋಹಿತನಾನಂದನಾದಂ; ಪ್ರಭಂಜನ ಕಲ್ಪಜಂ ನಿಜಶ್ರೇಷ್ಠಿ ಧನಮಿತ್ರನಾದಂ. ಅದು ಕಾರಣದಿಂದಿವರೊಳ್ ಸ್ನೇಹಂ ಪಿರಿ ದಾದುದು. ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿ ತೀರ್ಥ ಪ್ರವರ್ತಕನಾದಂದೀ ಶ್ರೀಮತಿ ದಾನ ತೀರ್ಥ ಪ್ರವರ್ತಕಂ ಶ್ರೇಯಾಂಸನಕ್ಕುಂ; ಈ ನಿನ್ನ ಮಂತ್ರಿ ಮತಿವರನಂದು ನಿನಗೆ ಭರತೇಶ್ವರನೆಂಬನಾತ್ಮಜನಕ್ಕುಂ; ಈ ಸೇನಾನಾಯಕನಕಂಪನುಂ ಬಾಹುಬಲಿಯೆಂಬ ತನಯನಕ್ಕುಂ; ಈ ಪುರೋ ಹಿತನಾನಂದಂ ವೃಷಭಸೇನನೆಂಬೊಂ ತನೂಜನಕ್ಕುಂ; ಈ ಶ್ರೇಷ್ಠಿ ಧನಮಿತ್ರ ನನಂತ ವೀರ್ಯನೆಂಬ ತನೂಭವನಕ್ಕುಂ" ಎಂಬುದುಂ, ಅತಿ ಪ್ರೀತಿಯಿಂ, "ತ್ವದಂಘ್ರಿಪದ್ಮಂಗಳಂ ಮಚ್ಚಿ ನೆಲಸಿರ್ದಪುವೀ ಪುಲಿ ಪಂದಿ ಕೋಡಗಂ ಮುಂಗುರಿಯೆಂಬ ನಾಲ್ಕಱ ಭವಾವಳಿಯಂ ಬೆಸಸಿಂ" ಎಂಬುದುಂ, ಗಗನಚಾರ

ಣರ್ ಬೆಸಸಿ, "ಈ ನಾಲ್ಕುಂ ಭವದ್ದಾನಾನುಮೋದದಿಂ ಜಾತಿಸ್ಮರಂಗಳಾದುವು; ದಿವ್ಯಮಾನುಷಗೋಚರಮಪ್ಪ ಸುಖಂಗಳಂ ನಿನ್ನೊಡನುಣುತ್ತುಂ ಬಂದು ನೀಂ ಭವಿಷ್ಯತ್ತೀರ್ಥಕರನಾದಂದು ನಿನಗೆ ತನಯರಪ್ಪರ್" ಎಂದು ಬೆಸಸಿ ಚಾರಣಮುನೀಂದ್ರರ್ ಸತ್ಪಥಾತಿಥಿಗಳಾದರ್.

ಅರಸನುಂ ಶ್ರೀಮತಿಯುಂ ಪಯಣದ ಮೇಲೆ ಪಯಣಂಬೋಗಿ ಪುಂಡರೀಕಿಣಿಯನೆಯ್ದಿ ಪುಂಡರೀಕಂಗೆ ಸಾಮಾದಿಗಳಿಂ ಮಹೀಚಕ್ರಮುಂ ನಿಷ್ಕಂಟಕಂ ಮಾಡಿ ರಾಜ್ಯದೊಳ್ ಪದುಳಂ ಮಾಡಿ ಮಹಾ ಸಾಮಂತ ಮಂತ್ರಿಮಂಡಳಕ್ಕಪ್ಪಯಿಸಿ ನಿಜರಾಜಧಾನಿಗೆ ಬಂದು,

ದಿವಿಜೇಂದ್ರಾವಾಸ ಸೌಖ್ಯಕ್ಕತಿಶಯಮೆಸೆವೀ ಸೌಖ್ಯಮಾ ದೇವಿಗಂ ರೂ
ಪ ವಿಳಾಸ ಶ್ರೀಯೊಳೀ ದೇವಿಯೆ ಮಿಗಿಲಮರಾಕಾರಮಂ ಗೆಲ್ದುದೀ ಮಾ
ನವ ದೇಹಾಕಾರಮೆಂಬಂತಿರೆ ಭುವನಜನಂ ಶ್ರೀಮತೀ ವಕ್ತ್ರಚಂದ್ರ
ಚ್ಛವಿ ಚೆಲ್ವಂ ಮಾಲ್ಪಿನಂ ಭೋಗಿಸಿದನಖಿಳ ಭೋಗಂಗಳಂ ವಜ್ರಜಂಘಂ ೭೧

ಶ್ರೀಮತೀ ವಜ್ರಜಂಘ ಸಹಮರಣಂ

ಅಂತನೇಕಸಂವತ್ಸರಂಗಳ್ ಸಲ್ವಿನೆಗಮೊಂದು ದಿವಸಂ ರಜನೀಸಮಯದೊಳ್ ಶಯ್ಯಾತಳದೊಳಾ ದಂಪತಿಗಳ್ ನಿದ್ರಾವಶರಾಗಿರ್ದರ್. ಅನ್ನೆಗಮಲ್ಲಿ ಮುಚ್ಚಿರ್ದ ಗವಾಕ್ಷಕವಾಟಪುಟಂಗಳಂ ತೆಱೆಯಲ್ ಮಱೆದು ಸೂರ್ಯಕಾಂತದ ಧೂಪಗುಂಡಿಗೆಯೊಳಳವಱಿಯದೆ ಸೆಜ್ಜೆವಳಸಿಕ್ಕಿದ ಕೇಶಸಂಸ್ಕಾರಧೂಪಂ

ಮೊದಲೊಳ್ ನೀಳ್ದು ಪೊದಲ್ದು ಪರ್ಬಿ ಪರಪಂ ಕೈಕೊಂಡು ಮಂದೈಸಿ ಮಾ
ಣದೆ ತನ್ನಂದದೊಳೀಟ್ಗೆಗುಂದದೆ ನಿರುದ್ಧೋಚ್ಛ್ವಾಸಮಪ್ಪನ್ನೆಗಂ
ಪುದಿದಾ ದಂಪತಿಯಂ ಪುದುಂಗೊಳಿಸಿ ಲೋಕಾಶ್ಚರ್ಯಮಂ ಮಾಡಿ ಕೊಂ
ದುದು ಕೃಷ್ಣಾಗರುಧೂಪಧೂಮನಿವಹಂ ಕೃಷ್ಣೋರಗಂ ಕೊಲ್ವವೊಲ್ ೭೨

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ
ದೊಡಗಳೆದರೋಪರೋಪರೊ
ಳ್ಪೊಡಸಾಯಲ್ ಪಡೆದರಿನ್ನವೇಂ ಸಯ್ಪೊಳವೇ ೭೩

## ೫ ಭೋಗಭೂಮಿಜಂ

ಆಗಳಾದಿತ್ಯೋದಯದಿನವರಂ ನೋಡಿ ಮತಿವರಾದಿಗಳ್ ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ ದಹನಕ್ರಿಯೆಯಂ ನಿರ್ವರ್ತಿಸಿ, ಬೞಿಯಂ ಶ್ರೀಮತೀತನಯಂ ವಜ್ರಬಾಹುವೆಂಬಂಗೆ ಧರಾಭಾರಮಂ ಕೊಟ್ಟು ರಾಜ್ಯ ದೊಳ್ ನಿಱಿಸಿ, ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯ ದೊಳಹಮಿಂದ್ರಪದವಿಯಂ ತಾಳ್ದಿದರ್. ಅಂತು ಪಂಚತ್ವಮನೆಯ್ದಿದ ವಜ್ರ ಜಂಘಂಗಂ ಶ್ರೀಮತಿಗಮಾ ತಿರಿಕಂಗಳ್ಗಮುತ್ತಮ ಪಾತ್ರ ದಾನಾನುಮೋದದ ಪುಣ್ಯಫಲದಿಂದಮಾ ಜಂಬೂದ್ವೀಪದುತ್ತರ ಕುರುವೆಂಬುತ್ತಮ ಭೋಗಭೂ ಮಿಯೆ ಜನ್ಮಭೂಮಿಯಾದುದು. ಅಲ್ಲಿ

ಹಿಮಮೆಂದಾತಪಬಾಧೆಯೆಂದು ಮೞೆಯೆಂದಿಲ್ಲಾ ನೆಲಂ ಪಂಚರ
ತ್ನಮಯಂ ನಾಲ್ವೆರಲಲ್ಲದಾಗದೆಳವುಲ್ ನೀಲೋತ್ಪಳಾಬ್ಜಾಕರಾ
ಳಿ ಮನಂಗೊಳ್ವುದು ಮೆಲ್ಲನಲ್ಲಿ ಸುೞಿಗುಂ ಮಂದಾನಿಳಂ ನೀರ್ ಸುಧಾ
ಸಮಮುದ್ಯಾನವನಂ ಮದೋತ್ಕ ಪರಪುಷ್ಟೋದ್ದಾಮ ಕೋಳಾಹಳಂ ೭೪

ಪಗಲಿರುಳೆಂಬ ಭೇದಮನಯಂ ಬಡವರ್ ಕಡು ಬಲ್ಲಿದರ್ ವಿಷಾ
ಹಿ ಗಣಮನೇಕ ರೌದ್ರ ಮೃಗಜಾತಿಗಳಾಳರಸೆಂಬುದೊಂದು ದಂ
ದುಗಮಳಿಪಾಯಿಲಂ ಮಱುಕಮಾಮಯಮಪ್ಪಪಮೃತ್ಯುವೆಂಬಿವ
ಲ್ಲಿಗೆ ಪೊಱಗೆಂದೊಡಿನ್ ಸುಖಮನೇವೊಗೞ್ವುದೊ ಭೋಗಭೂಮಿಯಾ ೭೫

ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮೞ್ತಿಯಂ
ಸಲಿಸುವ ಭೋಗಮೊಲ್ದಗಲದೋಪರ ಕೂಟಮನಂಗರಾಗದೊಳ್
ನಲಿವ ವಿನೋದಮಾದಮೆರ್ದೆಯೊಳ್ ತಡಮಾಡೆ ಸುಖಂಗಳೊಳ್ ಪಳಂ
ಚಲೆವುದು ನಾಕಲೋಕಮುಮನೇನಿರದೀವುದೊ ಭೋಗಭೂತಳಂ ೭೬

### ಪ್ರೀತಿಂಕರ ದರ್ಶನಂ

ಅಂತನೇಕ ಭೋಗ ನಿವಾಸಮೆನಿಸುವ ಭೋಗಭೂಮಿಯೊಳೊಂದು ದಿವಸಂ ವಜ್ರಜಂಘಾರ್ಯನಾತ್ಮೀಯಪ್ರಾಣೇಶ್ವರಿವೆರಸು ವನಲಕ್ಷ್ಮಿಯನೊಱಲ್ದು ನೋಡುತಿರ್ಪನ್ನೆಗಂ, ಗಗನ ಜಳಧಿಯೊಳ್ ಬಹಿತ್ರದಂತೆ ಪರಿವ ಸೂರ್ಯಪ್ರಭ

ನೆಂಬ ದೇವನ ವಿಮಾನಮುಂ ನೋಡಿ ಪೋದ ಭವಂಗಳಂ ನೆನೆವಿನಂ ಅವತರಿಸಿದ ಚಾರಣ ದ್ವಂದ್ವಕ್ಕಿದಿರ್ವಂದು, ತದೀಯ ಪಾದಂಗಳನಾನಂದಾಶ್ರುಗಳಿಂ ತೊಳೆದು, ಮಣಿಮಯಾಸನದೊಳ್ ಕುಳ್ಳಿರಿಸಿ, "ನಿಮ್ಮ ಚರಣಾಂಭೋಜಂಗಳಂ ಕಂಡು ಅತಿಪ್ರೀತಿ ತೊಟ್ಟನೆ ಕೈಗಣ್ಮುವುದೇಕೆ? ಪೂರ್ವಭವದೊಳ್ ಬಂಧುತ್ವಮುಂಟಕ್ಕುಂ" ಎಂಬುದುಮಮರೊಳಗ್ರಮುನಿ ಮುಗುಳ್ನಗೆ ನಕ್ಕು, "ಮಹಾಬಳ ವಿಯಚ್ಚರನಾದ ಭವದೊಳಾಂ ನಿನಗೆ ಸಚಿವಂ ಸ್ವಯಂಬುದ್ಧನೆಂಬೆನಾಗಿ, ನಿನಗೆ ಸಮಾಧಿಯಂ ಪಡೆದು ತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ, ಸಗ್ಗದೊಳ್ ಮಣಿಚೂಳನಾಮಮುಂ ಪಡೆದಲ್ಲಿಂ ತಳರ್ದು ಜಂಬೂದ್ವೀಪದ ಪುಷ್ಕಳಾವತೀ ವಿಷಯದ ಪ್ರಿಯಸೇನಮಹೀಭುಜಂಗಂ ಸೌಂದರಿಗಂ ತನುಜಾತನೆಂ ಪ್ರೀತಿಂಕರನೆಂಬೆಂ; ಈ ತಪೋಧನಂ ಪ್ರೀತಿದೇವನೆನ್ನಿಂ ಕಿಱಿಯಂ. ನೀನೀ ಯೆಡೆಯೊಳ್ ಪುಟ್ಟಿದುದನವಧಿ ಬೋಧದಿಂದಱಿದು ಅಱಿವಂ ಕುಡಲೆಂದು ಬಂದೆವು.

ಸಮ್ಯಕ್ತ್ವೋಪದೇಶಂ

ನಿನಗೆ ಜಯವರ್ಮನಾದಂ
ದಿನ ಭವದಿಂದಿತ್ತ ಭೋಗ ಕಾಂಕ್ಷೆಯೆ ತಿಣ್ಣಂ
ಮನದೊಳ್ ಸಮ್ಯಕ್ತ್ವದ ದೆಸೆ
ಯಿನಿತಿಲ್ಲ ದಲಮ್ಮ ಕೈಕೊಳಲ್ಕಿದು ಕಾಲಂ ೭೭

ದೊರೆಕೊಳೆ ಕಾಲಲಬ್ಧಿ ಬಗೆದಂತಿರೆ ಕೂಡೆ ಗುರೂಪದೇಶಮಾ
ವರಿಸೆ ಜಿನೇಂದ್ರಭಕ್ತಿ ಪೊಜಪೊಣ್ಮೆ ದಯಾರಸಮಿಂತು ನಾಡೆಯುಂ
ಪರಿಕರದಿಂ ಮನಕ್ಕಱಿವು ಸಾರೆ ಭವಾಬ್ಧಿತಟಂ ಸಮೀಪಮಾ
ಗಿರೆ ದೊರೆಕೊಂಡ ದೃಷ್ಟಿವಿಭವಂ ಕಳೆಗುಂ ಖಳ ಕರ್ಮ ಬಂಧಮುಂ ೭೮

ಸಮವಾಯಮುಪ್ಪುದಲ್ತೆಂ
ದು ಮನಂಬಸವೇಡ ದೋಷವಿರಹಿತನಾಪ್ತಂ
ಕ್ರಮದಾಪ್ತನೆ ಪೇೞ್ದುದದಾ
ಗಮಮಾಗಮದರ್ಥಮಾವುದದುವೆ ಪದಾರ್ಥಂ ೭೯

ಪರಮೋಪಶಮಂ ಧರ್ಮಾ
ನುರಾಗಮನುಕಂಪೆ ನೆಱೆದ ನಂಬುಗೆಯೆಂಬೀ
ಪರಮ ಜಿನ ಗದಿತ ಗುಣ ಪರಿ
ಕರದೊಳ್ ಕೂಡಿದುದೆ ನಿರುಪಮಂ ಸಮ್ಯಕ್ತ್ವಂ ೮೦

ಜೀವಾದಿ ನವ ಪದಾರ್ಥದೊ
ಳಾವಗಮುಟ್ಟಿಯನೆ ಮಾಡು ಮೂಢ ತ್ರಯದೊಳ್
ಭಾವಮನೆ ಬಿಸುಡು ಬೆಳಗುಗು
ಮೀ ವಿಧದಿಂ ನೆಗಟ್ತೆ ನಿನ್ನ ದರ್ಶನ ರತ್ನಂ ೮೧

ಜಿನ ಮತ ಪದಾರ್ಥ ಶಂಕಾ
ಪನಯನಮುಂ ಭೋಗ ಕಾಂಕ್ಷೆಯೊಳ್ ವಿಮುಖತೆಯುಂ
ಮುನಿ ಜನ ತನು ಮಳ ವಿಚಿಕಿ
ತ್ಸನ ವರ್ಜನಮುಂ ತ್ರಿಮೂಢತಾ ನಿರಸನಮುಂ ೮೨

ಉಪಗೂಹನಮುಂ ಸದ್ಧ
ರ್ಮ ಪಥ ಚ್ಯುತ ಭವ್ಯ ಸಂಹತಿ ಸ್ಥಾಪನಮುಂ
ವಿಪುಳ ಗುಣ ವತ್ಸಳತ್ವಮು
ಮುಪಗತ ಮಳ ಜೈನ ಶಾಸನೋದ್ಭಾಸನಮುಂ ೮೩

ಈ ಎಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್.

ಇವಱಿಂ ಸಮ್ಯಗ್ದರ್ಶನ
ಮವಶ್ಯಮುಜ್ಜ್ವಳಿಕುಮದುವೆ ಸಮ್ಯಗ್ಜ್ಞಾನ
ಕ್ಕವಕಾಶಮಕ್ಕುಮಂತದು
ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ ೮೪

ಈ ಸಂಸಾರಾಂಭೋಧಿಯ
ನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾ
ಯಾಸದೊಳೆ ನಿನಗೆ ಮುಕ್ತಿ
ಪ್ರಾಸಾದಮನಡರಲಿವುವೆ ಸೋಪಾನಂಗಳ್” ೮೫

ಎಂದು, "ಮಗಳೆ, ನೀನಿಂತಿದಂ ನಂಬು. ಅನುಕ್ರಮದಿಂ ಸಪ್ತ ಪರಮ ಸ್ಥಾನಂಗಳಂ ಪೊರ್ದುವಯ್" ಎಂದತಿ ಪ್ರೀತಿಯಿಂ ಮುಕ್ತಿ ಸಾಮ್ರಾಜ್ಯ ಪದವಿಗಿದುವೆ ಯುವರಾಜ ಚಿಹ್ನಮೆನಿಸಿದ ಸೂತ್ರಾನುಗತಮಪ್ಪ ಸಮ್ಯಗ್ದರ್ಶನ ಮೆಂಬ ಕಂಠಿಕೆಯಂ ಕಂಠಿಕಾ ಬಂಧನಮಂ ಮಾಡಿ ನಭಕ್ಕೊಗೆದಾಗಳ್,

## ೬ ಶ್ರೀಧರದೇವಂ

ಆತ್ಮೀಯ ಹೃದಯದೊಳನಿಬರುಂ ತಾಳ್ದಿ ಸಮ್ಯಗ್ದರ್ಶನಮನಸ್ಖಲಿತ ಮಾರಾಧಿಸಿ ಅಯುಷ್ಯಾವಸಾನದೊಳ್ ವಜ್ರಜಂಘಾರ್ಯಂ ಶ್ರೀಪ್ರಭ ವಿಮಾನ ದೊಳ್ ಶ್ರೀಧರನೆಂಬ ದೇವನಾದಂ. ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವ ಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು ಶ್ರೀಧರಂಗೆ ಸಾಮಾನಿಕದೇವಂ ಸ್ವಯಂಪ್ರಭನೆಂಬನಾದಂ.

### ಪ್ರೀತಿಂಕರಾರ್ಯರ ಕೇವಲಜ್ಞಾನೋತ್ಪತ್ತಿ

ಒಂದು ದಿವಸಮಾ ದೇವನವಧಿಬೋಧದಿಂ ಪ್ರೀತಿಂಕರಾರ್ಯರ ಕೇವಲ ಜ್ಞಾನೋತ್ಪತ್ತಿಯನಱಿದು ದೇವನಿಕಾಯದೊಡನೆ ಪೋಗಿ ಅರ್ಚಿಸಿ ಸ್ತುತಿ ಯಿಸಿ, "ಪ್ರೀತಿಂಕರ, ನಿನ್ನ ಪ್ರೀತಿಯೊಳಾನತ್ಯುತ್ತಮ ಜಾತಿಗಳೊಳ್ ಪುಟ್ಟಿ ಸುಖಮನುಣುತುಂ ಬಂದೆಂ. ಆನಂಬರಚರನಾದಂದಾ ನಾಲ್ವರೊಳ್ ಮೂವ ರುಂ ಮಂತ್ರಿಗಳೇನಾದರ್? ಬೆಸಸು" ಎನೆ, ಪರಮಂ ಬೆಸಸಿದಂ: "ಸಂಭಿನ್ನ ಮಹಾಮತಿಗಳ್ ತಮೋಮಯದೊಳ್ ಗಂಭೀರ ನಿಗೋದದೊಳಿನ್ನುಂ ನಮೆ ದಪರ್. ಶತಮತಿ ದ್ವಿತೀಯ ನರಕಕ್ಕೆ ಸಂದಂ; ದುಃಖಮನನುಭವಿಸಿದಪ್ಪಂ. ಈ ಸಂಸೃತಿಯೊಳ್ ಧರ್ಮಾಧರ್ಮ ಸ್ಥಿತಿಯೆ ಸ್ವರ್ಗ ನರಕ ಸುಖ ದುಃಖಕರಂ.

ಧರ್ಮಮಮರೇಂದ್ರ ಗತಿಯನ
ಧರ್ಮಮಧೋಗತಿಯನೆಸಗುವೆಸಕದೊಳೀಗುಂ
ಧರ್ಮಾಧರ್ಮ ಕ್ರಿಯೆಗಳೆ
ನೆರ್ಮಂ ಜೀವಕ್ಕೆ ಮನುಜಗತಿಯೊಳೆ ಮಾಱ್ಕುಂ ೮೬

ಪುಸಿಯದುದು ಪರಾಂಗನೆಗಾ
ಟಿಸದುದು ಕೊಲ್ಲದುದು ಮೋಹಮಿಲ್ಲದುದಜೀವಂ
ಪೊಸಯಿಸುವುದು ವೈರಾಗ್ಯದ
ದೆಸೆಗೆಸಪುದು ಧರ್ಮಮದಱ ತಡೆವುದಧರ್ಮಂ ೮೭

ಮಾಂಸ ಮಧು ಮದ್ಯ ಸೇವನೆ
ಹಿಂಸಾರುಚಿ ಪರಮ ಜಿನಮತಾರುಚಿ ಕುಲಟಾ
ಸಂಸರ್ಗಮೆಂಬಿವಲ್ಲದೆ
ಸಂಸಾರ ಭ್ರಮಣ ಕಾರಣಂ ಪೆಱವೊಳವೇ ೮೮

ಕಳಿಪಂ ಕಳ್ವನಗುರ್ವು ಪರ್ವೆ ಕೊಲಿಪಂ ಕೊಲ್ವಂ ಪರಸ್ತ್ರೀಯರಂ ಕೊಳಿಪಂ ಕೊಳ್ವನೆನಿಪ್ಪ ಪಾಪಿಯುಮತಿ ಕ್ರೂರಾತ್ಮನುಂ ಸಾಧು ಸಂ ಕುಳಮಂ ಕಂಡೊಡೆ ಕಾಯ್ವನುಂ ಪಟುವನುಂ ಧರ್ಮಕ್ಕತಿ ದ್ರೋಹನುಂ ಖಳನುಂ ಕಳ್ಳೃಣಿಯುಂ ಘುಳುಮ್ಮನಿಟಿಾಗುಂ ಶ್ವಭ್ರಾಂತಮಂ ತಾಪಿನಂ" ೮೯

ಶ್ರೀಧರದೇವನ ಧರ್ಮಸಂವೇಗಂ; ಶತಮತಿ ಪ್ರತಿಬೋಧನಂ

ಎಂಬುದುಂ, ಶ್ರೀಧರಾಮರಂ ಧರ್ಮಸಂವೇಗ ಪರಾಯಣನಾಗಿ ಗುರೂಪದೇಶದಿಂದಾತನಂ ಪ್ರತಿಬೋಧಿಸಲಲ್ಲಿಗೆ ಪೋಗಿ, "ಎಲೆ ಶತಮತಿ, ನಿನ್ನಱಿಯಮೆಯೆ ನಿನ್ನನಿನಿತಂ ಮಱುಗಿಸಿದುದು. ನೀಂ ಕಂಡುಂಡಯ್. ಮಿಥ್ಯಾಜ್ಞಾನಮಂ ಬಿಸುಟು ಸಮ್ಯಕ್ತ್ವಮಂ ನಂಬು. ಎನ್ನನೆ ಕಂಡು ತಿಳಿ" ಎನೆ ಸಮ್ಯಕ್ತ್ವಮಂ ಕೈಕೊಂಡಂ. ಕೈಕೊಂಡು ಕಾಲಾಂತರದಿಂದಾ ನರಕದಿಂದಾತಂ ಬಂದು ಪುಷ್ಕರವರ ದ್ವೀಪದ ರತ್ನಸಂಚಯ ಪುರಮನಾಳ್ವ ಮಹೀಧರಂಗಂ ಸೌಂದರಿಗಂ ಜಯಸೇನನೆಂಬ ಮಗನಾಗಿ ಪುಟ್ಟಿ ವಿವಾಹಸಮಯದೊಳ್ ತನ್ನನಾ ಶ್ರೀಧರದೇವನೇ ಬಂದು ಮಗುಳ್ದುಂ ಮೂದಲಿಸೆ ದುಶ್ಚರತಪಶ್ಚರಣ ಪರಾಯಣಂ ಸಮಾಹಿತ ಚಿತ್ತನಾಗಿ ಜೀವಿತಾಂತ್ಯದೊಳ್ ಬ್ರಹ್ಮೇಂದ್ರತೆಯಂ ಪಡೆದಂ. ಉಪಕಾರಸ್ಮರಣೆ ಪುಟ್ಟೆ ಶ್ರೀಧರನಂ ಪೂಜಿಸಿದಂ.

## ೭ ಸುವಿಧಿ

ಶ್ರೀಧರಂ ದಿವದಿಂ ಪರಿಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದ ವತ್ಸಕಾವತೀ ವಿಷಯದ ಸುಸೀಮಾನಗರಮನಾಳ್ವ ಸುದೃಷ್ಟಿ ಮಹೀಪಾಳಂಗಂ ಸುನಂದಾ ಮಹಾದೇವಿಗಂ ಸುವಿಧಿನಾಮದಿಂ ಪುತ್ರನಾದಂ. ಜಿತಾತ್ಮಂ ಪುರುಷಂ ಗುರೂಪರೋಧಕ್ಕಾಗಿದು ಅಭಯಘೋಷ ಚಕ್ರಿಯ ಮಗಳ ಮನೋರಮೆಯ ಮದುವೆಗಂ ರಾಜ್ಯದ ಪತ್ತುಗೆಗಂ ಮನಂದಂದಂ. ಸುವಿಧಿಗಂ ಮನೋರಮೆಗಂ ಶ್ರೀಮತೀ ಚರನೆನಿಸಿದಾ ಸ್ವಯಂಪ್ರಭದೇವಂ ದೇವಲೋಕ

ದಿಂದವತರಿಸಿ ಕೇಶವಾಂಕಂ ಪ್ರಿಯತನಯನಾದಂ. ಆಗಿ, ಪೂರ್ವಭವ ಸ್ನೇಹಂ ತಮ್ಮನ್ನೊಂದುಮಾಡೆ ಪಲಕಾಲಮುರ್ವೀ ತಳ ಸುಖಮನುಣುತುಮಿರೆ,

ಧರ್ಮಾಮೃತಾಸ್ವಾದನಂ

ಒಂದು ದಿವಸಂ ಸುವಿಧಿ ಧರಾಧೀಶಂ ತಮ್ಮ ಮಾವನಪ್ಪಭಯಘೋಷ ಚಕ್ರವರ್ತಿ ಜಿನಚರಣ ವಂದನಾ ಭಕ್ತಿಗೆ ಪೋಗೆ ತಾನುಂ ವರದತ್ತವರಸೇನ ಚಿತ್ರಾಂಗದ ಶಾಂತಮದನರೆಂಬ ನಾಲ್ವರ್ ಸಹಾಯರುಂ ತನ್ನ ಮಗಂ ಕೇಶವನುಂ ಬೆರಸು ಪೋಗಿ ಜಿನೇಂದ್ರ ಪಾದಾರವಿಂದಂಗಳಂ ವಂದಿಸುತ್ತಿರ್ಪನ್ನೆಗಂ, ಅಭಯಘೋಷಂ ಧರ್ಮಾಮೃತಮನಾಸ್ವಾದಿಸಿ ಸಂಸಾರ ನಿರ್ವೇಗ ಪರಾಯಣನಾಗಿ ದೀಕ್ಷೆಯಂ ಕೈಕೊಂಡಂ.

ಅಣುವ್ರತ ಗ್ರಹಣಂ; ಸಮಾಧಿ ಮರಣಂ

ಸುವಿಧಿಯುಂ ತನೂಭವ ಸ್ನೇಹದಿಂದಾ ವಿಭೂತಿಯನುೞಿದು ಉಪಾಸಕನಾದಂ. ಅಯ್ದುಮಣು ವ್ರತಂಗಳಂ ಮೂಱು ಗುಣ ವ್ರತಂಗಳಂ ಶಿಕ್ಷಾವ್ರತಂ ನಾಲ್ಕುಮಂ ತಾಳ್ದಿ ಏಕಾದಶ ನಿಳಯಮನನುಕ್ರಮದಿಂ ಕೈಕೊಂಡು ಉತ್ಕೃಷ್ಟ ಚಾರಿತ್ರದೊಳ್ ನೆಗೞ್ದು ಜೀವಿತಾವಸಾನದೊಳ್ ಸಮಾಧಿ ವಿಧಿಯಿಂ ಶರೀರ ಪರಿತ್ಯಾಗಂಗೆಯ್ದು ಅಚ್ಯುತೇಂದ್ರನಾದಂ.

## ೮ ಅಚ್ಯುತೇಂದ್ರಂ

ಕೇಶವನುಮಾತ್ಮಿಯ ಗುರು ವಿಯೋಗದೊಳ್ ಪರಿತ್ಯಕ್ತ ರಾಜ್ಯಂ ಪ್ರವ್ರಜ್ಯ ಪದವಿಯೊಳ್ ಪರಿತ್ಯಕ್ತನುಮಾಗಿ ಅಚ್ಯುತ ಕಲ್ಪದೊಳ್ ಪ್ರತೀಂದ್ರನಾದಂ. ಅಲ್ಲಿ ತನ್ನ ನಾಲ್ವರುಂ ಸಹಾಯರಪ್ಪ ಸಾಮಾನಿಕ ದೇವರುಂ ತತ್ಪ್ರತೀಂದ್ರನುಂ ಬೆರಸಚ್ಯುತೇಂದ್ರಂ ದಿವ್ಯಭೋಗ ಸಂಪತ್ಪರಂಪರಾ ಪರಿಗತನಾಗಿ,

ದೆಸೆಯೆಲ್ಲಂ ಪಂಚರತ್ನದ್ಯುತಿ ಜಟಳಿತ ನಾನಾ ವಿಮಾನಂಗಳೊಳ್ ರಂ
ಜಿಸೆ ದೇಹಚ್ಛಾಯೆಯೆಲ್ಲಂ ಸಹಜ ಮಣಿ ವಿಭೂಷಾ ಮಯೂಖಂಗಳೊಳ್ ರಂ
ಜಿಸೆ ತನ್ನಾಸ್ಥಾನಮೆಲ್ಲಂ ಲಲಿತ ಸುರವಧೂ ರಮ್ಯಸಂಗೀತದಿಂ ರಂ
ಜಿಸೆ ಪೀರ್ದಂ ದಿವ್ಯಭೋಗಾಮೃತ ರಸಮನೊಱಲ್ದು ಟ್ರಿಯಿಂದಚ್ಯುತೇಂದ್ರಂ ೯೦

ಜಿನ ಪತಿ ಪದ ಪಂಕಜಮನೆ
ಮನದೊಳ್ ಬಗೆದಮರೆ ಮುಗಿದ ಕೈವೆರಸು ಸುರಾಂ
ಗನೆಯರ್ ನಿಜ ವದನಮನಿ
ಮ್ಮನೆ ನೋಲ್ಪಿನಮುಚ್ಯುತಂ ಪರಿಚ್ಯುತನಾದಂ ೯೧

## ೯ ವಜ್ರನಾಭಿ

ಅಂತಾ ದೇವನಲ್ಲಿಂ ತಳರ್ದು ಜಂಬೂದ್ವೀಪದ ಪ್ರಾಗ್ವಿದೇಹದ ಪುಷ್ಕಳಾವತೀ ವಿಷಯದ ಪ್ರತಿಬದ್ಧ ಪುಂಡರೀಕಿಣೀ ಪುರದೊಳ್ ವಜ್ರಸೇನವಿಭುಗಂ ಶ್ರೀಕಾಂತೆಗಂ ಪುತ್ರನಾಗಿ ವಜ್ರನಾಭಿವೆಸರಂ ತಾಳ್ದಿದಂ. ಮತ್ತಮಾ ದಂಪತಿಗೆ ಮುಂ ಪೇಲ್ದ ಶಾರ್ದೂಲಾರ್ಯನುಂ ವರಾಹಾರ್ಯನುಂ ವಾನರಾರ್ಯನುಂ ನಕುಳಾರ್ಯನುಮನುಕ್ರಮದೊಳ್ ವಿಜಯ ವೈಜಯಂತ ಜಯಂತಾಪರಾಜಿತ ರೆಂಬ ನಾಲ್ವರ್ ತನೂಜರಾದರ್. ವಜ್ರಜಂಘನಾದ ಭವದೊಳ್ ಆತನ ಮಂತ್ರಿ ಪುರೋಹಿತ ಸೇನಾಧಿಪ ಪ್ರಧಾನ ರಾಜಶ್ರೇಷ್ಠಿಗಳಪ್ಪ ಮತಿವರಾನಂದಾಕಂಪನ ಧನಮಿತ್ರರೆಂಬ ನಾಲ್ವರುಮಧೋಗ್ರೈವೇಯಕದೊಳಹಮಿಂದ್ರರಾಗಿರ್ದವರಲ್ಲಿಂ ಬಂದು ಸುಬಾಹು ಮಹಾಬಾಹು ವೀರ ಮಹಾವೀರರೆಂಬ ತನಯರಾಗಿ ವಜ್ರನಾಭಿಗೆ ಸಹೋದರರಾದರ್. ಶ್ರೀಮತ್ಯಾರ್ಯೆ ಸ್ವಯಂಪ್ರಭ ದೇವಂ ಕೇಶವಚರ ಪ್ರತೀಂದ್ರಂ ಬಂದಾ ಪುರದೊಳ್ ವಣಿಗ್ವಂಶಾಗ್ರಣಿ ಕುಬೇರದತ್ತಂಗಮನಂತಮತಿಗಂ ಧನದೇವನೆಂಬ ತನೂಭವನಾದಂ. ಇಂತು

ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆತೊ
ಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ತಾ ತಗು
ಳ್ಪುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾ
ಭಿಗತಿ ಪ್ರೀತಿಯನುಂಟುಮಾಡಿದರವರ್ ಜನ್ಮಾಂತರ ಸ್ನೇಹದಿಂ ೯೨

### ಚಕ್ರವರ್ತಿತ್ವಂ

ವಜ್ರಸೇನ ಮಹಾರಾಜಂ ಆ ಕುಮಾರನೊಳಾದ ಯೋಗ್ಯತೆಗೆ ಸಂತೋಷಂ ಬಟ್ಟು ರಾಜ್ಯಮಂ ಕುಡೆ, ಲೋಕಾಂತಿಕಾಮರವೃಂದಂ ಬಂದು ಬಿಚ್ಚಳಿಸೆ, ಕರ್ಮದ ತೊಡರಂ ಪಱಿವಂತೆ ಕೇಶಪಾಶಮಂ ಪಱಿದು ತಪಂಗೊಂಡಂ. ವಜ್ರನಾಭಿಯುಂ ಧರಾತಳಂ ಪೊಗಲ್ಪಿನಂ ರಾಜ್ಯದೊಳ್ ನಿಂದಂ. ಆಯುಧಾ

ಗಾರದೊಳ್ ಚಕ್ರರತ್ನಂ ಪುಟ್ಟಿತ್ತು; ಷಟ್ಖಂಡ ಮಂಡಳಮಂ ಬಾಯ್ಕೇಳಿಸಿದಂ; ಸಕಳ ಸಾಮ್ರಾಜ್ಯ ಸಂಪತ್ತಿಯಾದುದು.

ಗೃಹಪತಿರತ್ನವಾಗೆ ಧನದೇವನಿಳಾತಳ ನಾಥನಾ ಮಹಾ
ಮಹಿತಳ ಭೋಗಮಂ ನೆಱೆಯೆ ಭೋಗಿಸೆ ಸಂಸೃತಿ ಭೋಗಮೆಯ್ದೆ ನಿ
ಸ್ಸ್ಪೃಹತೆಯನಾ ಮಹೀಪತಿಗೆ ತಂದುದು ಭವ್ಯತೆ ಪುಣ್ಯಜೀವಮಂ
ಸಹಜ ಸುಖಾಸ್ಪದಂಬರೆಗಮುಯ್ವಿನಮಲ್ಲಿ ತೊಡಂಕಲೀಗುಮೇ ೯೩

ಸಂಸೃತಿ ಭೋಗನಿ ಸ್ಸ್ಪೃಹತೆ

ನೆಗಲ್ದೀ ಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ ಬಂ
ಧುಗಳಿಂದಂ ಬರ್ಪುದೇಂ ಸುತ್ತಿದ ಪರಿಜನದಿಂದಪ್ಪುದೇನೊಂದುಮಿಲ್ಲ
ಚ್ಚಿಗಮೊಂದುಂಟಲ್ಲಿ ಗಾಂಪಿಂ ತೊಡರ್ವೆನೆ ಪಡೆವೆಂ ಶಾಶ್ವತ ಶ್ರೀಯನೆಂಬು
ಜ್ಜುಗದೊಳ್ ಚಿತ್ತಂ ಕರಂ ಕಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ
೯೪

ಮಹಾವ್ರತ ಗ್ರಹಣಂ

ಅಂತು ವಿಷಯ ವಿರಕ್ತನಾಗಿ ವಸುಂಧರಾ ಭಾರಮಂ ವಜ್ರದಂತನೆಂಬ ಅಗ್ರತನೂಜನೊಳ್ ನಿಱಿಸಿ, ನಿಜ ಗುರು ಚರಣ ಸಮೀಪದೊಳಾ ಎಣ್ಬರು ಮಣುಗಿನ ಸೋದರರ್ಕಳ್ ನಿಜ ಸಹಾಯಂ ಧನದೇವನುಂಬೆರಸು ನಿಜದ ರೂಪುಮಂ ಕೈಕೊಂಡು, ಅಯ್ದುಂ ಮಹಾವ್ರತಂಗಳೊಳ್ ನೆರೆದು ಗುಣ ಮಣಿ ವಿಭೂಷಿತನುಂ ಶೀಲರತ್ನಾಕರನುಮಾಗಿ, ತಪಮನೆತ್ತಿಕೊಂಡು ತೀರ್ಥಕರ ಪುಣ್ಯ ಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ, ಸ್ವಸ್ಥಾನಸ್ಥಿತನಾಗಿ ಪ್ರಾಯೋಪಗಮನ ವಿಧಿಯಿಂ ತ್ವಗಸ್ಥಿ ಭೂತ ಸರ್ವಾಂಗಂ ಧೈರ್ಯಮನೆ ಮನದೊಳವಲಂಬಿಸಿ,

ಮಹಾ ತಪೋನುಷ್ಠಾನಂ ; ಸಮಾಧಿಮರಣಂ

ಬಿಸಿಲ್ಬೈಕಿಲ್ ಪಸಿವುಗ್ರದಂಶ ಮಶಕ ವ್ಯಾಬಾಧೆ ನೀರಟ್ಕೆ ಪೊ
ಯ್ವ ಸಿಡಿಲ್ ತಿಂಬರೆವಾವು ಪಾಯ್ವ ಪುಲಿಯೆಂಬೀ ಬಾಧೆಯೊಳ್ ಮೆಯ್ಯನೊ
ಡ್ಡಿಸಿ ಮೆಯ್ಯೊಳ್ ಮಿಡುಕುಳ್ಳ ತಾಣಮಣಮಿಲ್ಲೆಂಬಂತು ನಿಷ್ಪಂದನಾ
ಗಿ ಸಮನ್ವಿತ ಮನಂ ಗುಣಂಗೊಳಿಸಿದಂ ಯೋಗೀಂದ್ರ ವೃಂದಗಳಂ ೯೫

ಅಂತಿರ್ದು ಅನಿತ್ಯಾದಿ ದ್ವಾದಶಾನುಪ್ರೇಕ್ಷಾನುಸ್ಮರಣ ಪರಿಣತಾಂತಃ ಕರಣನಾಗಿ ಶುಕ್ಲಧ್ಯಾನದೊಳ್ ಸಮಾಹಿತನುಪಶಾಂತ ಗುಣಸ್ಥಾನದೊಳ್ ಪ್ರಾಣ ಪರಿತ್ಯಾಗಂಗೆಯ್ದು,

## ೧೦ ಸರ್ವಾರ್ಥ ಸಿದ್ಧಿಯೊಳಹಮಿಂದ್ರಂ

ಸರ್ವಾರ್ಥ ಸಿದ್ಧಿಯೊಳಹಮಿಂದ್ರನಾದಂ. ಪರಿಪೂರ್ಣ ಯೌವನ ಶುಭಲಕ್ಷಣಂ ಮನೋಹರ ರೂಪಂ ದಿವ್ಯವಪು ಪಳುಕಿನ ಪಾಪೆಯನಮರ್ದಿಂ ತೊಳೆದಂತೆ ವಿಳಾಸಮಂ ತಾಳ್ದಿದುದು. ಅಣಿಮಾದ್ಯಷ್ಟ ಗುಣಂಗಳ ಕಣಿಯಿರ್ಪಂತಿರ್ದು ಅಹಮಿಂದ್ರನಖಿಳಸುಖಮಂ ಪಡೆವಂ. ಆ ಸುಖಂ ಮೋಕ್ಷದ ಸುಖದಿಂ ದೇನಾನುಂ ಕುಂದುಗುಮೆನೆ ಬಣ್ಣಿಸುವನಾವಂ?

ಧನದೇವನುವೆಣ್ಬರ್ ತ
ನ್ನನುಜರುಮಹಮಿಂದ್ರರಾಗೆ ನೆರೆದವರೊಳ್ ಮು
ನ್ನಿನ ಭವದ ಪುಣ್ಯಕಲ್ಪಾ
ವನಿಜದ ತನಿವಣ್ಣ ರಸದೆ ತಣ್ಣನೆ ತಣಿವಂ ೯೬

# ಎರಡನೆಯ ಭಾಗ

## ಆದಿ ತೀರ್ಥಂಕರ ಚರಿತಂ

---

### ೧ ನಾಭಿರಾಜ ವಿಭವಂ

ಅನ್ನೆಗಮಿತ್ತ ಜಂಬೂದ್ವೀಪಾಂತರ್ಗತ ಭರತಕ್ಷೇತ್ರ ಮಧ್ಯ ಮಧ್ಯಮ ಖಂಡದೊಳ್ ಅವಸರ್ಪಿಣಿಯೊಳ್ ಭೋಗ ಭೂಮಿಯ ಕಡೆಯ ಭಾಗದೊಳ್

ಮನುಗಳೊಳೀತನೆ ಪದಿನಾ
ಲ್ಕನೆಯಾತಂ ತಪ್ಪದಪ್ಪನೆನಿಸಿಯುಮಂತಾ
ಮನುಗಳೊಳೀತನೆ ಮೊದಲಿಗ
ನೆನಿಸಿದನೇನ್ ನಾಭಿ ನಾಭಿಯೋ ಗುಣಗಣದಾ ೯೭

ಆ ನಾಭಿರಾಜನ ಕಾಲದೊಳ್ ವಿವಿಧ ಧಾನ್ಯ ಭೇದಂಗಳುಂ ಕಲ್ಪವೃಕ್ಷ ಪರಿಕ್ಷಯದೊಳಕೃಷ್ಟ ಪಚ್ಯಂಗಳಾಗಿ ಬೆಳೆದೆಱಗಿರೆಯುಂ ಅವಂ ಪುಲ್ಗಳೆಂದೆ ಬಗೆದು ಪಸಿವಂಗೊಂಡೇನ್ ಗೆಯ್ವೆವೆಂದು ಜನಂ ನಾಭಿಯಲ್ಲಿಗೆ ವಂದರ್. ನಾಭಿರಾಜಂ,

"ಬಗೆಯಲ್ವೇಡ ಸುಧಾ ಮಹೀರುಹದೊಳಾದೌದಾರ್ಯಮಂ ವೀರ್ಯಮಾ
ಯುಗದೊಳ್ ತತ್ತರುಗಿಲ್ಲ ಪಕ್ವಫಲ ನಮ್ರಾಮ್ರಾದಿ ಭೂಜಂಗಳೀ
ಯುಗದೊಳ್ ಕಲ್ಪ ಕುಜಂಗಳಿಂತಿವಱ ಪಣ್ ಭೋಜ್ಯಂಗಳಾರೋಗ್ಯ ಹೇ
ತುಗಳೀ ಪಣ್ಗಳೆ ಭೋಜ್ಯಮೆ"ಂದು ವಿಳಸದ್ಭಾಗ್ಯೋದಯಂ ತೋಱಿದಂ ೯೮

ತೋಱಿ ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂಮಾಡು ವೊಕ್ಕುವಡುಕುವ ಬಯ್ತಿಡುವಕ್ಕಿಮಾಡುವ ವಿವಿಧ ಭಾಜನಂಗಳೊಳಡುವ ಘೃತ ಲವಣ ತೈಲ ಕ್ಷೀರ ದಧಿ ವ್ಯಂಜನಂಗಳೊಳ್ ಸಂಸ್ಕಾರಂ ಮಾಡುವಳವಿಯಱಿದುಣ್ಬುಪಾಯಮಂ ಪುಂಡ್ರೇಕ್ಷುದಂಡಂಗಳಂ ಕಡಿಕಡಿದು ಯಂತ್ರಪೀಡನೆಯಿಂ ರಸಂಗೊಳ್ವ ತೆಱನುಮನಱಿಯೆ ಪೇೞ್ದು,

ಚ್ಯುತಿಯಾಗೆ ಭೋಗಭೂಮಿ
ಸ್ಥಿತಿ ಕಲ್ಪಮಹೀರುಹ ವ್ಯಪಾಯದೊಳಿಂತುಂ
ಕ್ಷಿತಿಪತಿ ಕಲ್ಪ ಮಹೀಜ
ಸ್ಥಿತಿಯಿಂ ತಾನಿಂತು ಜನಮನೇಂ ನಿಱಿಸಿದನೋ ೯೯

ಕುಳಧರನೆನಿಪ ನಾಭಿರಾಜಂಗೆ ಸತಿ ಮರುದೇವಿಯೆಂಬಳ್. ಅನ್ಯೋನ್ಯ ಪ್ರೇಮಮಾಗಿ ನಿಳಿಂಪದಂಪತಿಯನೆ ಪೋಲ್ವ ದಂಪತಿಗೆ ಭಾವಿ ತೀರ್ಥಕರ ಪುಣ್ಯ ದೂತಾಹೂತಂ ಪುರುಹೂತಂ ಬಂದು,

ಕೆದಱಿ ಮನುಷ್ಯದಂಪತಿಗಳಿರ್ದುವನೊಂದೆಡೆಯೊಳ್ ತೆರಳ್ಚಿ ನಾ
ಕದ ಫಣಿಲೋಕದಂಕದ ಪೊಟಲ್ಗಳುಮಿಾ ಪೊಟಲೊಂದು ರಮ್ಯ ಹ
ರ್ಮ್ಯದ ಬೆಲೆಗಂ ಬರಲ್ ನೆಱೆಯವೆಂಬಿನಮುಜ್ಜ್ವಳ ಪಂಚ ರತ್ನ ಭಾ
ಸ್ಪದ ಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ ೧೦೦

ಅಂತು ಸಮೆದ ಪುರವರಕ್ಕಯೋಧ್ಯೆಯುಂ ಸಾಕೇತಮುಂ ವಿನೀತೆಯುಂ ಸುಕೌಶಲೆಯುಮೆಂಬ ಪೆಸರ್ಗಳನಿಟ್ಟು ನಾಭಿರಾಜಂಗೆ ರಾಜ್ಯಾಭಿಷೇಕಂಗೆಯ್ದು ಸಾಮ್ರಾಜ್ಯ ಪಟ್ಟಮಂ ಕಟ್ಟಿ ಪೂಜಿಸಿ ಭಗವದವತರಣ ವಿನಿಹಿತಾಂತಃಕರಣ ನಾಗಿರ್ಪನ್ನೆಗಂ,

ಸುರರಾಜಂ ತಾನೆ ರಾಜ್ಯಾಭಿಷವಣ ವಿಧಿಯಂ ಮಾಡಿದಂ ಸ್ವರ್ಗದಿಂದಂ
ಪುರುದೇವಂ ಬಂದಪಂ ನಂದನನೆನಗೆನಿಸಲ್ಕಾನೆ ಸಂಸಾರ ಸೌಖ್ಯಾ
ಕರನಾಗಿರ್ದಪ್ಪೆನೆಂಬುತ್ಸವದೊಳೆ ಸುಖದಿಂದಿರ್ದನೊಪ್ಪಿರ್ದಯೋಧ್ಯಾ
ಪುರದೊಳ್ ಶ್ರೀ ನಾಭಿರಾಜಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ
೧೦೧

ಆ ಪ್ರಸ್ತಾವದೊಳ್

ಲಯಮಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾ
ಜಯಮಂ ದೋಷ ಗಣಕ್ಕೆ ಲಕ್ಕೆ ತೆಱದಿಂ ಮುನ್ ಮಾಡಿ ಸರ್ವಾರ್ಥ ಸಿ
ದ್ಧಿಯನೀಯಲ್ಕೆ ವಿನೇಯ ಸಂತತಿಗಭಿಪ್ರಾಯಾರ್ಥಸರ್ವಾರ್ಥ ಸಿ
ದ್ಧಿಯಿನುದ್ಭೂತ ತಮಂ ಬರಲ್ಕೆ ಬಗೆದಂ ಸಂಸಾರ ಸಾರೋದಯಂ ೧೦೨

## ೨ ಗರ್ಭಾವತರಣಂ

ಅನ್ನೆಗಮಮರಪತಿ ಪರಮನ ಚರಮ ಗರ್ಭಾವತರಣಮನವಧಿಯಿಂದ ಮಱಿದಱಿದಿಂಗಳುಂಟೆನೆ ಮುನ್ನಮೆ

ಸುರಿವುದು ತಡೆಯದಯೋಧ್ಯಾ
ಪುರದೊಳ್ ನೀನಿಂದೆ ತೊಡಗಿ ವಸು ಧಾರೆಯನಾ
ದರದಿನೆನೆ ಸಹಜ ಭಕ್ತಿಯ
ಭರದಿಂ ಸುರಪತಿಯ ಬೆಸದಿನೊಸೆದಂ ಧನದಂ ೧೦೩

ಮತ್ತಮೆನಿತಾನುಂ ತೆಱದ ಬೆಸಂಗಳಂ ಬೆಸಸುವುದುಂ ಅಮರಕಾಮಿನೀ ಮಹತ್ತರಿಕೆಯರ್ ಜಿನಜನನಿಯ ಮನಮನಱಿದೋಲಗಿಸುವಲ್ಲಿ,

ಮನವೊಲ್ದಿಂದ್ರನಿವಾಸ ಸಂಭವ ಶುಚಿ ದ್ರವ್ಯಂಗಳಿಂ ಗರ್ಭಶೋ
ಧನಮಂ ದೇವಿಯರಿರ್ದು ಮಾಡೆ ಪೆಱದಿನ್ನೇನೆಂಬುದಾ ಕಾಂತೆಗಂ
ದು ನಯಂ ಬೇಱೆ ಬೆಡಂಗು ಬೇಱೆ ಪೊಳೆವಂಗಚ್ಛಾಯೆಯುಂ ಬೇಱೆ ತೊ
ಟ್ಟನೆ ಮೆಯ್ದೋಱೆ ವಿಶುದ್ಧಮಪ್ಪ ಪಳಿಕಿಂ ಪೆಣ್ಮಾಡಿದಂತೊಪ್ಪಿದಳ್ ೧೦೪

ಮತ್ತಮಮರಾಧೀಶ ಶಾಸನದೊಳ್ ನಾಭಿರಾಜ ರಾಜಮಂದಿರಾಂಗಣದೊಳ್ ಧನದಂ ರತ್ನವೃಷ್ಟಿಯಂ ಪ್ರತಿದಿನಂ ಸುರಿಯೆ,

ಧರೆ ರತ್ನಗರ್ಭಮಾದುದು
ಸುರರೆಲ್ಲಂ ಹರ್ಷಗರ್ಭರಾದರ್ ಪಿರಿದ
ಚ್ಚರಿಯೆನೆ ಹಿರಣ್ಯಗರ್ಭನ
ನಿರುಪಮ ಗರ್ಭಾವತರಣ ಮಂಗಳ ವಿಧಿಯೊಳ್ ೧೦೫

ಒಂದು ದಿವಸಮಾ ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲ ವಸನೆಯಾಗಿ,

ಶ್ರೀಗೆ ಕುಳಸದನಮೆನೆ ತೊಳಪ ಮಣಿ ಭವನದೊಳ್
ರಾಗರಸಮೊದವೆ ಸರಸಿರುಹ ಸಮ ವದನದೊಳ್

ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್
ಲಳಿತಗಂಗಾನದೀ ಲಹರಿಕಾ ತಲ್ಪದೊಳ್
ದೇವಿ ಮರುದೇವಿ ವಿಶದೀಕೃತಾಶಾಂತದೊಳ್
ಭಾವಿ ಜಿನ ಜನನಿ ಸತಿ ಪವಡಿಸಿ ನಿಶಾಂತದೊಳ್
ಚಂಡಗಜಗಮನೆ ಪರಿಖಂಡಿತಾಘೌಳಿಯಂ
ಕಂಡಳೀರೆಂಟುಮೊಳ್ಗನಸಿನೆಸೆವೋಳಿಯಂ
ನೋಡಿ ಗಜಗಮನೆ ಕನಸೆಂದು ಬಗೆವನ್ನೆಗಂ
ತೀಡೆ ಕಿವಿಗುಚಿತಮಂಗಳ ನಿನದಮನ್ನೆಗಂ
ನಿಜಮುಖಾಂಬುಜಮುಮಂಬುಜಮುಮೊಡನಲರ್ವಿನಂ
ನಿಜದ ಚೆಲ್ವಮರೆ ನಿಡುವುರ್ಬುಗಳ್ ನಿಮಿರ್ವಿನಂ
ಬಗೆಗೊಳಿಸಿ ತಳರ್ದು ಗಜಗಮನೆ ಸುರನಾರಿಯರ್
ಮುಗಿದ ಕೈವೆರಸು ಬರೆ ಜನಮನೋಹಾರಿಯರ್
ಬಂದು ಜಗದಧಿಪನಂ ಸೋಂಕಿ ಕುಳ್ಳಿರ್ಪುದುಂ
ಬಂದ ಬರವವನಿಪತಿಗೊಸಗೆಯಂ ತರ್ಪುದುಂ
ಕುಂದ ದಳ ದವಳ ದಶನಾಂಶುಗಳ್ ಪೊಳೆವಿನಂ
ಸಂದ ಕನಸುಗಳನವನೊಸೆದು ಸತಿ ಬಗೆವಿನಂ
ಕ್ರಮದಿನಱಪುವುದುಮವನಱದು ಧರಣೀಶ್ವರಂ
ನಿಮಗೆ ಮಗನುಚಿತಧವಳಾತಪತ್ರೇಶ್ವರಂ
ದಿವದಿನವತರಿಪನಪರಿಮಿತ ಪುಣ್ಯೋದಯಂ
ದಿವಿಜಪತಿ ಕೃತ ಮಹಾಶ್ಚರ್ಯ ಮಹಿಮೋದಯಂ
ತಡೆಯದೆನೆ ವನಜಮುಖಿ ಪಿರಿದುಮನುರಾಗದಿಂ
ದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ ೧೦೬

ಅನ್ನೆಗಂ ಸರ್ವಾರ್ಥಸಿದ್ಧೀಶ್ವರನಾ ಭುವನಾಂಬಿಕೆಯ ಗರ್ಭಸರೋವರಾಂಬುವಿನೊಳ್ ಚಂದ್ರಬಿಂಬದಂತೆ ಸಂಕ್ರಮಿಸಿದಾಗಳ್ ದೇವೇಂದ್ರಂ ಚತುರ್ನಿಕಾಯಾಮರರ್ವೆರಸಿ ಪ್ರಥಮ ಕಲ್ಯಾಣಮಂ ನಿರ್ವರ್ತಿಸಿದಂ. ಗರ್ಭಂ ಬಳೆಯೆವಳೆಯೆ,

ಜ್ಞಾನಮಯಂ ತೇಜೋನಿಧಿ
ತಾನಿರ್ದುಂ ತಾಯ ಗರ್ಭದೊಳ್ ಪೀಡೆಯನಂ
ತೇನಂ ಮಾಡಿದನಿಲ್ಲ ಕೃ
ಶಾನುವ ನೆಲಲಳುರದಂತೆವೊಲ್ ಕನ್ನಡಿಯಂ ೧೦೭

ಪಳಿಕಿನ ಕೊಡದೊಳ್ ಸೊಡರ್ಗುಡಿ
ಬೆಳಗುವವೊಲ್ ಶುದ್ಧಗರ್ಭಗೃಹದೊಳ್ ತೇಜೋ
ನಿಳಯಂ ಬೆಳಗಿದನಱಿವಿನ
ಬೆಳಗಿನ ಮೊಳೆ ಮೊಳೆತು ಬಳೆವುದೊಂದಚ್ಚರಿಯೆ ೧೦೮

ಬರೆ ಚೈತ್ರಂ ಕೃಷ್ಣ ಪಕ್ಷಂ ದೊರೆಕೊಳೆ ನವಮೀ ವಾಸರಂ ಪೊರ್ದೆ ಲೋಕೋತ್ತರಮಾಗಿರ್ದುತ್ತರಾಷಾಢದೊಳತಿ ಶುಭದಂ ಬ್ರಹ್ಮಯೋಗಂ ಮನಂಗೊಂಡಿರೆ ಭಾಸ್ವನ್ನಾಭಿರಾಜಾಂಗನೆ ವಿಶದ ಯಶೋಭಾಗಿಯಂ ಭವ್ಯ ಪದ್ಮಾಕರಬೋಧಾ ದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್ ೧೦೯

ತ್ರಿದಶಾನೇಕಾನಕಂಗಳ್ ಮೊಳಗಿದುವು ಕರಾಸ್ಫಾಳನಂ ದೇವರಿಂದಾಗದೆ ಮುನ್ ಕಲ್ಪದ್ರುಮಂಗಳ್ ಪೊಸತಲರ್ದಲರಂ ತಾಮೆ ಸಾಲ್ವನ್ನೆಗಂ ಸೂಸಿದುವೇಕಾಯ್ತೊ ಕಿರೀಟಕ್ಕವನತಿಯೆನೆ ದೇವೋತ್ತಮಾಂಗಂಗಳುಂ ಬಾಗಿದುವಾ ತ್ರೈಲೋಕ್ಯನಾಥೋದಯಮನಱಿಪುವಂತಾ ತ್ರಿಳೋಕಕ್ಕಮಾಗಳ್ ೧೧೦

## ೩ ಜನ್ಮಾಭಿಷೇಕೋತ್ಸವಂ

ವಾಸವನಾಸನ ಕಂಪದಿ
ನಾ ಸಮಯದೊಳವಧಿಯಂ ಪ್ರಯೋಗಿಸಿ ಬೋಧಾ
ವಾಸ ಪ್ರಿಯನುದಯಮನಱಿ
ದಾಸನದಿಂದೆದ್ದು ಮೂಱು ಸೂಱ್ ಪೊಡೆವಟ್ಟಂ ೧೧೧

ಅಂತು ಪೊಡೆವಟ್ಟು ಜನ್ಮಾಭಿಷೇಕೋದ್ಯುಕ್ತ ಚಿತ್ತನಾದಾಗಳ್,

ನೆಗೞ್ದ ದೇವೇಂದ್ರರೆಲ್ಲಂ ಬಳಸಿ ಬರೆ ಮದಶ್ರೀಯುತೈರಾವತ ಸ್ಕಂ
ಧಗತಂ ನಾನಾತಪತ್ರಸ್ಥಗಿತ ದಶ ದಿಶಾ ಮಂಡಲಂ ದೇವತೂರ್ಯಾ
ನುಗ ದೇವೀ ಗೀತ ಜೈನಸ್ತವ ಸಮುಪಹಿತಾತ್ಮೀಯಚಿತ್ತಂ ವಿಳಾಸಂ
ಮಿಗೆ ಸೌಧರ್ಮೇಂದ್ರನಂದಾ ಶಚಿವೆರಸು ಮಹೋತ್ಸಾಹದಿಂ ಬಂದನಾಗಳ್ ೧೧೨

ಅಂತು ಗಗನತಳದಿನವತರಿಸಿ ಸಾಕೇತಮಂ ಬಳಸಿ ದೇವನಿಕಾಯಮಿರೆ, ಸೌಧರ್ಮೇಂದ್ರ ಪ್ರಮುಖ ಚತುರ್ನಿಕಾಯಾಮರೇಂದ್ರವೃಂದಂ ನಾಭಿರಾಜ ರಾಜಗೇಹಾಂಗಣದೊಳ್ ಸಂದಣಿಸಿ ಬಂದಿರೆ, ಶಚೀ ಮಹಾದೇವಿ ತಿರೋಹಿತ ಶರೀರೆಯಾಗಿ ಪ್ರಸೂತಿಗೃಹಮಂ ಪೊಕ್ಕು ತೇಜೋಧಿಕನಪ್ಪ ಬಾಳನನಱ್ಕರ್ತು ನೋಡುತ್ತುಮಿರ್ಬರುಮಂ ಮೂಮೆ ಬಲಗೊಂಡು,

ಎಱಗಿ ಜಗತ್ರಯ ಗುರುಗೆರ್ದೆ
ಯೆಱಕದೆ ಪೊಗೞ್ದಖಿಳ ಭುವನ ಜನನಿಯನಾಗಳ್
ಮಱೆಯಿಸಿ ಮಾಯಾ ನಿದ್ರೆಯಿ
ನುಱೆ ಮಾಯಾ ಶಿಶುವನಿರಿಸಿ ಮುಂದಂಬಿಕೆಯಾ ೧೧೩

ಪಡೆಯಲ್ಕಾಗದ ನಿಧಿಯಂ
ಬಡವಂ ಪಡೆದಂತೆ ಕಮಳದಳ ಕರತಳದಿಂ
ಪಿಡಿದೆತ್ತಿಕೊಂಡ ಸಂತಸ
ದೊಡಮೆಯನಾಂ ಪೊಗೞಲಱಿಯೆನಿಂದ್ರಾಂಗನೆಯಾ ೧೧೪

ಮಂಗಳಮನೆ ಪಾಡುತ್ತುಂ
ಮಂಗಳ ಧಾರಿಣಿಯರಾಗಿ ಮುಂದಂ ನಡೆವಾ
ಶಾಂಗನೆಯರಿಂದೆ ದಿವಿಜೇಂ
ದ್ರಾಂಗನೆ ಕರಮೆಸೆದು ಹಂಸಗತಿಯೊಳ್ ಬಂದಳ್ ೧೧೫

ಬಂದು ಜಗತ್ರಿತಯ ಪತಿಯಂ ತ್ರಿದಶ ಪತಿಯ ನೀಡಿದ ಭುಜಯುಗಳಕ್ಕೆ ನೀಡಿದಾಗಳ್ ನಿಜಾಂಕಮನೇಱಿಸಿಕೊಂಡು,

ತ್ರಿಜಗನ್ನಾಥನ ಮಜ್ಜನಕ್ಕೆ ಮಣಿಪೀಠಾಕಾರದಂತಾಗಿ ವಿ
ಶ್ವ ಜಗತ್ಪೂಜಿತಮಾಗಿ ಪೆಂಪುವಡೆದಾ ಹೇಮಾಚಳೇಂದ್ರಕ್ಕೆ ಕ
ಲ್ಪಜರಂ ಪೋಗಲೆ ಸನ್ನೆಗೆಯ್ಯೆ ಭಗವಜ್ಜನ್ಮಾಭಿಷೇಕೋತ್ಸವ
ಧ್ವಜಮಂ ಪೋಲ್ತುದು ರತ್ನರಂಜಿತ ಭುಜಾದಂಡಂ ಸುರಾಧೀಶನಾ ೧೧೬

ಸೌಧರ್ಮೇಂದ್ರನೇಱುದೈರಾವತಗಜೇಂದ್ರಕ್ಕೆ ನಿಜ ಗಜೇಂದ್ರಂಗಳಂ ಪಕ್ಕು ಮಾಡಿ,

ಹಿಮಕರ ಬಿಂಬ ನಿಭ ಚ್ಛ
ತ್ರಮನೀಶಾನೇಂದ್ರನೆತ್ತಿದಂ ತತ್ಕರ ವಿ
ಭ್ರಮದಿಂ ಪದಪೊದವೆ ಸನ
ತ್ಕುಮಾರ ಮಾಹೇಂದ್ರರಿಕ್ಕಿದರ್ ಚಾಮರಮಂ ೧೧೭

ನೆಗಱ್ದೈರಾವತ ದಂತಿಗಾದುದು ಮೊಗಂ ಮೂವತ್ತೆರಡಱ್ನೋಱ್ಪೊಡಾ
ಮೊಗಮೊಂದೊಂದಱೊಳೆಂಟು ಕೋಡವಱೊಳಂತೊಂದೊಂದಱೊಳ್ ಪೂಗೊಳಂ
ನೆಗಱ್ದೊಂದೊಂದೆಸೆದಿರ್ಕುಮಾ ಕೊಳಗಳಂತೊಂದೊಂದಱೊಳ್ ಚಿತ್ರಪ
ತ್ರಗಣಂ ಪದ್ಮಿನಿ ನಾಡೆ ಚೆಲ್ವನೊಳಕೊಂಡೊಂದೊಂದೆ ಕಣ್ಗೊಪ್ಪುಗುಂ ೧೧೮

ಪೊಸ ಪೂವಬ್ಜಿನಿಯೊಂದಱೊಳ್ ಸೊಗಯಿಕುಂ ಮೂವತ್ತೆರಡ್ ಪೂವಿನೊಳ್
ಪೊಸಗಂಪಂ ಪುದಿದೊಪ್ಪಿ ತೋಱುವೆಸಳ್ಗಳ್ ಮೂವತ್ತೆರಡ್ ಚೆಲ್ವನ
ಪ್ಪೆಸಱೋರೊಂದಱ ಮೇಲೆ ಲೀಲೆ ಮಿಗೆ ಮೂವತ್ತಿರ್ವರೋರಂತೆ ನ
ರ್ತಿಸೆ ದೇವಾಂಗನೆಯರ್ ಬೆಡಂಗನೊಳಕೊಂಡತ್ತಿಂದ್ರ ರುಂದ್ರ ದ್ವಿಪಂ ೧೧೯

ವದನಕ್ಕೆಮ್ಮ ತಳಕ್ಕೆ ನೀಳ್ದ ನಗೆಗಣ್ಗಂ ತಾಂ ಗಡಂ ತನ್ನ ನೀ
ಳ್ದ ದಳಂಗಳ್ ಗಡ ಪೋಲ್ವೆಯೆಂಬ ಸೆಣಸಿಂ ಮಿಕ್ಕೇವದಿಂದಿಕ್ಕಿ ಮೆ
ಟ್ಟಿದರೀ ಕಾಂತೆಯರೀ ಸರೋರುಹ ದಳ ವ್ರಾತಂಗಳಂ ತಪ್ಪದೆಂ
ಬುದನೆಂಬನ್ನೆಗಮೇಂ ಬೆಡಂಗೆಸೆದುದೋ ದೇವಾಂಗನಾನರ್ತನಂ ೧೨೦

ನಡೆ ನೋಡಲ್ ರೂಪು ಕೇಳಲ್ ನುಡಿ ಪುರದ ಜನಕ್ಕಾಯ್ತು ಮುನ್ನಂತೆ ಮೇಗ ಣ್ಗಡರ್ದಾಗಳ್ ಮೆಯ್ಯ ಕಾಣಲ್ ಕಳಕಳಮಿನಿಸಂ ಕೇಳಲಾಯ್ತಂತು ಮತ್ತಂ ನಡೆಗೊಂಡಾಗಳ್ ತನುವ್ಯಕ್ತಿಯನಱಿಯಲಣಂ ಬಾರದಾಯ್ತತ್ತಣಂ ಕಾ ಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಳೋದ್ಗಾಮಿಯಾಯ್ತಿಂದ್ರ ಸೈನ್ಯಂ ೧೨೧

ಅಂತು ಪೋಗಿ ಮಂದರಾಚಳಮನೆಯ್ದಿ ಪಾಂಡುಕವನದ ಪೂರ್ವೋ ತ್ತರಾಶಾ ಮುಖ ನಿವಾಸಿಯಾಗಿ ಅಷ್ಟಮಿಾಚಂದ್ರಾಕೃತಿಯೊಳಮಷ್ಟ ಮಂಗಳ ಪರಿವೇಷ್ಟನದೊಳಂ ನೆಱೆದು,

ಕ್ಷೀರೋದ ವಾರಿಧಾರಾ
ಪೂರದ ಚೆಲ್ವಿಂಗೆ ಸೆಣಸುವಂತಭಿನವ ನೀ
ಹಾರದ ಬೆಳ್ಪನೆ ಬಾರಿಸಿ
ಬಾರಿಸಿ ಪಾಂಡುಕ ಶಿಳಾತಳಂ ಸೊಗಯಿಸುಗುಂ ೧೨೨

ಅಲ್ಲಿ ದೇವರಾಜಂ ಶ್ರೀ ಮಂಟಪಮಂ ವಿರಚಿಸಿ ಮೃಗರಾಜ ವಿಷ್ಟರದೊಳ್ ಬಾಳಕನಂ ಪೂರ್ವಾಭಿಮುಖ ನಿವಿಷ್ಟನಂ ಮಾಡುವುದುಂ,

ತನು ಕಿಱಿದಾದೊಡಮುದ್ಯ
ತ್ತನು ಪ್ರಭಾ ಪ್ರಸರಮೆಸೆದು ಪಸರಿಸಿ ಸಿಂಹಾ
ಸನಮಂ ಪುದಿದಿರೆ ದೇವಂ
ಕನಕ ಕನಚ್ಛಿಖರಿ ಶಿಖರ ಶೇಖರನಾದಂ ೧೨೩

ಅಲ್ಲಿಂ ಬಱಿಯಂ ಪೂರ್ಣಕಳಶಂಗಳಂ ಕಳಶೋದ್ಧಾರಮಂತ್ರ ಪೂರ್ವಕಂ ಸೌಧರ್ಮೇಂದ್ರನುಮಿಾಶಾನೇಂದ್ರನುಮೆತ್ತಿಕೊಂಡು,

ಇತರೇಂದ್ರರ್ ಪರಿಚಾರಕ ಪ್ರಭೃತಿಯಿಂ ಮುಂದಾಡೆ ದೇವಾಂಗನಾ
ನ್ವಿತ ದೇವಾಧಿಪ ಕಾಂತೆ ಕನ್ನಡಿ ಸೊಡರ್ ಪೂಮಾಲೆ ಭೃಂಗಾರನು
ಕ್ಷತಮೆಂಬುಜ್ಜ್ವಳಮಂಗಳೋಪಕರಣ ದ್ರವ್ಯಂಗಳಂ ನೀಡೆ ಸಂ
ತತಮೇನಂದು ಜಿನಾರ್ಭಕಂಗೆಸೆದುದೋ ಜನ್ಮಾಭಿಷೇಕೋತ್ಸವಂ ೧೨೪

ಕ್ಷೀರಾಬ್ಧಿಯ ನೀರಲ್ಲದೆ
ಧೀರನ ಮಜ್ಜನಕೆ ಪೆಱವು ನೀರ್ ತಗವೆಂದಾ
ವಾರಾಶಿವರಂ ಸುರಜನ
ದಾರಿ ಮನೋಹಾರಿ ನೀಳ್ದುವೆರಡುಂ ಕೆಲದೊಳ್ ೧೨೫

ಅಯ್ದನೆಯ ಜಲಧಿವರಮಿರ
ದೆಯ್ದುವ ಮೊಗೆವಂತೆ ಮೊಗೆದುಮೋರೊರ್ಬರ ಕೈ
ಗೆಯ್ದಿಸುವ ಬೇಗಮುಂ ಮನ
ಮೆಯ್ದಿದುದಿಲ್ಲಮರಚರಿತಮೇನಚ್ಚರಿಯೋ ೧೨೬

ಅಂತು ದೇವರ್ ದೇವನೊಳಾವಗಮಾದ ತಮ್ಮಾದರದಿಂ ಮಾಲೆಗಟ್ಟಿ ದುಗ್ಧ ವಾರಿ ಪೂರಿತ ಕನಕ ಕಲಶಂಗಳಂ ತಂದು ಗೊಂದಳಿಸಿ ಸಂದಸಿಣಿ ನೀಡಿದಾಗಳ್, ನಿಜ ಭುಜ ಸಹಸ್ರೋದ್ಧೃತ ಕನಕ ಕುಂಭ ವಿಗಳಿತ ಕ್ಷೀರ ವಾರಿ ಧಾರೆಯಂ ಜಯ ಜಯ ನಿನದಪೂರ್ವಕಂ ಜಿನಸವನ ಪ್ರಾರಂಭದೊಳ್ ಸೌಧರ್ಮೇಂದ್ರನು ಮೀಶಾನೇಂದ್ರನುಂ ಮಿಸಿಸಿದಾಗಳ್,

ಆ ದುಗ್ಧ ಧಾರೆ ಕರಮಿಂ
ಬಾದುದು ಜಿನ ಮಸ್ತಕಾಗ್ರದೊಳ್ ಗಂಗಾ ಕೂ
ಟೋದಗ್ರ ಶಿಖರದೊಳ್ ಚೆ
ಲ್ವಾದಮೆ ಮಿಗೆ ಸುರಿವ ಗಗನ ಗಂಗಾನದಿವೊಲ್ ೧೨೭

ಜಳನಿಧಿ ತೊಱೆಗಳನೆನಿತುಮ
ನೊಳಕೊಳ್ವವೊಲಿನಿಸು ತಳರದಾಶ್ಚರ್ಯ ಮಹಾ
ಜಳನಿಧಿ ಪಯಃಪ್ಲವಂಗಳ
ನೊಳಕೊಂಡಂ ಸುರರ ಮಿಸಿಸುವವಸರದಾಗಳ್ ೧೨೮

ಪಸರಿಸಿದ ಪಯಃಪೂರದ
ಪೊಸವೆಳ್ಪ ನಿಜಾಂಗರುಚಿಯ ಪೊಱಪೊಱಗೆ ಪೊದ
ಱ್ದೆಸೆದಿರೆ ಬೆಳ್ಮುಗಿಲಿಂದಂ
ಮುಸುಕಿದ ಬಾಳಾರ್ಕ ಬಿಂಬಮಿರ್ಪಂತಿರ್ದಂ ೧೨೯

ಜಿನ ನಾಥ ಸ್ನಪನಾಂಬು ತಜ್ಜಿನ ತನು ಶ್ರೀ ಸಂಗದಿಂ ತಾನೆ ಪಾ
ವನಮಾಯ್ತೇ ತನಗಿರ್ಕೆಯಾದ ಕಡಲಂ ಕುಂಭಂಗಳಂ ಪೊಕ್ಕ ದೇ
ವ ನಿಕಾಯಂಗಳನಿಂದ್ರರಂ ಸುರವಧೂ ವೃಂದಂಗಳಂ ಮೇರು ನಂ
ದನ ಭೂ ಪ್ರಾಂತಮುಮಂ ಪವಿತ್ರಮೆನಿಸಿತ್ತಾ ನೀರ್ಗದಾಶ್ಚರ್ಯಮೇ ೧೩೦

ನರಲೋಕಂಬರಮುಣ್ಮಿ ಪೊಣ್ಮಿದ ಪಯಃಪೂರಂಗಳಿಂದಂ ಮಹೀ
ಧರ ಕಾಂತಾರ ನದೀ ನದ ಪ್ರಕರಮುಂ ವಿಶ್ವಾವನೀ ಭಾಗಮುಂ
ನರ ನಾರೀ ಜನಮುಂ ಪವಿತ್ರತರಮಾಯ್ತೆಂದಂದೆ ಕೇಳ್ವಂಗೆ ಬಿ
ತ್ತರಿಪಂಗಾದಮ ಬುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ ೧೩೧

ಮಜ್ಜನ ಪೀಠಂ ಸುರಗಿರಿ
ಮಜ್ಜನ ಜಳವಮೃತ ಜಳಧಿ ಜಳವಮರೇಂದ್ರಂ
ಮಜ್ಜನವಳ್ಳನುಮೆನೆ ಜಿನ
ಮಜ್ಜನ ಮಹಿಮೆಯ ಬೆಡಂಗನೇವಣ್ಣಿಪುದೋ ೧೩೨

ಜಳ ಗಂಧಾಕ್ಷತೆ ಪುಷ್ಪಾ
ವಳಿ ಚರು ದೀಪ ಪ್ರದೀಪ ಧೂಪ ಫಲಂಗಳ್
ಕುಳಿಶಾಯುಧನರ್ಚಿಸೆ ತೊಳ
ತೊಳ ತೊಳಗಿದುವೆಳಸಿ ಬಳಸಿ ಜಿನನಡಿದಳಿರೊಳ್ ೧೩೩

"ಜಯ ಗುಣಮಣಿರತ್ನಾಕರ
ಜಯ ಭುವನ ತ್ರಯ ಲಲಾಮ ಜಯ ಮನಸಿಜ ದು
ರ್ಜಯ ಜಯ ವಿನೇಯ ಬಾಂಧವ
ಜಯ ಮಂದರ ಶಿಖರಿ ಶಿಖರ ರತ್ನೋತ್ತಂಸಾ" ೧೩೪

ಎಂದು ಪರಿಸಮಾಪ್ತಿ ಸವನಾರ್ಚನ ಸ್ತವನ ಸಮಯಾನಂತರಮಿಂದ್ರಾಣಿ ಭಗವದಂಗಸಂಗತ ಜಳ ಕಣಂಗಳಂ ದೇವಾಂಗವಸ್ತ್ರಂಗಳೊಳೊತ್ತಿ ಕಳೆದು ಸುಗಂಧ ದ್ರವ್ಯಂಗಳಂ ಪೂಸಿ ತಿಳಕಮನಿಟ್ಟು ಮಣಿಮಯ ಕಂಠಿಕೆಯಂ ಕಟ್ಟಿ ಬಾಹುಯುಗಳಕ್ಕೆ ಕೇಯೂರ ಹಾರಾಂಗದ ಕಟಕಾಳಂಕಾರಂ ಮಾಡಿ ಕಟಿತಟದೊಳ್ ಮಾಣಿಕ್ಯಮಣಿ ಕಿಂಕಿಣೀ ದಾಮಮುಮಂ ತಗುಳ್ಚಿ ಮೃದು ಪದಂಗಳೊಳ್

ಕಳರವ ರಣಿತ ನೂಪುರಂಗಳಂ ತುಡಿಸಿ ದಿವಿಜೇಂದ್ರೋತ್ಸಂಗಸಂಗತಂ ಮಾಡಿದಾಗಳ್,

ಪರಮನ ನಿರತಿಶಯಾಂಗ
ಸ್ವರೂಪಮಂ ನೆಱೆಯೆ ನೋಡಲಾವೆಡೆಗಂ ತ
ನ್ನೆರಡುಂ ಕಣ್ಗಳ್ ನೆಱೆಯದೆ
ಸುರೇಂದ್ರನುಂ ಗಡ ಸಹಸ್ರಲೋಚನನಾದಂ ೧೩೫

ಅಂತು ನಿರ್ವರ್ತಿತ ಜನ್ಮಾಭಿಷೇಕನಾಖಂಡಳನಮರ ಸಮಿತಿವೆರಸಯೋಧ್ಯಾಪುರಕ್ಕಭಿಮುಖನಾಗಿ ಗಗನ ತಳದಿಂದವತರಿಸಿ ರಾಜಭವನಮಂ ಪೊಕ್ಕು,

ಕಳಧೌತೋಜ್ಜ್ವಳ ಕೂಟಕೋಟಿ ಘಟಿತ ಶ್ರೀ ಗೇಹದಿಂ ಮುಂದೆ ಮಂ
ಗಳ ಕಾರ್ಯೋಚಿತ ಮಾಗೆ ಮುನ್ನಮೆ ಸುರಾನೀಕಂ ಜನಂಗಳ್ ಮನಂ
ಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ ಬಾಲನಂ
ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟೀಂ ಸಂತಸಂಬಟ್ಟನೋ ೧೩೬

ಆಗಳ್ ಸುತ ಮುಖ ನಿರೀಕ್ಷಣ ಜನಿತ ಪುಳಕನಪ್ಪ ನಾಭಿಮಹೀಭುಜನಿಂದ್ರಾಣೀ ವದನ ಚಂದ್ರಿಕಾ ವಿಘಟಿತ ನಿದ್ರಾ ಮುದ್ರಿತ ನಯನ ನೀಳೋತ್ಪಳೆಯಪ್ಪ ಜಗದ್ಗುರು ಜನನಿಯುಂ ಬಂದು ನಿಜ ತನೂಜ ವದನಮನಲ್ಕರ್ತು ನೋಡಿ, ದಿವಿಜಸಮಿತಿಯಿಂ ತಮ್ಮ ಮಗಂಗಾದ ಮಹಿಮೆಗೆ ಮನಂಗೊಳಲಾದ ಉತ್ಸವಂ ಪೊಗಟಲರಿದು. ಆಗಳ್,

ದೊರೆ ನಿಮಗಿಲ್ಲ ಭೂ ಭುವನದೊಳ್ ಪೆಱರಿರ್ವರೆ ನೋಂತಿರೀ ಜಗ
ದ್ಗುರುಗೆ ಪಿತೃದ್ವಯಂಗಳೆನಿಸಲ್ ಮೆಱೆವರ್ ಪೆಱರಾರೊ ನೀವೆ ಪೂ
ಜ್ಯರಿರೆಮಗೆಂದು ದಿವ್ಯ ವಸನ ಪ್ರಸವಾಭರಣಂಗಳಿಂದಮಾ
ದರಮಮರ್ವಂತು ತದ್ಯುಗಳಮಂ ಪರಿಪೂಜಿಸಿದಂ ಸುರೇಶ್ವರಂ ೧೩೭

ಅಂತು ಪೂಜಿಸಿ ಜನ್ಮಾಭಿಷೇಕ ವ್ಯತಿಕರಮನವರ್ಗೆ ಮಹೋತ್ಸಾಹಕರಮಾಗೆ ಸವಿಸ್ತರಮುಱಿಪಿ ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೊಸಗೆ ಮರುಳ್ಗೊಂಡು ನಿರ್ಭರ ಕ್ರೀಡಾ ಪರವಶರಾದಾಗಳ್ ತಾನುಮಾನಂದ ನಾಟಕಮನಾಡಲ್ ಬಗೆದು, ಭಗವಜ್ಜನ್ಮಾಭಿಷೇಕ ಸಂಬಂಧಿಯಾಗೆ

ತನ್ನ ಪೊಸತೆ ಸಮೆದ ಸಮವತಾರ ರೂಪಮುಮಂ ದಶಾವತಾರ ರೂಪ ಗರ್ಭ ಸಂದರ್ಭಂಗಳಪ್ಪ ಶೇಷಾಶೇಷ ರೂಪಕಂಗಳುಮಂ ಸುರಾಸುರಸಭೆಗಂ ನಾಭಿರಾಜಾದಿ ಮನುಜ ಸಭೆಗಂ ಮೆಱೆಯಲೆಂದು ನಾಂದೀ ವಿಧಿಯಂ ನಿರ್ವರ್ತಿಸಿ ರಂಗಂಬೊಕ್ಕು ಲೋಕಾಕಾರಮನಭಿನಯಿಸಿ ನಿಂದು ಪುಷ್ಪಾಂಜಳಿಯಂ ಸೂಸಿ ನಾಕ ಲೋಕ ವಾದ್ಯಂಗಳೊಳ್ ಕಿನ್ನರೀ ಜನ ಮಧುರ ಗೀತಾನುಗತಂಗಳನುಕ್ರಮದೊಳೆ ನೆಗಱೆ,

ಕರಣಂ ರೇಚಕಮಂಗಹಾರಮಿನಿತೆಂದೋದುತ್ತು ಮಿರ್ಪೋದದ
ತ್ರಿರಲೀ ನಾಟ್ಯರಸಂ ಸಮಸ್ತಸುರ ವೃಂದಾಧೀಶನಿಂದಂ ಪೊನ
ಲ್ವರಿದತ್ತೆಂಬಿನಮಾಡುವಲ್ಲಿ ಮಕುಟ ವ್ಯಾಲಗ್ನ ರತ್ನ ಪ್ರಭಾ
ಪರಿವೇಷಂ ಲಲಿತೇಂದ್ರ ಚಾಪ ರುಚಿಯಂ ಮಾಡಿತ್ತು ದಿಕ್ಚಕ್ರದೊಳ್ ೧೩೮

ಎಳೆಯೊಳ್ ತೋಱಿದರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾ
ಗಳೆ ಗೆಂಟಾಗಳೆ ಸಾರೆಯಾಗಿ ಪೊಳೆವಂ ಸೂಕ್ಷ್ಮಾಂಗನಾಗಿರ್ಪನಾ
ಗಳೆ ದಿಗ್ವ್ಯಾಪಕನಪ್ಪನಿಂತು ಪಲವುಂ ಚೋದ್ಯಂಗಳಿಂ ವಿಕ್ರಿಯಾ
ಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ ೧೩೯

ಅಂತು ತನ್ನ ತಾಂಡವಾರಂಭದೊಳಳವಿಗಱಿದ ರಾಗದಿಂ ನಿರ್ಮಿಸಿದ ಭುಜಶಾಖಾ ಸಹಸ್ರಂಗಳೊಳ್ ದೇವ ಗಣಿಕೆಯರಾಡುವಾಗಳ್

[ಳಿಯೊಳ್
ಯುವ ಸಂಘಾತಮದೊಂದು ತೋಳ್ದುಱುಗಲೊಳ್ ಮತ್ತೊಂದು ತೋಳೊ
ಯುವತೀ ವ್ರಾತಮನೇಕ ಭೇದ ರಸ ಭಾವಂಗಳ್ ಪೊದಱ್ದುಣ್ಮೆ ಪೊ
ಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ ಸುತ್ರಾಮನಂದಿಂತು ತಾಂ
ಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ ೧೪೦

ಅಂತು ದಿವಿಜ ಸಾಮಾನಿಕ ಜನಕ್ಕಂ ನಾಭಿರಾಜಾದಿ ಮನುಜ ಸಭೆಗಂ ಅತ್ಯಾಶ್ಚರ್ಯಮಂ ಮಾಡಿದಾಗಳ್

ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ
ಸುರರಾಜಂ ಸಭೆ ದೇವಮರ್ತ್ಯಸಭೆ ಸಂದಾರಾಧ್ಯನೀಶಂ ಜಗ
ದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇ ಮಾತೊ ಸಾ
ಸಿರಮುಂ ನಾಲಗೆಯುಳ್ಳ ವಾಸುಕಿಯುಮಿನ್ನೇನೆಂದದಂ ಬಣ್ಣಿಪಂ ೧೪೧

ಪುರಂದರನಾನಂದ ನೃತ್ಯಾವಸಾನದೊಳೀ ಪರಮೇಶ್ವರಂ ಧರ್ಮಾಮೃತ ವರ್ಷದಿಂ ಭವ್ಯ ಸಸ್ಯ ಸಮೃದ್ಧಿಯಂ ಮಾಡುವುದಱಿಂ ವೃಷವೆಂಬುದು ಧರ್ಮ ಮದಱಿಂದೊಪ್ಪುವುದಱಿಂದಂ ಸ್ವರ್ಗಾವತರಣ ಸಮಯದೊಳ್ ನಿಜ ಜನನೀ ವದನ ವನಜಮಂ ಸ್ವಪ್ನದೊಳ್ ಧವಳ ವೃಷಭಾಕಾರದಿಂ ಪೊಕ್ಕುದಱಿಂದಂ ವೃಷಭಸ್ವಾಮಿಯೆಂದು ಪೆಸರನಿಟ್ಟು, ಮಜ್ಜನಮಂಡನ ಕ್ರಿಯೆಗಳ್ಗೆ ದೇವಿಯರನೆ ದಾದಿಯರ್ಮಾಡಿ, ಸಮಯಾನುರೂಪ ವೇಷದ ಸುರ ಕುಮಾರಕರನೊಡನಾಡಿ ಗಳ್ ಮಾಡಿ, ದೇವಸಮಾಜಂಬೆರಸು



ಕ್ರಮದಿಂಜನ್ಮಾಭಿಷೇಕೋತ್ಸವಮನಮರಶೈಲಾಗ್ರದೊಳ್ಮಾಡಿಲೋಕೋ
ತ್ತಮನಂ ಕೊಂಡೊಯ್ದುಯೋಧ್ಯಾಪುರದೊಳೊಸಗೆಯಂಮಾಡಿಜನ್ಮೋತ್ಸವಪ್ರ
ಕ್ರಮಮೆಂದಾನಂದನೃತ್ಯ ಪ್ರಮದಮನಧಿಕಂ ಮಾಡಿ ತನ್ನಿಂದ್ರಲೋಕ
ಕ್ಕಮರೇಂದ್ರಂ ಪೋದನಾಗಳ್ ಸುಕವಿ ಜನಮನೋ ಮಾನಸೋತ್ತಂಸಹಂಸಂ ೧೪೨

## ೪ ವೃಷಭೇಶ್ವರ ವಿವಾಹಂ ; ಕುಮಾರೋದಯಂ

ಕಿವಿಗಿಂಪಂ ತೊದಳ್ದೊಳ್ ಪೊದಟ್ದಿ ನುಡಿಗಳ್ ಕಣ್ಗಲ್ಕಱಿಂ ರಾಗದಾ
ಡುವ ಕೂಸಾಟದ ಚೆಲ್ವುಗಳ್ ಕುಡೆ ಪಿತೃದ್ವಂದ್ವಕ್ಕೆ ನಿಚ್ಚಂ ಮನೂ
ದ್ಭವನುಂ ಬಂಧುಜನಕ್ಕೆ ಮುಗ್ಧಮುಖಚಂದ್ರಾಲೋಕಮಾಲೋಕನೋ
ತ್ಸವಮಂ ಪೆರ್ಚಿಸೆ ಜಾಣನಿಂತೊದವಿದಂ ಸಂಸಾರ ಸಾರೋದಯಂ ೧೪೩

ಅಂತು ಬಾಲ್ಯಕಾಲಮಂ ಬಾಳಕೇಳೀ ಲೀಲೆಯಿಂ ಕಱಿಪಿ, ಕುಮಾರಕಾಲ ದೊಳ್ ಸಹೋತ್ಪನ್ನ ಮತಿ ಶ್ರುತಾವಧಿ ಬೋಧನಪ್ಪುದಱಿಂ ವಿಶ್ವವಿದ್ಯೇಶ್ವರ ನುಂ ಜನ್ಮಾಂತರಾಭ್ಯಸ್ತ ಕಳಾಕುಶಲನುಂ ಪ್ರತ್ಯಕ್ಷೀಕೃತ ಸಕಲ ವಾಙ್ಮಯನುಂ ಪ್ರತಿದಿನ ಪ್ರವರ್ಧಮಾನ ತನು ವಯೋವಿಭವನನುಕ್ರಮದೊಳೆ ಬಳೆಯೆ,

ಕರಿ ಕಳಭಂ ಮದ ದ್ವಿರದ ಲಕ್ಷ್ಮಿಯೊಳೊಂದಿದ ವೊಲ್ ಕಿಶೋರ ಕೇ
ಸರಿ ಮೃಗರಾಜ ಲೀಲೆಯೊಳಳಂಕರಿಸಿರ್ದ ವೊಲೆಯ್ದೆ ಮುಗ್ಧ ಸೌಂ
ದರ ಸುರ ಭೂರುಹಂ ಕುಸುಮ ಶೋಭೆಯೊಳಗ್ಗಲಿಸಿರ್ದ ವೊಲ್ ಮನೋ
ಹರಮೆನಿಸಿತ್ತು ಯೌವನವನೋದಯಮಿಂದ್ರ ನರೇಂದ್ರ ವಂದ್ಯನಾ ೧೪೪

ಅನಿವಿರಿದೊಂದು ಯೌವನ ಮದಕ್ಕೆಡೆಯಾಗಿಯುಮಂದು ರಾಗ ಸಂ
ಜನನಮನೆಯ್ದೆ ತಾಳ್ದಿದವಿನಶ್ವರ ಕೀರ್ತಿಯೊಳಂ ಸರಸ್ವತೀ
ವನಿತೆಯೊಳಂ ವಿಚಾರಿಸೆ ತಟಿದ್ದ್ಯುತಿ ಚಂಚಲೆಯೆಂಬುದೊಂದು ಭಾ
ವನೆಯೊಳೆ ರಾಜ್ಯಲಕ್ಷ್ಮಿಯೊಳನಾದರಮಾಯ್ತು ಮನಂ ಚಿದಾತ್ಮನಾ ೧೪೫

ಪರಮನ ಪರಿಪೂರ್ಣ ಯೌವನ ಶ್ರೀಯಂ ನಾಭಿರಾಜಂ ನೋಡಿ, "ಈಗಳ್ ಕುಮಾರಂಗೆ ಯೌವನಂ ನೆಱೆದತ್ತು. ಈತಂಗೆ ವಿವಾಹ ಮಂಗಳಮಂ ಮಾಡಲ್ಕೆ ವೇೞ್ಕುಂ. ತಪೋವನಮಂ ಪೊಕ್ಕಾಗಳೇಗೆಯ್ವುದು?" ಎಂದು ತನ್ನ ಮನದೊಳ್ ಬಗೆದು ನಿಃಸ್ಪೃಹನನೀ ಮಹೀತಳ ರಾಜ್ಯದೊಳ್ ನಿಱಿಸುವುದುಂ ಮದುವೆ ನಿಱಿಸುವುದುಂ ಎನಗಶಕ್ಯಾನುಷ್ಠಾನಮಾದೊಡಂ ಎನ್ನ ಬಗೆದ ಬಗೆಯನೊಡಂಬಡುಗುಮೊಡಂಬಡನೆಂಬ ಸಂಭ್ರಮದೊಳ್ ಕುಮಾರನಂ ಸಾರೆ ವಂದು ಯಥೋಚಿತ ಹೇಮಾಸನದೊಳ್ ಕುಳ್ಳಿರ್ದು,

"ಉದಯಾಚಳಕ್ಕೆ ಪೆಸರಿನ
ನುದಯದಿನಾದಂತಿರೆಮಗೆ ಗುರುಗಂ ಗುರುವೆಂ
ದೊದವಿದ ಪೆಂಪಿದು ನಿನ್ನೊಂ
ದುದಯದಿನಾಯ್ತಮರ ಮೌಳಿ ಲಾಲಿತ ಚರಣಾ ೧೪೬

ಇದು ದಲವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯ ಚಿ
ತ್ತದೊಳವಧಾರಿಸೆಂತೆನೆ ಜಗದ್ಗುರು ಲೋಕ ಹಿತಾರ್ಥದಿಂದೆ ಸ
ಲ್ವುದು ವಲಮಿಂತಿದಂ ಬಗೆದು ಪುತ್ರ ಕಳತ್ರ ಪರಿಗ್ರಹಕ್ಕೆ ಮಾ
ಣದೆ ಬಗೆದಿರ್ಪುದೊಳ್ಳೆನಿದನೆಂದೊಡೆ ಸೃಷ್ಟಿಯೆ ಕೆಟ್ಟುಪೋಗದೇ ೧೪೭

ಶಾಂತಾತ್ಮ ಮದುವೆನಿಲ್ ನೀ
ನಿಂತೆನ್ನ ಗೃಹಸ್ಥಧರ್ಮದಿಂದಂ ನೀನೆಂ
ತಂತೆ ಸಲೆ ನೆಗಟ್ದೆ ಜಗತೀ
ಸಂತತಿ ನಿಲೆ ನಿನ್ನ ಧರ್ಮಸಂತತಿ ನಿಲ್ಕುಂ" ೧೪೮

ಎನೆ ದೇವನ ದರಹಸಿತಾ
ನನದೊಳ್ ತನಗಿಂಬುಕೆಯ್ದು ಬಗೆಯಂ ಪದಿನಾ
ಲ್ಕನೆಯ ಮನು ಜಲಕನಱಿದಂ
ದನಿತುಂ ಭುವನಮುಮನಾಗಳಾಳ್ದಂತೊಸೆದಂ ೧೪೯

ಅಂತು ತನ್ನ ಪರೋಧದೊಳಂ ಪ್ರಜಾನುಗ್ರಹ ಬುದ್ಧಿಯೊಳಂ ಪೋಗಲಾಱ ದೊಡಂಬಟ್ಟಾದಿಪುರುಷನೊಡಂಬಡನಱಿದು ನಿಶ್ಶಂಕನಾಗಿ ದಿವಿಜೇಂದ್ರನನು ಮತದೊಳ್ ಕಚ್ಛ ಮಹಾಕಚ್ಛರ ತಂಗೆಯರಪ್ಪ ಯಶಸ್ವತೀ ಮಹಾದೇವಿಯುಂ ಸುನಂದಾ ಮಹಾದೇವಿಯುಮೆಂಬ ಕನ್ಯಾರತ್ನಂಗಳನೊಂದೆ ಪಸೆಯೊಳ್ ಪಾಣಿ ಗ್ರಹಣಂಗೆಯಿಸಿದಾಗಳ್,

ಸಮಲಾವಣ್ಯ ಪ್ರಸರದ
ಸಮ ವಿಭವದ ಸಮ ವಿಳಾಸದಗ್ಗಳಿಕೆಯೊಳಾರ್
ಸಮನಿವರ್ಗೆನೆ ಸಮರಸದೊಳ್
ಸಮಸಂದತ್ತವರ್ಗೆ ಸಮಸಮಾಯೋಗ ಸುಖಂ ೧೫೦

ಆ ಪುಣ್ಯವತಿಯರಿರ್ಬರು
ಮಾ ಪರಮೇಶ್ವರನ ಮನಮನಿರ್ಕುಟಿಗೊಳೆ ಮ
ತ್ತಾ ಪೀನವೃಷಸ್ಕಂಧನು
ಮಾ ಪದ್ಮಾಸ್ಯೆಯರ ಮನಮನಿರ್ಕುಟಿಗೊಂಡಂ ೧೫೧

ಅಂತಾ ಲತಾಂಗಿಯರೊಳ್ ಆದಿಪುರುಷನಶೇಷ ಸಂಸಾರ ಸುಖಮನನುಭವಿ ಸುತ್ತಿರ್ಪಿನಂ ಅನೇಕ ಸಂವತ್ಸರಂಗಳೇಕ ಸಂವತ್ಸರ ಸಮಾನಂಗಳಾಗಿ ಪೋಗೆ, ಯಶಸ್ವತೀ ಮಹಾದೇವಿ ಗರ್ಭಮಂ ತಾಳ್ದಿ ಸುಖ ಪ್ರಸೂತಿ ಸಮಯದೊಳ್,

ಮನುಗೋತ್ರಾಂಭೋಧಿಚಂದ್ರಂ ಮನುಕುಲಸರಸೀ ವಿಭ್ರಮೋತ್ತಂಸ ಹಂಸಂ
ಮನುವಂಶ ಪ್ರಾಚ್ಯ ಶೈಲ ದ್ಯುಮಣಿ ಮನುನೃಪಾಮ್ನಾಯ ದುರ್ಗಾದ್ರಿಸಿಂಹಂ
ಮನುಭೂಪಾಳಾನ್ವಯ ಶ್ರೀ ಭವನ ಕಳಶಮೆಂಬಂತು ವಿಖ್ಯಾತ ಪುಣ್ಯಂ
ಮನುಧಾತ್ರೀಪಾಲ ಚೂಡಾಮಣಿ ಜನಿಯಿಸಿದಂ ಚಕ್ರವರ್ತಿ ಪ್ರಧಾನಂ ೧೫೨

ಭಾವಿ ಭರತೇಶಪದಮುಮಿ
ಳಾ ವಿಪುಳ ಪ್ರೇಮಭರಮುಮೆರ್ದೆಗೊಂಡಿರೆ ಸ
ದ್ಭಾವದಿನಿಟ್ಟುದು ಬಂಧು ಜ
ನಾವಳಿ ಕೂಸಿಂಗೆ ಭರತನೆಂಬೀ ಪೆಸರಂ ೧೫೩

ದರಹಸಿತಂ ಹಸಿತಂ ಸುಂ
ದರ ಮನ್ಮಥ ಲಸಿತ ರುಚಿ ತರಂಗಿತಮೆಂಬೀ
ಪರಿವಿಡಿಯ ಬಾಲಕೇಳಿಯೆ
ಕರಮೆ ಮರುಳ್ಚಿದುದು ತಾಯುಮಂ ತಂದೆಯುಮಂ ೧೫೪

ನುಡಿಯ ತೊದಲ್ ನಡೆಯ ತಳರ್
ಜಡೆಗಳ ಕೆಂಪಲರ್ದ ಮೊಗದ ಕಿಱುನಗೆ ಕೆಂಪಂ
ಪಡೆದಧರ ಮಣಿಯ ಚೆಲ್ವಡಿ
ಗಡಿಗೆಸೆದುದು ಬಾಳಭಾವದೊಳ್ ಪುರು ಸುತನಾ ೧೫೫

ನುಡಿಯ ಪ್ರೊದಱ್ಕೆಯೊಳೊಳ್ನುಡಿ
ನುಡಿದಂ ನಿಜ ಸಕಳ ಚಕ್ರವರ್ತಿತ್ವಕ್ಕಂ
ದಡಿಯಿಡುವಂತೆ ನಿರಂತರ
ಮಡಿಯಿಟ್ಟಂ ಪದ್ಮರಾಗ ಕುಟ್ಟಿಮ ತಳದೊಳ್ ೧೫೬

ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ ತಂದೆಯೊಂ
ದಂದಮೆ ತಂದೆಯೊಂದು ನುಡಿಯೋಜೆಯೆ ತನ್ನೊಳಮರ್ಕೆವೆತ್ತುದಾ
ನಂದಕರಂ ಕರಂ ಸೊಗಯಿಸುತ್ತಿರೆ ಶೋಭಿಸಿದಂ ಕುಮಾರನಾ
ನಂದಿತ ರೂಪನಂದೆಸೆಯೆ ತಂದೆಯೊಳಚ್ಚಿನೊಳೊತ್ತಿದಂತೆವೊಲ್ ೧೫೭

ಭರತ ಕುಮಾರಂಬೆರಸು ನೂರ್ವರ್ ಕುಮಾರರುಮನನಿಬರಿಂ ಕಿಱಿಯಳ್ ಬ್ರಹ್ಮಿಯೆಂಬ ಮಗಳಂ ಪಡೆದು ಯಶಸ್ವತಿ ಪಿರಿದೊಂದು ವೈಮೆಯಂ ಪಡೆದಳ್. ಮುನ್ನ ಪೇಲ್ದ ವಜ್ರಜಂಘನ ಸೇನಾನಾಯಕನಕಂಪನಂ ಬಂದು ಸುನಂದಾ ದೇವಿಯ ಗರ್ಭದೊಳವತರಿಸಿ ಬಳೆಯೆ, ಆ ಬಾಳಕಂಗೆ ಬಾಹುಬಲಿಯೆಂಬನ್ವರ್ಥಾಭಿಧಾನಮನಿಟ್ಟು ಆತನ ಬಾಲ್ಯವಿಳಾಸಂಗಳಿಂದಮಾನಂದಿತ ಹೃದಯನಾಗಿ ನಾಭಿರಾಜ ನಂದನನಿರ್ಪನ್ನೆಗಂ,

ದಳಿತಾಂಭೋಜಾಸ್ಯನಿಂದೀವರ ದಳ ನಯನಂ ಪಕ್ವ ಬಿಂಬಾಧರಂ ಕೋ
ಮಳ ವಂಶ ಶ್ಯಾಮನಂಭೋಧರ ರವನಳಿನೀ ಕುಂತಳಂ ವ್ಯೂಢ ವಕ್ಷ
ಸ್ಥಳನಾಜಾನು ಪ್ರಲಂಬ ಪ್ರಬಲ ಭುಜಯುಗಂ ಚಾರು ವೃತ್ತೋರು ಯುಗ್ಮಂ
ಕುಳ ಶೈಲೇಂದ್ರೋನ್ನತಂ ಬಾಹುಬಲಿ ಸಕಲ ಸೌಂದರ್ಯಸಂಪನ್ನನಾದಂ ೧೫೮

ಆ ಕಮನೀಯ ವಿಲೋಕನನಾ ಕಾಲದ ಕಾಮದೇವಂ. ಮುನ್ನಂ ವೃಷಭೇಶ್ವರಂ ವಜ್ರಜಂಘನಾದ ಭವದೊಳಾ ಮಹಾತ್ಮಂಗೆ ತಂಗೆಯಾದನುಂದರಿಯೆ ಭವ ಪರಿಭ್ರಮಣದಿಂ ಬಂದು ಬಾಹುಬಲಿ ಕುಮಾರನಿಂ ನೇರ್ಗಿಱಿಯಳಾಗಿ ಸೌಂದರಿಯೆಂಬಳ್ ನಂದನೆಯಾದಳ್. ಅಂತು ಭರತೇಶ್ವರಂ ಬಾಹುಬಲಿ ಕುಮಾರಂ ಮೊದಲಾಗೆ ನೂರ್ವರ್ ಕುಮಾರರುಮನಿರ್ವರ್ ಕನ್ಯೆಯರುಮನಾದಿಪುರುಷಂ ನೋಡಿ ಮನದೊಳಾದಲ್ಕಱಿಂ ನಿಜಾನ್ವಯ ಭೂಷಣ ತನಯ ವರ್ಗಕ್ಕೆ ಭೂಷಣ ವಿಶೇಷಂಗಳಂ ತನಗಮಿಂದ್ರಂಗಂ ಸಕಳ ಚಕ್ರವರ್ತಿಗಂ ತುಡಲ್ಕೆ ಯೋಗ್ಯಮಪ್ಪ ಸಾಸಿರದೆಂಟು ತೋರ ಮುತ್ತಿನ ಸರದಿಂ ನಾನಾ ರತ್ನದ ಸುವರ್ಣ ಪದಕ ವಿರಚನಾದಿ ಭೇದದಿಂದಾದ ಹಾರಂಗಳುಮಂ ಪೆಱವುಂ ಪ್ರತ್ಯಂಗೋಚಿತ ಮಣಿಭೂಷಣಂಗಳುಮಂ ಸ್ವಮತಿ ಪರಿಕಲ್ಪನದಿಂ ಯುಗಾರಂಭದೊಳ್ ಪಡೆದು,

ಇವರ್ಗಿವು ತಕ್ಕುವೆಂದವರ್ಗವಂ ದಯೆಯಿಂ ದಯೆಗೆಯ್ಯೆ ರಾಗದಿಂ
ದವರವನೆಲ್ಲಮುಂ ನೆಱೆಯೆ ತೊಟ್ಟು ತದುಜ್ಜ್ವಳ ರತ್ನ ದೀಪ್ತಿ ದಿ
ಗ್ವಿವರ ನಭೋವಿಭಾಗ ಪರಿಪೂರಿತಮಾಗಿರೆ ತಮ್ಮನೊಲ್ದು ನೋ
ಲ್ಪವರ್ಗಳ ಕಣ್ಗೆ ದೀಪ್ತಿ ಪರಮಾಣುಗಳಿಂ ಸಮೆದಂತೆ ತೋಱಿದರ್ ೧೫೯

## ೫ ವಿದ್ಯೋಪದೇಶಂ

ಮತ್ತೊಂದು ದಿವಸಂ ವೃಷಭೇಶ್ವರಂ ಸಕಳ ವಿದ್ಯೋಪದೇಶೋತ್ಸುಕನಾಗಿರ್ಪನ್ನೆಗಂ ಬ್ರಹ್ಮಿಯುಂ ಸೌಂದರಿಯುಂ ಪೊಡೆವಟ್ಟೆಯ್ದೆವಂದಿರ್ದಾಗಳ್,

ತೆಗೆದುತ್ಸಂಗದೊಳಿಟ್ಟೊ
ಯ್ಯಗೆ ಮೊಗಮಂ ನೋಡಿ ಕರ್ಚಿ ಕದಪಂ ನುಡಿದಂ
ಜಗದಧಿಪತಿ ನಿಮ್ಮಿರ್ಬರ
ನೆಗಟ್ತೆ ಮಕ್ಕಳಿರ ವಿನಯ ವಿಳಸನ ನಿಳಯಂ ೧೬೦

ಈ ವಯಸಮನೀ ಶೀಲಮ
ನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮ
ತ್ತೇವೇಟ್ಪುದೊ ನೀವೆ ಜಗ
ತ್ಪಾವನೆಯರಿರಕ್ಕ ನಿಮಗಮಗ್ಗಳರೊಳರೇ ೧೬೧

ನಿಮಗೆ ವಯಸಮೆಂಬುದು ವಿದ್ಯಾಭ್ಯಾಸ ಯೋಗ್ಯಮೆಂದು ವಿಶಾಲ ಹೇಮ ಪಟ್ಟಕದೊಳ್ ಆತ್ಮ ಹೃತ್ಪದ್ಮ ಸದ್ಮೆಯಂ ಸರಸ್ವತಿಯಂ ಪೂಜಾ ಪೂರ್ವಕಮಧಿವಾಸಿಸಿ ನಿಜ ತನೂಜೆಯರಿರ್ವರುಮನೆರಡುಂ ಕೆಲದೊಳಿರಿಸಿ,

ಮುನ್ನಂ ತ್ರಿಲೋಕ ಗುರು ಸಿ
ದ್ಧನ್ನಮಯೆಂದಱಿಪಿ ಮುಖ್ಯಮಂಗಳ ಪದಮಂ
ಕನ್ನೆಗೆ ಪಿರಿಯಾಕೆಗೆ ಬಟಿ
ಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ ೧೬೨

ಅಂತು ಬ್ರಹ್ಮಿಗೆ ದಕ್ಷಿಣ ಹಸ್ತದೊಳುಪದೇಶಂಗೆಯ್ದು,

ಸೌಂದರಿಗೆ ಗಣಿತಮಂ ದಳಿ
ತೇಂದೀವರ ನಯನೆಗೆಡದ ಕಯ್ಯೊಳ್ ಭವ್ಯಾ
ನಂದಕರಂ ಸ್ಥಾನ ಕ್ರಮ
ದಿಂದಂ ಪುರುದೇವನಱಿಯೆ ತೋಱಿದನಾಗಳ್ ೧೬೩

ಮತ್ತಂ ಪದವಿದ್ಯಾ ಚ್ಛಂದೋವಿಚಿತ್ಯಲಂಕಾರಂಗಳೆಂಬ ಮೂಱುಂ ಪೆಸರ್ವಡೆದ ವಾಙ್ಮಯಮುಮಂ ಸಮಸ್ತ ಕಳಾ ಕಳಾಪಮುಮಂ ಆದಿಬ್ರಹ್ಮನುಪದೇಶಂಗೆಯ್ದು ನಿಜಾತ್ಮಜೆಯರಿರ್ವರುಮಂ ವಿದ್ಯಾಪರಿಪೂರ್ಣೆಯರಪ್ಪಂತು ಮಾಡಿ, ಭರತಂಗೆ ಭರತಮುಮನರ್ಥ ಶಾಸ್ತ್ರಮುಮಂ, ವೃಷಭಸೇನಂಗೆ ಗಾಂಧರ್ವ ಶಾಸ್ತ್ರಮುಮಂ, ಅನಂತವಿಜಯಂಗೆ ಚಿತ್ರಕಳೆಯುಮಂ ವಾಸ್ತುವಿದ್ಯೆಯುಮಂ, ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾಯುರ್ವೇದ ಧನುರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ, ಮತ್ತಮಿವು ಮೊದಲಾಗೆ ಪೆಱವುಂ ಲೋಕೋಪಕಾರಿಗಳಪ್ಪ ಶಾಸ್ತ್ರಂಗಳೆನಿತೊಳವನಿತುಮಂ ಮತ್ತಿನ ತನೂಜ ವರ್ಗಕ್ಕೆಲ್ಲಮುಪದೇಶಂ ಗೆಯ್ದಂ. ಇಂತು

ಉತ್ತಮ ವಿದ್ಯೆಗಳ್ಗೆ ಗುಱುಯಾದ ತನೂಭವರೆಯ್ದೆ ಚಿತ್ತಮಂ
ಪತ್ತಿಸೆ ಪತ್ತಿದಂಗನೆಯರೊಳ್ ಬೆಸಕೆಯ್ವಮರೇಂದ್ರ ರಾಗ ಸಂ
ಪತ್ತು ಮನಂಗೊಳುತ್ತುಮಿರೆ ಲಕ್ಕೆಯ ಲೆಕ್ಕದೊಳೊಂದಿ ಪೂರ್ವಮಿ
ರ್ಪತ್ತು ನಿರಂತರಂ ನಡೆದುದಾ ವೃಷಭಂಗೆ ಕುಮಾರ ಕಾಲದೊಳ್ ೧೬೪

## ೬ ಕೃತಯುಗಾರಂಭಂ

ಆ ಪ್ರಸ್ತಾವದೊಳ್ ವ್ರೀಹಿ ಯವ ಗೋಧೂಮಾದಿ ಸರ್ವೌಷಧಿಗಳುಂ ಮುನ್ನನುಕೃಷ್ಟ ಪಚ್ಯಂಗಳಪ್ಪುವಂದು ವಿರಳಂಗಳಾಗಿಯುಂ ಆಧಿ ವ್ಯಾಧಿ ಬಾಧಿತ ಶರೀರರ್ ಮಾನವರಭಿಮಾನವಂ ಬಿಸುಟು ನಾಭಿರಾಜನನುಮತದಿಂದಮಾದಿ ಬ್ರಹ್ಮನಲ್ಲಿಗೆ ವಂದು ಮೈಯಿಕ್ಕಿ ಪೊಡೆವಟ್ಟು,

"ವಿರಳ ಫಳಂಗಳಾದುವಖಿಳೌಷಧಿಗಳ್ ರಸ ವೀರ್ಯ ಪಾಕಮುಂ
ವಿರಳಮೆ ವೃಕ್ಷ ಜಾತಿಗಳೊಡಲ್ ಪಸಿವಾದಮುಳುರ್ವೆ ನಿಪ್ಪುಟಂ
ಕರಗಿದುದೆಮ್ಮ ಬಾೞ್ವೆ ತೆಱನಾವುದು ದೇವ ಶರಣ್ಗೆ ವಂದೆವಾ
ದರದೆಮಗಪ್ಪುದಂ ಬೆಸಸಿ ಕಾವುದು ಲೋಕಮನಾದಿ ಪೂರುಷಾ" ೧೬೫

ಎಂಬುದುಂ, ತತ್ಪ್ರಜಾ ಜೀವನೋಪಾಯಮುಂ ಷಟ್ಕರ್ಮಂಗಳುಮಂ ವರ್ಣಾಶ್ರಮ ವಿಭಾಗಂಗಳುಮಂ ಗ್ರಾಮ ಗೃಹಾದಿ ಭೇದಂಗಳುಮಂ ಭೋಗಭೂಮಿ ವಿರಾಮದೊಳ್ ಈ ಕರ್ಮ ಭೂಮಿ ಪ್ರಾರಂಭದೊಳ್ ನಿಱಿಸಲ್ವೇೞ್ಕು

ವೆಂದು ಮನದೊಳ್ ಬಗೆದು ಅವರಂ ಅಂಜದಿರಿಮೆಂದು ಸಂತಯಿಸಿ, ತದನಂತರಂ ಭಗವದನುಸ್ಮರಣ ಮಾತ್ರದಿಂದಮರೇಂದ್ರಂ ಬಂದು ತದನುಮತದಿಂ ಶುಭ ಮುಹೂರ್ತದೊಳ್ ಜಿನೇಂದ್ರ ಮಂದಿರಂಗಳಂ ನಿರ್ಮಿಸಿ, ಬಳಿಕಂ ವಿವಿಧ ವಿಷಯಂಗಳುಮಂ ತಜ್ಜನಪದ ಮಧ್ಯಂಗಳೊಳ್ ರಾಜಧಾನಿಗಳುಮಂ ಅಭಿರಾಮ ಜಲಾಶಯಂಗಳುಮಂ ಸಮಸ್ತ ಸಸ್ಯ ಸಂಪತ್ಸಂಪನ್ನ ಸುಕ್ಷೇತ್ರಂಗಳುಮಂ ಸೀಮೋಪಲಕ್ಷಿತಂಗಳಪ್ಪ ಮಹಾ ಗ್ರಾಮಂಗಳುಮಂ ಪುರಂಗಳುಮಂ ಅವನಾಳ್ವ ತೆಱಗೊಳ್ವ ಬಿಟ್ಟ ಬೆಸಕೆಯಿಸಿಕೊಳ್ವ ಭೋಗಿಪ ನಿಯೋಗಂಗಳುಮಂ ಮಾಡಿದಂ. ಇಂತು ಪಲವುಂ ಪುರಂಗಳಂ ಸಮೆದು ದೇವನಿಡೆ ಪುರಂದರವೆಸರಂ ಧರಿಯಿಸಿ ಅಮರೇಂದ್ರನಮರಲೋಕಕ್ಕೊಗೆದಂ.

ತದನಂತರಂ ಪ್ರಜಾ ಪತಿಯುಂ ಪ್ರಜೋಪಜೀವನ ನಿಮಿತ್ತಮಾಗೆ ಸೇವಾ ಧರ್ಮೋಚಿತಮೆನಿಸುವ ಸುಕರ್ಮಂಗಳುಮಂ, ಅನೇಕ ಲಿಪಿ ವಿಧಾನಂಗಳಪ್ಪ ಮಷಿಯುಮಂ, ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ, ಶಾಸ್ತ್ರಾನುಗತಮಪ್ಪ ವಿದ್ಯೆಯುಮಂ, ವಣಿಗ್ವ್ಯವಹಾರಾನುಕಾರಿಯಪ್ಪ ವಾಣಿಜ್ಯಮುಮಂ, ಹಸ್ತ ಕೌಶಲ ಕಳಿತಮಪ್ಪ ಚಿತ್ರ ಕಳಾಪ ಪತ್ರಚ್ಛೇದ್ಯಾದಿ ಶಿಲ್ಪಮುಮಂ ಪಡೆದು, ತನ್ನ ಪಡೆದ ಕ್ಷತ್ರಿಯ ವಣಿಕ್ಶೂದ್ರರೆಂಬ ಮೂಱು ವರ್ಣಂಗಳೊಳಗೆ ಕ್ಷತ್ರಿಯ ಸಮೂಹಕ್ಕೆ ಶಸ್ತ್ರ ಕರ್ಮಮುಮಂ, ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪಣ್ಯ ಕರ್ಮಂಗಳುಮಂ, ಶೂದ್ರಸಂತತಿಗೆ ಶುಶ್ರೂಷಾ ನಿಯೋಗಂಗಳುಮಂ ಯಥಾ ಯೋಗ್ಯಮುಪದೇಶಂಗೆಯ್ದು, ವರ್ಣ ಸಂಕರಮಾಗಲೀಯದೆ ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ [ದಂ].

ವಿತತಾಷಾಢದ ಬಹುಳ
ಪ್ರತಿಪದ್ದಿನದಂದು ಕೀರ್ತಿ ನೆಗೞ್ದಿರೆ ಭಗವ
ತ್ಕೃತ ಯುಗಮಾದುದಱಿಂದಂ
ಕೃತಯುಗಮೆಂಬರ್ ಪುರಾಣವಿದರಿದನೀಗಳ್ ೧೬೬

## ೭ ಆದಿಬ್ರಹ್ಮರಾಜ್ಯಾಭಿಷೇಕಂ

ಅಂತು ಕೃತಯುಗಾರಂಭ ಸೂತ್ರಧಾರನೆನಿಸಿದಾದಿಬ್ರಹ್ಮಂಗೆ ರಾಜ್ಯಾಭಿಷೇಕಂಗೆಯ್ವ ಬಗೆಯಂ ಬಗೆದು ನಾಭಿರಾಜಂಬೆರಸು ಬಂದು,

ಸಕಲ ಮಕುಟ ಬದ್ಧಾಧೀಶನಯ್ ದೇವ ನೀನುಂ
ಮಕುಟ ಧರನುಮಾಗಲ್ವೇೞ್ಕು ಮೆಂದಾಗಳಿಂದ್ರಂ
ಮಕುಟದೊಡನಲಂಪಿಂ ಪಟ್ಟಮುಂ ಕಟ್ಟಿ ಲೋಕ
ಪ್ರಕಟಮೆನೆ ಪೊದಲ್ದಿತ್ತಾದಿದೇವ ಪ್ರಭಾವಂ ೧೬೭

ಅಂತು ಆಪ್ತಾಧಿರಾಜ್ಯಂ ನಾಭಿರಾಜ ಸನ್ನಿಧಾನದೊಳಖಿಲ ಪ್ರಜಾಪಾಲನದೊಳತಿಪ್ರಯತ್ನ ಪರನಾಗಿ ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ನಡೆಗುಮೆಂದುಂ ಅತ್ಯಂತ ದುಷ್ಟ ಬಳವಜ್ಜನ ಗ್ರಸನದಿಂ ದುರ್ಬಳ ಜನಂಗಳೊಳ್ ಮತ್ಸ್ಯ ನ್ಯಾಯಂ ಪ್ರವರ್ತಿಸುಗುಮೆಂದುಂ ಯಥೋಚಿತ ಧರಣೀಧರರಪ್ಪ ಭೂಪಾಳಕರನವರವರ ಪದವಿಯೊಳ್ ನಿಱಿಸಲ್ ಬಗೆದು ತನಗಾಪ್ತನಪ್ಪ ಸೋಮಪ್ರಭಂಗೆ ಕುರು ರಾಜಾಭಿಧಾನಮುನಿಟ್ಟು ಕುರು ಕುಲಾಗ್ರಗಣ್ಯನಂ, ಹರಿಗೆ ಹರಿ ಕಾಂತನಾಮಮುನಿಟ್ಟು ಹರಿ ವಂಶ ಧ್ವಜನಂ, ಅಕಂಪನಂಗೆ ಶ್ರೀಧರಾಂಕ ನಾಮಮುನಿಟ್ಟು ನಾಥಾನ್ವಯ ಪುರಸ್ಸರನಂ, ಕಾಶ್ಯಪಂಗಮೋಘವಾಕ್ಯ ನಾಮಮನಿಟ್ಟು ಉಗ್ರ ವಂಶ ಲಲಾಮನಂ ಮಾಡಿ, ಕಚ್ಛ ಮಹಾಕಚ್ಛ ಪ್ರಮುಖ ಧರಾಧಿನಾಥರುಮನಧಿರಾಜಪದವಿಯೊಳ್ ನಿಱಿಸಿ,

ಸುತರುಮನವರ್ಗವರಭಿಮತ
ಮತಮೆಂತದನಿತ್ತು ನಿಱಿಸಿದಂ ಪ್ರಭು ನಿಜ ಸಂ
ತತಿಯಂ ತಣಿಪಿ ಸಹೃತ್ಸಂ
ತತಿಯಂ ಪೆರ್ಚಿಪುದು ರಾಜ್ಯ ಫಲಮಿನಿತೆ ವಲಂ ೧೬೮

ಅಂತಾದಿದೇವನಿಕ್ಷು ರಸ ಸಂಗ್ರಹಣ ಸಮಯಾಹೂತ ಭೂತಳನಪ್ಪುದಱಿಂದಂ ಇಕ್ಷ್ವಾಕು ಕುಳತಿಳಕನುಂ, ಪ್ರಜಾ ಜೀವನೋಪಾಯ ಮನನಾದುದಱಿಂ ಪ್ರಜಾಪತಿಯುಂ, ನಿಜ ಕುಲೋದ್ಧರಣದಿಂ ಕುಲಧರನುಂ, ಕೃತಯುಗಾರಂಭಕ್ಕಾದಿಯಾದುದಱಿಂದಂ ಆದಿಬ್ರಹ್ಮನುಂ ಎಂಬ ಅನ್ವರ್ಥನಾಮಂಗಳುಂ ಲೋಕಪ್ರಸಿದ್ಧಮಾಗಿರಲ್ ಅಱುವತ್ತ ಮೂಱು ಲಕ್ಕೆ ಪುಬ್ಬಂ ರಾಜ್ಯಕಾಲಂ ಸಲೆ,

ನಾನಾ ಮಾನ್ಯ ಜನಾಂತರಂಗ ನಿಹಿತಾನಂದೋದಯಂ ದಿವ್ಯ ಸಂ
ತಾನ ಸ್ರಙ್ಮಣಿ ಭೂಷಣಾಂಬರಧರಂ ಸ್ವಾಧೀನ ಸಂಗತ್ವ ಸಂ
ತಾನಂ ಪುತ್ರ ಕಳತ್ರ ಮಿತ್ರ ಸಹಿತಂ ಸಾಕೇತ ಸಿಂಹಾಸನಾ
ಸೀನಂ ಪಾಲಿಸಿದಂ ಮಹೀವಳಯಮಂ ಸಂಸಾರಸಾರೋದಯಂ ೧೬೯

## ೮ ಪರಿನಿಷ್ಕ್ರಮಣ ಕಲ್ಯಾಣಂ

ಶ್ರೀಪತಿ ಪುರುಪರಮೇಶ್ವರ
ನಾಪೂರ್ಣ ಮನೋರಥಂ ನಮನ್ನೃಪ ಮಕುಟಾ
ಟೋಪಂ ತ್ರೈಲೋಕ್ಯಾಂತ
ವ್ಯಾಪಿತ ಮಹಿಮಂ ಸರಸ್ವತೀ ಮಣಿಹಾರಂ ೧೬೦

ಸ್ಫುರಿತ ಮಣಿ ಖಚಿತ ಹರಿ ವಿ
ಷ್ಟರದೊಳಳಂಕರಿಸಿ ನೆಱೆದ ರಾಜನ್ಯಕಮಂ
ದರಹಸಿತ ಮೃದು ವಿಲೋಕನ
ಪರಿಭಾಷಣದಿಂದಮಾದಮಾದರಿಸುತ್ತುಂ ೧೬೧

ಎರಡೋಳಿಯೊಳಂ ಮೊದಲೊಳ್
ಭರತೇಶ್ವರ ಬಾಹುಬಲಿಗಳಿರೆ ಮತ್ತಿನ ಪು
ತ್ರರುಮವರ ಕೆಲದೊಳಿರೆ ಸುರ
ಶರಾಸನಂ ನೆಗಲ್ದುದವರ ಮಕುಟ ಪ್ರಭೆಯೊಳ್ ೧೬೨

### ಸುರರಾಜ ಸೇವೆ

ಮತ್ತಂ ಸಿಂಹಾಸನಾಸನ್ನಸ್ಥಿತ ಮಣಿಮಯ ಪೀಠದೊಳ್ ನಾಭಿರಾಜನುಂ ಕನಕ ಪೀಠದೊಳ್ ಕಚ್ಛ ಮಹಾಕಚ್ಛರುಂ ಸೋಮವಂಶ ಲಲಾಮಂ ಸೋಮ ಪ್ರಭನುಂ ಹರಿ ವಂಶಾಗ್ರಗಣ್ಯಂ ಹರಿಕಾಂತನುಂ ನಾಥ ವಂಶ ನಾಯಕನಕಂಪನನುಂ ಉಗ್ರವಂಶಾಗ್ರಗಣ್ಯಂ ಕಾಶ್ಯಪನುಂ ಇರೆ, ಮತ್ತಂ ಪೆಱರುಮಱಕೆಯ ನಾಯಕರುಂ ಮಣಿ ಮಕುಟ ಬದ್ಧ ರಾತ್ಮೋಚಿತ ಪ್ರದೇಶಾಸನಂಗಳೊಳಿದೋಲಗಿಸುತ್ತಿರ್ದನ್ನೆಗಮಾದಿದೇವನ ಪರಿನಿಷ್ಕ್ರಮಣ ಕಲ್ಯಾಣಮತ್ಯಾಸನ್ನಮೆಂಬುದಂ ನಿಜಾವಧಿ ಬೋಧದಿಂದಮಱಿದು ಸಂಗೀತ ಪ್ರಸಂಗದಿಂದವೋಲಗಿಸಲೆಂದು ಸುರ ರಾಜಂ ಬಂದು ಭಗವದಾಸ್ಥಾನ ಮಂಟಪಮನವನತಮಣಿ ಕಿರೀಟ ರತ್ನ ಪ್ರದೀಪಂಗಳಿಂದಮರ್ಚಿಸಿ ಸಿಂಹಾಸನೋಪಾಂತಸ್ಥಿತ ಕನಕ ಪೀಠದೊಳ್ ಕಳ್ಳಿರ್ದು,

"ಪರಮನನೋಲಗಿಸಿ ಕೃತಾ
ರ್ಥರೆಮಪ್ಪೆವನೋಘಮವಸರಂಗುಡಿಸುವುದೆಂ
ದಿರದೆನ್ನನಧಿಕ ಭಕ್ತಿಯೆ
ತರೆ ಬಂದುದು ದೇವ ದಿವಿಜ ಪೇಟಕಮನಿತುಂ ೧೭೩

ಸಮನಿಸಲಿವರ ಮನೋರಥ
ಮಮರೀ ನೃತ್ಯ ಪ್ರಸಂಗಮಕ್ಕಭವ ಭವ
ತ್ಕ್ರಮ ಕಮಳ ಸೇವೆಯಿಂದಿಂ
ತುಮನಂತಂ ಗೀತವಾದಿತಂ ಫಲಮಲ್ತೇ" ೧೭೪

ಎಂದಿಂದ್ರಂ ಬಿನ್ನವಿಸಲೊ
ಡಂ ದರ ಹಸಿತಾನನಾಬ್ಜನಾವುದು ನಿಮಗಾ
ನಂದಮದಕ್ಕೆನೆ ನುತ ಸುರ
ವೃಂದಂ ಸಂಗೀತಕಕ್ಕೊಡರ್ಚಲೆವೇೞ್ದಂ ೧೭೫

ಪೇೞ್ವುದುಮನಂಗನಿರ್ದೆಡೆ
ವೇೞ್ಪವೊಲೊರ್ಮೊದಲೆ ಗೀತ ವಾದಿತ ರವಮೇ
ವೇೞ್ವುದೊ ಸಭೆಯಂ ರಸದೊಳ್
ಪೂೞ್ವವೊಲೆಸೆದತ್ತು ದಿವಿಜ ಪೇಟಕ ಜನಿತಂ ೧೭೬

ಅಮರ್ದಿನ ಮೞೆಯೊಳಗೆಸೆದಪು
ದಮೃತಾಂಬುದ ನಿನದಮೆನಿಸೆ ಸಭೆ ನಿನದಂ ಗೀ
ತಮುಹಾ ವಾದಿತಮೆನಿಸಿದು
ದಮರೀ ಜನ ಗೀತಮಮರ ವಾದಿತಮಾಗಳ್ ೧೭೭

ನೀಳಾಂಜನಾ ನೃತ್ಯಂ

ಅಂಬರ ಭೂಷಣ ಮಾಲಾ
ಡಂಬರದ ಬೆಡಂಗನಮರನರ್ತಕಿ ಗಡಮೇ
ನೆಂಬುದೊ ಧರಣೇಂದ್ರಂಗಮ
ೞುಂಬಂ ಪೊಗೞಲ್ಕೆ ರೂಪು ನೀಳಾಂಜನೆಯಾ ೧೭೮

ಕಳ ಗೀತಂ ವಾದ್ಯಂ ನೃ
ತ್ಯಲೀಳೆ ಪೆಱಗೊಪ್ಪದೀಕೆಗಲ್ಲದೆ ಗಣಿಕಾ
ತಿಳಕವಿವಳ್ ನರ್ತನರಸ
ದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್ ೧೭೯

ಎನಿಸಿದ ನೀಳಾಂಜನೆ ಕ
ರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿ
ತ್ತೆನಿಸುತ್ತೊಳಪೊಕ್ಕಳ್ ಭೋಂ
ಕೆನೆ ನಿಖಿಳ ಜನಾಂತರಂಗಮುಮಂ ರಂಗಮುಮಂ ೧೮೦

ನಿಲ್ತುವು ರಸಂಗಳಿಲ್ಲಿ ಮ
ಡಲ್ತೆನೆ ಭಂಗಿಯೊಳನಂಗ ಜಂಗಮ ಲತೆವೊಲ್
ನಿಲ್ತು ಜವನಿಕೆಯ ಮಱೆಯೊಳ್
ಪೊಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ ೧೮೧

ಓಸರಿಸಿದ ಜವನಿಕೆಯೊಡ
ನೋಸರಿಸಿದನಿಸಲೆ ಕಂತು ಪುಷ್ಪಾಂಜಳಿಯಂ
ಸೂಸಿದ ಪದದೊಳೆ ಸಭೆಗಂ
ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ ೧೮೨

ನೆಗಱೆ ನಿಜ ಪ್ರತಿಬಿಂಬಂ
ನೆಗಲ್ದಿರಸುಗಳುರದೊಳೆಸೆವ ಹಾರ ಮಣಿ ಜ್ಯೋ
ತಿಗಳೊಳವರೆರ್ದೆಯನಲ್ಲಿಂ
ಪುಗುವುದನನುಕರಿಸಿ ರಂಗದೊಳ್ ಸೊಗಯಿಸಿದಳ್ ೧೮೩

ತಾಳದ ಲಯಮಂ ನಿಱಿಂ ನೀ
ಳಾಳಕ ಹಾರದ ಪೊದಲ್ದ ಮುತ್ತೆಂಬಿವು ಮುಂ
ಮೇಳಿಸಿ ಕೈಕೊಂಡುವು ಲುಳಿ
ತಾಳಕಿ ಕೈಕೊಂಡಳೆಂಬುದೊಂದಚ್ಚರಿಯೇ ೧೮೪

ರಸ ಭಾವಾಭಿನಯಂಗಳ್
ಪೊಸವೆ ಪುಗಿಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ
ಪೊಸವೆ ಕರಣಂಗಳುಂ ನಿ
ಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ ೧೮೫

ಭಾವದನುಭಾವದೆಸೆವ ವಿ
ಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ
ಭಾವಿಸುವೊಡಾದಿದೇವನ
ದೇವೇಂದ್ರನ ಬಗೆಗಮುಸದಳಂ ನರ್ತಕಿಯಾ ೧೮೬

ಪುಗುವ ಪೊಱಮಡುವ ತೆಱನೆರ್ದೆ
ವುಗುವಳ್ ಪೊಱಮಡುವಳೆನಿಸೆ ಪೊಸತಮರ್ದಂ ಮೇ
ಗುಗುಲ್ದ ಪಳೆನಿಸೆ ಮುಗುಳ್ನಗೆ
ನಗೆಮೊಗದ ಬೆಡಂಗವಳ್ಗದೇನೊಪ್ಪಿದುದೋ ೧೮೭

ಪೆಸರಱಿಯದಮರ ತೂರ್ಯ
ಪ್ರಸರಂಗಳ ಜತಿಗೆ ತೊಡರದಿನಿಸೆಟಲದೆ ಬ
ಣ್ಣಿಸರಂಗೊಂಡಂತಿರೆ ಬ
ಣ್ಣಿಸರಂ ಸೊಗಯಿಸಿದುದೇನವಳ್ ಪರಿಣತೆಯೋ ೧೮೮

ಕುಡುಪುಂ ಕಯ್ಯುಂ ಜತಿಯೊಳ್
ತಡತಡವರೆ ವಾದಕಂಗೆ ಪುರ್ವಿಂ ಜತಿಯಂ
ತೊಡರದೆ ನಡೆಯಿಸಿ ಪುರ್ವದೆ
ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್ ೧೮೯

ಪೊಸವೆಳ್ದಿಂಗಳ್ ದೆಸೆದೆಸೆ
ಗೆಸೆದುದು ಕುಮುದ ವನಮಲರ್ದುದೆಂಬಂತಿರದೇ
ನೆಸೆದುದೊ ಕಟಾಕ್ಷ ಮಾಲಾ
ಪ್ರಸರಂ ಭ್ರೂಲಾಸ್ಯಸೌಂದರಂ ನರ್ತಕಿಯಾ ೧೯೦

ಅವಯವದಿಂದಮೆ ದೇವಾಂ
ಗ ವಸ್ತ್ರದುಳ್ಪೊಡೆಯನಾಕೆಯೋಸರಿಸುವ ಸೂ
ಸುವ ಹಾರಲತೆಯುನಳವಡಿ
ಸುವ ಭಂಗಿಯೆ ಮದನ ರಾಜ ರಾಜ್ಯವಿಳಾಸಂ ೧೯೧

ಆಡುವ ವಿಳಾಸಮುಂ ನಡೆ
ನೋಡುವ ನೋಟಕರನತನು ಮತ್ತದ್ವಿರದಂ
ಕೋಡಂ ಕಾಣಿಸಿ ಪಿಡಿದೀ
ಡಾಡುವುದೆಂಬಿನೆಗಮಾಡಿ ರಂಜಿಸಿದವಳ್ ೧೯೨

ಪಾಟಿಸಿ ಮಾಡಿದ ಸೊರ್ಕಿವ
ಳಾಟಮೆ ವಲಮೆನಿಸಿ ನೆಗಳ್ದ ನೀಲಾಂಜನೆ ತ
ನ್ನಾಟಮನೊಐಲ್ದು ನೋಡುವ
ನೋಟಕರಂ ತವದ ಮಾಟಕ್ಕಿಯಿಂ ಮೋಹಿಸಿದಳ್ ೧೯೩

ಚರಣದ ಚಾರಿಯ ಚಲ್ಲಿಯ
ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ವಿಡೆಯೊಳ್
ಸುರ ವಂದಿಗಳಿಂ ಹೋ ಹೋ
ಯಿರೆಯೆನಿಸಿದುದಾಟವಿಂತು ನೀಲಾಂಜನೆಯಾ ೧೯೪

ಸುರ ಗಣಿಕಾ ನಾಟ್ಯ ರಸಂ
ಪರಮನ ಚಿತ್ತಮುಮನೆಯ್ದೆ ರಂಜಿಸಿದುದು ವಿ
ಸ್ಫುರಿತ ಸ್ಫಟಿಕಂ ಶುದ್ಧಾಂ
ತರಂಗಮೇನನ್ಯ ರಾಗದಿಂ ರಂಜಿಸದೇ ೧೯೫

ಆ ಮಧುರಾಕಾರ ಲತಾ
ಕೋಮಳೆ ತನಗಾಗಳಾಯುರಂತಂ ಬರೆ ಸೌ
ದಾಮಿನಿ ವೊಲ್ ಭೋಂಕೆನೆ ಸುರ
ಕಾಮಿನಿ ರಂಗದೊಳದೃಶ್ಯೆಯಪ್ಪುದುಮಾಗಳ್ ೧೯೬

ರಸ ಭಂಗ ಭಯದಿನಿಂದ್ರಂ
ಪೊಸತೊಂದಾ ದೊರೆಯ ಪಾತ್ರಮಂ ತಂದನುಸಂ
ಧಿಸುವುದುಮದನಣಮುಱಿಯ
ಲ್ಕೆ ಸುರಾಸುರ ಸಮಿತಿಗಾದುದಿಲ್ಲಾ ಕ್ಷಣದೊಳ್ ೧೯೭

ಆ ನೀಲಾಂಜನೆಯೆಂದೆ ಮ
ನೋನಯನೋದಿತ ವಿಮೋಹದಿಂದಿರೆ ಸಭೆ ವಿ
ದ್ಯಾ ನಿಳಯನಱಿದದಂ ದೇ
ಹಾನಿತ್ಯತೆಗಿಂತು ನಾಡೆ ಚೋದ್ಯಂಬಟ್ಟಂ ೧೯೮

ಸಂಸಾರ ಸ್ವರೂಪ ಚಿಂತನಂ

"ನಾರೀ ರೂಪದ ಯಂತ್ರಂ
ಚಾರುತರಂ ನೋಡೆ ನೋಡೆ ಕರಗಿದುದೀ ಸಂ
ಸಾರದನಿತ್ಯತೆ ಮನದೊಳ್
ಬೇರೂಱಿದುದೀಗಳಿಂತಿದಂ ಕಡೆಗಣಿಪೆಂ ೧೯೯

ಕೋಟಿ ತೆಱದಿಂದಮೆಸೆವೀ
ನಾಟಕಮಂ ತೋಱಿ ಮಾಣ್ದಳಿಲ್ಲಳ್ ಬಗೆಯೊಳ್
ನಾಟುವಿನಮಮರಿ ಸಂಸೃತಿ
ನಾಟಕಮುಮನೆನಗೆ ನೆಱೆಯೆ ತೋಱಿದಳೀಗಳ್ ೨೦೦

ತನು ರೂಪ ವಿಭವ ಯೌವನ
ಧನ ಸೌಭಾಗ್ಯಾಯುರಾದಿಗಳ್ಗಿಣೆ ಕುಡುಮಿಂ
ಚಿನ ಪೊಳಪು ಮುಗಿಲ ನೆಟಲಿಂ
ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ ೨೦೧

ನರಕದೊಳೆಯ್ದಿದ ದುಃಖದ
ಕರತನಮದು ಬಗೆವೊಡಾರ್ಗಗುರ್ವಲ್ತೆ ಭಯಂ
ಕರವಲ್ತೇ ತಿರ್ಯಗ್ಗತಿ
ದುರಂತ ದುಃಖ ಪ್ರತಾನಮಂ ಬಗೆವಾಗಳ್ ೨೦೨

ನಾನಾ ಯೋನಿಗಳೊಳ್ ಸುೞಿ
ದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆದುಂ
ಮಾನುಷ್ಯಮನತಿದಾರುಣ
ಮಾನಸ ಶಾರೀರ ದುಃಖ ಪೀಡಿತನಕ್ಕುಂ ೨೦೩

ಚಿಂತಾ ಶೋಕ ವಿಷಾದ
ಭ್ರಾಂತಿ ಸಮುದ್ಭೂತ ದುಃಖದಿಂ ನರಕದೊಳೋ
ರಂತೆ ವಲಂ ಮಾನವ ಗತಿ
ಸಂತಸಮುಂಟೆಂಬುದುಂಟೆ ಸಗ್ಗಂಗಳೊಳಂ ೨೦೪

ಅಱುದಿಂಗಳಾಯುವುಂಟೆನೆ
ಮಱುಗುವುದುಂ ನಲ್ಲರಲ್ಲಿ ತವ್ಮಿಂ ಮುನ್ನಂ
ಪಱಿಪಟ್ಟು ಬರೆ ಕನಲ್ವುದು
ಮಱಪದೆ ಕಲ್ಪಜರ್ಗೆ ನರಕ ದುಃಖದ ತೆಱನಂ ೨೦೫

ಕಷ್ಟಂ ದುಃಖಾಗ್ನಿ ಪರಿ
ಪ್ಲುಷ್ಟಂ ಚಿಃ ಗತಿ ಚತುಷ್ಟಯಂ ಪ್ರಾಣಿಗೆ[1] ಸಂ
ತುಷ್ಟತೆಯನೆಯ್ದೆ ಪಡೆಗು[2]ಮ
ಭೀಷ್ಟ ಸುಖ ಪ್ರದಮುದೊಂದೆ ಮುಕ್ತಿಸ್ಥಾನಂ ೨೦೬

ಎನಿತೊಡಲಂ ತಾಳ್ದಿದುದಿ
ಲ್ಲೆನಿತೊಡಲಂ ಬಿಸುಟುದಿಲ್ಲ ವಿಷಯಾನಳನಿಂ
ದೆನಿತೆನಿತಂ ಮಱುಗಿದುದಿ
ಲ್ಲನಂತ ಸಂಸಾರ ಗಹನದೊಳ್ ಜೀವಂಗಳ್ ೨೦೭

ಜನನೀ ಜನಕ ಸಹೋದರ
ವನಿತಾ ಸುತ ಪೌತ್ರ ಮಿತ್ರ ಸಂಬಂಧಮುದೆಂ
ತೆನಿತೆನಿತು ಭವದೊಳಾಯ್ತಿ
ಲ್ಲೆನಿತೆನಿತಂ ನೆನೆವುದೆನಿತನವಧರಿಸುವುದೋ ೨೦೮

ಪಾಠಾಂತರ: [1] ಸಂತತ [2] ಪಡೆದು

ತನುಗೆ ಪೊಱೆ ತುಡುಗೆ ನವಲೇ
ಪನಮೆ ಮಲಂ ಗೀತಮುಱ್ಕಿ ನೃತ್ಯಂ ಬಗೆಯ
ಲ್ಕೆ ನಗೆ ದಲುನ್ಮತ್ತ ವಿಳಾ
ಸನಮಿಂತಿನಿತಱೊಳವೊಂದಱೊಳ್ ಪುರುಳುಂಟೇ ೨೦೯

ತ್ರಿದಶ ಸ್ತ್ರೀಜನದೊಳಮುವ್ವ
ತದೊಳಮಣಂ ಮುಗ್ಗದುರಿವ ಮದನಾಗ್ನಿಯ ಕೊ
ರ್ಬುದರಾಗ್ನಿಯ ಪೆರ್ಚೇಂ ಮು
ಱ್ಗದಪುದೆ ಲಲನೆಯರೊಳಶನದೊಳ್ ಮಾನವರಾ ೨೧೦

ಎನಿತಾನುಮುಂಬುನಿಧಿಗಳ
ನನೇಕ ನಾಕಂಗಳಲ್ಲಿ ಕುಡಿದುಂ ಪೋಯ್ತಿ
ಲ್ಲೆನಗೆ ನರ ಭೋಗಮೆಂಬೀ
ಪನಿ ಪುಲ್ಲಂ ನಕ್ಕೆ ತೃಷ್ಣೆ ಪೇೞ್ ಪೋದಪುದೇ ೨೧೧

ವಿದಿತಂ ಮೂರ್ಧಾಭಿಷಿಕ್ತರ್ ಪಲಬರರಸುಗಳ್ ಪ್ರಾಜ್ಯ ಸಾಮ್ರಾಜ್ಯ ಲಕ್ಷ್ಮೀ
ಪದಮಂ ಕೈಕೊಂಡು ತಮ್ಮಂ ಮಱೆದು ವಿಷಯ ಭೋಗಾಸವಾತ್ಯಂತ ಸೇವಾ
ಮದದಿಂದಂ ಧರ್ಮ ಪೋತ ಚ್ಯುತರನವಧಿ ಸಂಸಾರ ವಾರಾಶಿ ಮಧ್ಯಾ
ಸ್ಪದ ಸರ್ಪ ಗ್ರಾಸಿ ಭೀಮಾಂತಕ ವದನ ಮಹಾ ಗರ್ತದೊಳ್ ಮಗ್ನರಾದರ್
೨೧೨

ವೈರಾಗ್ಯೋದಯಂ

ವನ ದಹನಂ ವನಾಂತರಮನೊರ್ಬುಳಸಾಗಿರೆ ಮುತ್ತಿ ಸುತ್ತಿ ಸು
ತ್ತಿನ ನಡುವಿರ್ದ ಮಾಪುರನನಱ್ಪಿದುದೀ ಮರನಂ ತಗುಳ್ದುದೆಂ
ಬನೊಳೆಣೆಯಾಗೆ ಸತ್ತರನೆ ಸಾಯದರಂತೆಣಿಸುತ್ತುಮಿರ್ಪ ಬೆ
ಳ್ತನದನಿತಲ್ಲದಾ ಮರನನಾ ದವದಗ್ನಿ ಬರ್ದುಂಕಲೀಗುಮೇ ೨೧೩

ಬಗೆದೀಡಾಡೆ ದುರಂತ ದುಃಖ ತತಿಗಳ್ ಬೆನ್ನಟ್ಟಿ ದುರ್ಮೋಹ ಮ
ತ್ಸ್ಯ ಗಣಂಗಳ್ ಕಡಿದಿಕ್ಕೆ ಲೋಭ ಮಕರಾನೀಕಂಗಳಾಟಂದು ನು
ಣ್ಣಗೆ ನುಂಗುತ್ತಿರೆ ಮಾರ ರಾಗ ಶಿಶುಮಾರಂಗಳ್ ಮಹೋಗ್ರಂಗಳಿ
ನ್ನೆಗವೋರಂತೆ ತೊಳಲ್ದೆ ನಿನ್ ತಿರಿಯಲಾಱೆಂ ಭವಾಂಭೋಧಿಯೊಳ್" ೨೧೪

ಎಂದು ಸಂಸಾರ ಶರೀರ ಭೋಗ ವಿರಕ್ತಾಂತರಂಗನುಂ ಮುಕ್ತಿ ಕಾಂತಾನು ರಕ್ತ ಚಿತ್ತನುಮಾಗಿರ್ಪನ್ನೆಗಂ, ತ್ರಿಭುವನ ಗುರು ಪರಿನಿಷ್ಕ್ರಮಣ ಕಲ್ಯಾಣ ಪ್ರತೀಕ್ಷಣರುಂ ಬ್ರಹ್ಮ ಕಲ್ಪಾಂತ ನಿವಾಸಿಗಳುಮಪ್ಪ ಎಣ್ಬರುಂ ಲೋಕಾಂತಿಕ ದೇವರ್ ಬಂದು,

ಸುರ ಭೂಜ ಪ್ರಸವಂಗಳಂ ಸುರಿದು ಪಾದಾಂಭೋಜದೊಳ್, "ದೇವ ಭೀ
ಕರ ಕರ್ಮದ್ವಿಷರಂ ಪಡಲ್ವಡಿಸಲುಂ ಭವ್ಯರ್ಕಳಂ ಘೋರ ಸಂ
ಸರಣಾಂಭೋನಿಧಿ ಪಾರಮಂ ಸಲಿಸಲುಂ ಸಾಲ್ಗುಂ ತ್ವದುದ್ಯೋಗಮಿ
ನ್ನಿರವೇಂ ತ್ರೈಭುವನೋಪಕಾರ ಕರಣ ವ್ಯಾಪಾರ ಪಾರಾಯಣಾ ೨೧೫

ಪರಮಾರ್ಹಂತ್ಯಮನೆಯ್ದಲಿರ್ದುದದಱಿಂ ಮೇಲುಂಟೆ ಸತ್ವಂ ಚರಾ
ಚರಮಂ ನೆಟ್ಟನೆ ಪರ್ವಲಿರ್ದುದದಱಿಂ ಮೇಲುಂಟೆ ವಿಜ್ಞಾನಮಿಂ
ತೆರಡರ್ಕಂ ನೆಲೆಯಾಗಿಯುಂ ವಸುಮತೀ ಸಾಮ್ರಾಜ್ಯದೊಳ್ ನೀನ್ ನಿರಾ
ದರನಾಗಿರ್ದುದೆ ತತ್ಸುಖಾನುಗುಣಮಂ ಪೇಳ್ಗುಂ ಗುಣಾಂಭೋನಿಧೀ ೨೧೬

ಅದು ಕಾರಣದಿಂದೀ ವಸುಂಧರಾ ರಾಜ್ಯ ಮೋಹಮೆಂಬ ವಜ್ರನಿಗಳಮಂ ಪಱಿಯೆ ಪೊಯ್ವ ರಾಜ ಕುಂಜರಂಗೆ ನಿನಗಪವರ್ಗ ಮಾರ್ಗಂ ನಿರರ್ಗಳಮೆ ವಲಮಾದೊಡಮೇಂ,

ವಿಶದ ಯಶ ಧರ್ಮಮಷ್ಟಾ
ದಶ ಕೋಟ್ಯನು ಕೋಟಿ ಸಾಗರೋಪಮ ಕಾಲಂ
ಪ್ರಶಮಿಸಿ ನಿಂದುದದಂ ನೀಂ
ವಿಶದಂಮಾಳ್ಪುದು ಜಗದ್ವಿಶೇಷಕ ಚರಿತಾ" ೨೧೭

ಪರಿನಿಷ್ಕ್ರಮಣಂ

ಎಂದು ಪ್ರತಿಬೋಧಿಸಿ ಪೋಗಲೊಡಂ, ವೃಷಭ ನಾಥಂ ಭರತ ರಾಜನಂ ಬರಿಸಿ ರಾಜ್ಯಾಭಿಷೇಕಂಗೆಯ್ದು ಬಾಹುಬಲಿಗಂ ಯುವರಾಜ ಪದವಿಯಂ ದಯೆಗೆಯ್ದು ಯೋಧ್ಯಾ ಪೌದನ ಪುರಾಧಿಪತ್ಯದೊಳಿರ್ವರುಮಂ ನಿಱಿಸಿ, ಉೞಿದಪತ್ಯವರ್ಗಕ್ಕೆಲ್ಲಮಿಳಾತಳವಿಭಾಗಮಂ ಪಚ್ಚುಕೊಟ್ಟು ಪರಿನಿಷ್ಕ್ರಮಣೋದ್ಯುಕ್ತ ಚಿತ್ತನಾಗಿ, ನಾಭಿರಾಜಾದಿಗಳಂ ಬೀೞ್ಕೊಂಡು ಸೌಧರ್ಮೇಂದ್ರ ದತ್ತ ಹಸ್ತಾವಲಂಬಂ ಸುದರ್ಶನಮೆಂಬ ಶಿಬಿಕೆಯನೇಱಿದಾಗಳ್,

ಪರಮೋತ್ಸಾಹದಿನಾಗಳೇೞಡಿವರಂ ಭೂಪಾಲರುಯ್ದರ್ ವಿಯ
ಚ್ಚರ ರತ್ನೇೞಡಿಯುಂ ವಿಯದ್ಗಮನದಿಂದಾಂತುಯ್ದರಲ್ಲಿಂ ಸುರಾ
ಸುರರಂಭೋದ ಪಥಕ್ಕಳಂಕರಣಮಾಗುಯ್ದರ್ ಬೞಿಕ್ಕಿಂದ್ರರಾ
ದರದುಯ್ದರ್ ಕಮನೀಯ ರತ್ನ ಶಿಬಿಕಾ ಸ್ಕಂಧರ್ ಜಗನ್ನಾಥನಂ ೨೧೮

ಅಂತುಯ್ವುದಂ ಕಂಡು ಪುರ ಜನಂಗಳ್,

"ಅರಸನ ಪುಟ್ಟಿದಿಂ ಬೞಿಯಮಿಾ ದಿವಿಜಾಳಿಗೆ ಮಾಣ್ದುದಿಲ್ಲ ಪೋ
ಬರವಿವರುಯ್ವರ್ಥಂ ಮಗುಳೆ ತರ್ಪರುಮಪ್ಪುದಱಿಂದಮಿಲ್ಲಿ ಕೊ
ಕ್ಕರಿಕೆಗೆ ಪೇೞಿಮಾವುದೆಡೆ ದೇವನನಿಲ್ಲಿಗೆ ತರ್ಪರೇಕೆ ಮಂ
ದರ ಶಿಖರಾಗ್ರದೊಳ್ ಮಿಸಿಸಿ ಮುನ್ನಿವರಿಲ್ಲಿಗೆ ತಂದರಲ್ಲರೇ ೨೧೯

ಅರಸನ ಪಂಬಲಂ ಬಿಸುಡಿಮೇಕೆನೆ ಬರ್ಪನೆಯಪ್ಪೊಡೀ ಧರಾ
ಭರಮನಶೇಷಮಂ ನಿಜ ತನೂಭವಗೋರ್ವದೆ ಪಚ್ಚುಕೊಟ್ಟು ಭೋಂ
ಕರಿಸುವ ದೇವ ಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋಪನೀ
ದೊರೆಯನನಾಳ್ದನಂ ಪಡೆವುಪಾಯಮದಾವುದೊ ಜನ್ಮ ಜನ್ಮದೊಳ್" ೨೨೦

ಎಂದು ತಮ್ಮ ತಮ್ಮ ಬಗೆಗಳನೆ ಬಗೆದು ನುಡಿಯೆ,

"ತನಯರನಿಟ್ಟು ಸಂತತಿಯೊಳಿಂತೆಮಗಂ ಬಗೆವೇೞದೇಕೆ ಪೋ
ದನೊ ನೃಪನೆಂತು ಸೈರಿಸುವೆವಯ್ಯ ವಿಯೋಗಮನೆ"ಂದು ಸೋರ್ವ ಕ
ಣ್ಬನಿಯ ತೆರಳ್ಕೆ ಗದ್ಗದಿಕೆಗೊಳ್ವ ಸರಂ ಮಿಗೆ ಪೋದರಾತ್ಮನಾ
ಥನ ಬೞಿಯಂ ಮನಂ ಮಱುಕಮುಯ್ಯೆ ಯಶಸ್ವತಿಯುಂ ಸುನಂದೆಯುಂ ೨೨೧

ಆಗಳಂತಃಪುರ ವೃದ್ಧರವರನ್, "ಅರಸರೀಗಳೆ ಬಂದಪ್ಪರಂಜದಿರಿಂ" ಎಂದಾಸೆವಾತುಗಳೊಳಾಱಿಸಿ ನುಡಿದೊಡಗೊಂಡು ಮಂದಿರಕ್ಕೆ ಮಗುಳ್ದರ್. ಇತ್ತ ನಾಭಿರಾಜ ಭರತೇಶ್ವರ ಕಚ್ಛ ಮಹಾಕಚ್ಛ ಪ್ರಮುಖ ಪಾರ್ಥಿವರುಂ ಮರುದೇವಿ ಮಹಾದೇವಿಯುಂ ಪರಿನಿಷ್ಕ್ರಮಣ ಕಲ್ಯಾಣಾವಲೋಕನ ಕುತೂಹಲದಿಂ ವೃಷಭೇಶ್ವರನೊಡನೆವರೆ, ಅಯೋಧ್ಯಾಪುರಕ್ಕತಿ ದೂರಮುಮತ್ಯಾಸನ್ನಮುಮಲ್ಲದ ಸಿದ್ಧಾರ್ಥವನದ ನಡುವಣ ಚಂದ್ರಕಾಂತ ಶಿಳಾತಳದೊಳ್ ಶಿಬಿಕೆಯನಿರಿಸಿ, ಸುರಾಸುರ ಸಭೆಯಂ ದೂರೋತ್ಸಾರಿತಂ ಮಾಡಿ ಜನದ ಕಳಕಳಮಂ

ಬಾರಿಸಿ ತನ್ಮಧ್ಯದೊಳ್ ಜಗನ್ನಾಥನನಿರಿಸಿ ಪರಿಚಾರಕ ಭೃತ್ಯಮಂ ದೇವೇಂದ್ರಂ ಮಾಡಲ್, ಶುಭ ಭಾವನೆವೆರಸು ಸಮಸ್ತ ವಸ್ತುಗಳೊಳ್ ಸಮತೆಯಂ ಭಾವಿಸಿ, ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗೋನ್ಮುಖಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣ ಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ, ಪೂರ್ವಾಭಿಮುಖನುಂ ನಿಬಿಡ ನಿಬದ್ಧ ಪಲ್ಯಂಕಾಸನನುಮಾಗಿ,

ಮನದ ಪರಿಚ್ಛೇದದಿನಂ
ದು ನಮಸ್ಸಿದ್ಧೇಭ್ಯ ಎಂದು ಕರ್ಮಂಗಳ ಬೇ
ರನೆ ಪಱಿವ ತೆಱದೆ ಪಱಿದಂ
ಮನಸ್ವಿ ಚಳದಳಿ ವಿನೀಳ ಕೇಶಾವಳಿಯಂ ೨೨೨

ಬರೆ ಚೈತ್ರ ಕೃಷ್ಣ ಪಕ್ಷಂ
ದೊರೆಕೊಳೆ ನವಮಿಯೊಳಮುತ್ತರಾಷಾಢಂ ದು
ರ್ಧರ ಜಿನದೀಕ್ಷೆಯನಘ ಕುಳ
ಕರ ಚಂಡಂ ಮೂಱು ಜಾವದಾಗಳ್ ಕೊಂಡಂ ೨೨೩

ಆಗಳ್ ತದುತ್ಪಾಟಿತ ಕುಂತಳಂಗಳನನರ್ಘ್ಯ ರತ್ನಮಯ ಪಟಳಿಕೆಯೊಳಾಂತು ಕೊಂಡು ಪೋಗಿ ಪಯೋಂಬುನಿಧಿಯೊಳ್ ಕೆದಱಿ, ದೇವೇಂದ್ರಂ ಪರಿನಿಷ್ಕ್ರಮಣ ಕಲ್ಯಾಣಮಂ ಮನ್ನಿಸಿ ತನ್ಮುನೀಂದ್ರ ಪದ ಪಯೋಜಂಗಳ್ಗೆಱಗಿ ಪೊಡೆವಟ್ಟು ಪೋಗೆ, ಭರತಂ ತ್ರಿಲೋಕಗುರು ಚರಣ ಸರಸಿಜಂಗಳನರ್ಚಿಸಿ ನಿಜ ಪರಿಜನಂಬೆರಸು ರಾಜಧಾನಿಗೆ ಪೋದಂ. ಕಚ್ಛ ಮಹಾಕಚ್ಛರುಂ ಭರತನ ಮಗಂ ಮರೀಚಿಯುಂಬೆರಸು ನಾಲ್ಸಾಸಿರ್ವರ್ ಮಕುಟಬದ್ಧರಪ್ಪರಸುಮಕ್ಕಳ್ ಪೋಗಲೊಲ್ಲದೆ ಭಕ್ತಿಯ ಭರದಿಂ ಜಾತರೂಪಮಂ ಕೈಕೊಂಡರ್.

## ೯ ಆದಿತೀರ್ಥಕರ್ತಾರರ ತಪಃಪ್ರಭಾವಂ

ಆಗಳಾ ತ್ರಿಲೋಕೈಕ ವಲ್ಲಭಂ,

ಇಂದಿಂಗಱಿದಿಂಗಳ್ ನೆಱೆ
ದಂದಲ್ಲದೆ ಕಯ್ಯನೆತ್ತೆನೆಂದನಶನದಿಂ
ನಿಂದಂ ಯೋಗದೊಳತಿ ನಿ
ಷ್ಪಂದಂ ಮಂದರನಗಂಬೊಲಚಳಿತ ಧೈರ್ಯಂ ೨೨೪

ನೆಗಲ್ದುದು ದೀಕ್ಷಾನಂತರ
ಮಗಣಿತ ಪುಣ್ಯೋದಯಂ ಮನಃಪರ್ಯಯಮಂ
ತೊಗೆದ ಚತುರ್ಜ್ಞಾನದೊಳಾ
ವಗಮೆಸೆದಂ ಜ್ಞಾನರೂಪನಾದಿಬ್ರಹ್ಮಂ ೨೨೫

ಅಂತಾ ಪರಮೇಶ್ವರಂ ಸಪ್ತರ್ಧಿ ಜ್ಞಾನ ಸಂಪನ್ನನಾಗಿ ನಿಶ್ಚಳಯೋಗ ನಿಯೋಗದಿಂದಮೊಂದೆರಡು ತಿಂಗಳ್ ನಿಲೆ, ಕಚ್ಛ ಮಹಾಕಚ್ಛ ಮರೀಚ್ಯಾದಿ ಗಳಾದಿ ಮುನಿಪತಿ ಮೊಗಮಂ ನೋಡಿ ಕಯ್ಯನೆತ್ತಿಕೊಳ್ವುದಂ ಕಾಣದೆ, ಕ್ಷುತ್ ಪಿಪಾಸಾ ಶೀತಾತಪ ಪ್ರಮುಖ ಪರೀಷಹಂಗಳಂ ಸೈರಿಸಲಾಱದೆ ಭಗ್ನೋತ್ಸಾಹರುಂ ದೂರೋತ್ಸಾರಿತಾಭಿಮಾನಿಗಳುಮಾಗಿ,

"ದಿವಸಮನೊಂದು ಮೇಣೆರಡು ಮೂಱನೆ ನಿಲ್ವುದು ಮೂಱು ತಿಂಗಳಾ
ಯ್ತುವಚಱದಿಂತು ನಿಂದನೊಳನೇ ಶನಿ ನಿಲ್ವವೊಲಿಲ್ಲಿ ಪಾೞಿಗಿ
ನ್ನೆವರೆಗಮಿರ್ದೆವಿನ್ನೆಮಗೆ ನಿತ್ತರಿಸಲ್ ನೆಱವಿಲ್ಲ ತಾಱಲಾ
ದುವು ತನು ಕೂೞ ನೀರ ದೆಸೆಯಿಲ್ಲದೊಡಲ್ಗಳನೆಂತು ತಾಳ್ದುವಂ ೨೨೬

ಮಿಂದುಂಡು ಕುಡಿದು ಮಗುಳ್ದುಂ
ಬಂದಿರ್ಪೊಡಮಿರ್ಪಮಿನಿತುಮಿಲ್ಲದೆ ಗುಱುಗು
ಮ್ಮೆಂದು ಪಸಿದಿರ್ದು ಬೆದಬೆದ
ಬೆಂದಿನಿಬರ್ ಕಟ್ಟಿಕೊಳ್ವ ಕಣಿಯೇಂ ಪೇೞಿಂ ೨೨೭

ಇದು ರಾಜ ವಿದ್ಯೆಯೊಳಗಾ
ವುದು ವಿದ್ಯೆಯೊ ಷಡ್ಗುಣಂಗಳೊಳಗಾವ ಗುಣಂ
ಪುದಿದೊದವಿದ ಮೆಯ್ಯಾಗಿಪಿ
ಲ್ಲದರಣ್ಯದೊಳಿರ್ಪುದಾವ ನೀತಿಗಳೊಳಗೋ ೨೨೮

ಬರೆ ಬಂದು ನಡೆಯೆ ನಡೆದಿ
ರ್ದಿರೆ ಕುಳ್ಳಿರ್ದೆೞ್ದೊಡೆೞ್ದು ನಿಂದೊಡೆ ನಿಂದಾ
ಳರಸೆನಿಸಿ ನೆಗಲ್ದು ಬನದೊಳ
ಗರಸಂ ನಿಲೆ ನಿಂದೆವಿನಿತು ದಿವಸಂಬರೆಗಂ ೨೨೯

ಇನ್ನೆಮಗೆ ನಿಲಲುಂ ನಿಸ್ತರಿಸಲುಂ ಬಾರದು. ಬಿಸುಟು ಪೋಪೊಡಂ ಭರತನ ದೆಸೆಯೊಳಪಮಾನ ಸ್ಥಾನರಪ್ಪೆವದಱಿಂದಂ ನಮ್ಮರಸನಿಂದು ನಾಳೆ ಕಯ್ಯನೆತ್ತಿಕೊಂಡು ಪೋಗಿ ಮಗುಳ್ದು ರಾಜ್ಯದೊಳ್ ನಿಲ್ವನ್ನೆಗಮೀ ಬನದ ಕಂದ ಮೂಲ ಫಲಂಗಳಂ ತಿಂದುಂ ಸರೋವರ ಜಲಂಗಳಂ ಕುಡಿದುಂ ನಿಸ್ತರಿಸುವಂ" ಎಂದು ಬಗೆದು ಪೋಗಿ ಪಣ್ಫಲಂಗಳಂ ಪಱಿಯಲುಂ ಕೊಳದ ತಿಳಿನೀರಂ ಕುಡಿಯಲುಂ ಕಯ್ಯಂ ನೀಡುವುದುಂ, ಕಂಡು,

"ಈ ರೂಪೆಂಬುದು ಭುವನ ಜ
ನಾರಾಧ್ಯಂ ಚಕ್ರಿ ಜನ ನಿಷೇವಿತಮಿದಱೊಳ್
ಸಾರದಱಿಪೆ" ಂದುಪೆಳ್ಳನೆ
ಬಾರಿಸಿದುವು ಬಿಡದೆ ಜಡಿದು ವನದೇವತೆಗಳ್ ೨೩೦

ಆಗಳವರ್ಗಳಾ ರೂಪಿನೊಳದಂ ನೆಗೞಲಂಜಿ ವಲ್ಕಲವಸನರುಂ ಕೌಪೀನ ಧಾರಿಗಳುಂ ಭಸ್ಮೋದ್ಧೂಳಿತಾಂಗರುಂ ಜಟಾಧರರುಂ ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ ತಮಗೆ ತಾಮೇ ವನಪ್ರವೇಶಮಂ ಮಾಡಿ ವಿವಿಧ ಫಲಾಶಿಗಳುಂ ಸರೋವರ ನದೀ ನಿರ್ಝರಾಂಬು ಪಾಯಿಗಳುಮಾಗಿ ಪರಿತ್ಯಕ್ತಾನ್ಯ ದೇವತಾ ಬುದ್ಧಿಗಳ್ ವೃಷಭೇಶ್ವರನ ಪದ ಪಯೋಜಂಗಳನರ್ಚಿಸುತ್ತುಮಿರೆ, ಭರತ ಸುತಂ ಮರೀಚಿ ಅಪಸಿದ್ಧಾಂತಂಗಳಿಂ ಮಿಥ್ಯಾತ್ವ ವೃದ್ಧಿಯಂ ಮಾಡಿ ಕಾಪಿಳ ಸಿದ್ಧಾಂತಮುಮಂ ಯೋಗ ಶಾಸ್ತ್ರಮುಮಂ ತೋಱಿ ಲೋಕಮಂ ಸಮ್ಯಗ್ಜ್ಞಾನ ಪರಾಙ್ಮುಖಂ ಮಾಡಿರೆ, ಇತ್ತಲಾದಿ ತೀರ್ಥ ಕರ್ತಾರನಮರ ಗಿರಿಯಂತಚಳಿತನುಂ ಪಾರಾವಾರದಂತಕಲುಷಿತನುಂ ಅನಿಲನಂತೆ ನಿಸ್ಸಂಗನುಂ ಅಂಬರದಂತೆ ನಿರ್ಲೇಪನುಮಾಗಿ ನಿಲೆ, ಆ ಮುನೀಂದ್ರನ ತಪಃಪ್ರಭಾವದೊಳ್ ಅನ್ಯೋನ್ಯ ವೈರಂಗಳಂ ಮಱೆದು,

ಕರಿಗಳ್ ಕೇಸರಿಗಳ್ಗೆ ಪುಷ್ಕರ ಧೃತ ಸ್ವಚ್ಛಾಂಬುವಂ ನೀಡೆ ಭೀ
ಕರ ಶಾರ್ದೂಲ ಕುಳಂ ಕುರಂಗ ಕುಲದೊಳ್ ತಳ್ಪೊಯ್ದು ಬಂದಾಡೆ ಕೇ
ಸರಿಣೀ ಸ್ತನ್ಯಮನನ್ಯ ವನ್ಯ ಗಜ ಪೋತಾನೀಕಮುಂಡಾಡೆ ಶಾಂ
ತ ರಸಂ ಪೊಂಪುಱಿವೋದುದಾ ಮುನಿಪನಿಂ ತತ್ಕಾಂತ ಕಾಂತಾರದೊಳ್ ೨೩೧

## ೧೦ ಯೋಗ ವ್ಯಾಘಾತಂ; ವ್ಯಾಘಾತ ಪರಿಹಾರಂ

ಆ ಪ್ರಸ್ತಾವದೊಳ್ ಕಚ್ಛ ಮಹಾಕಚ್ಛರ ತನಯರಪ್ಪ ನಮಿ ವಿನಮಿಗಳ್ ವಿಷಯ ಸುಖಾನುಭವೋನ್ಮುಖ ಮಾನಸರ್ ಕೃಪಾಣ ಖೇಟಕ ವ್ಯಗ್ರಪಾಣಿಗಳ್ ಬಂದು ಆದಿ ಪುರುಷನ ಪದ ಪಯೋಜಂಗಳನರ್ಚಿಸಿ ಯುಕ್ತಾಯುಕ್ತ ವಿಚಾರದೂರ ಮತಿಗಳಾಗಿ,

"ಕಡಲ ತಡಿಯೆಯ್ದೆ ನೆಲನಂ
ಪಡೆದರ್ ಭವದೀಯ ಪುತ್ರರುಳ್ಳವಿಗಳೊಳ್
ಪಡೆದುದು ಬಂಧು ಜನಂ ನಿ
ಮ್ಮಡಿಗಾವೇಂ ಪೋಷ್ಯ ವರ್ಗದಿಂದಂ ಪೊಱಗೇ ೨೩.೨

ಎಮಗನೆಮಗಪ್ಪ ಭಾಗದ
ಸಮಕಟ್ಟಂ ದೇವ ಕುಡಲೆವೇೞ್ಪುದು ನಂಟರ್
ನಿಮಗೆಮ್ಮಿಂದಗ್ಗಳಮಾರ್
ಸಮಸ್ತ ಸುರ ಮಕುಟ ಮಣಿ ಕಿಣೀಕೃತ ಚರಣಾ" ೨೩.೩

ಎಂದು ತಮ್ಮ ಭೋಗ ಕಾಂಕ್ಷೆಯನೆ ಬಗೆದು ಯೋಗ ವ್ಯಾಘಾತಮಂ ಮಾಡುವುದುಂ, ಉತ್ಪನ್ನಾವಧಿ ಬೋಧಂ ಧರಣೇಂದ್ರನಱಿದು ಭೋಂಕನೆ ಬಂದು ಆದಿ ದೇವನ ನಿಶ್ಚಳ ತನುವಂ ಕಂಡು ನಿಜಾಕೃತಿ ಸಂವೃತಿಯಿಂ ತ್ರಿಭುವನ ಗುರುಗೆ ಪೊಡೆವಟ್ಟು ನಮಿ ವಿನಮಿಗಳ ಮೊಗಮಂ ನೋಡಿ, "ಪರಿವರ್ಜಿತ ಭೋಗನೊಳ್ ಭೋಗ ಪರಂಪರೆಯನಱಸುವುದೆ? ಇನಿತು ಬಯಕೆಯುಳ್ಳೊಡೆ ನಿಮ್ಮಿರ್ಬರುಂ ಭರತನನೋಲಗಿಸಿ ವಾಂಛಿತಮಂ ಪಡೆಯಿಂ" ಎಂಬುದುಂ, ಅವರ್, "ಒಳಗಱಿಯದೆ ಪೊಱಗಱಿಯದೆ ನಿಮ್ಮಂತು ನುಡಿವರುಮೊಳರೆ?

ಕುಡುವಂ ಗುರು ಪಡೆವರ್ ಪೆಱ
ರೆಡೆಯೊಳ್ ನೀಮಾರ್ಗಿದೇಕೆ ಕಿಡೆ ನುಡಿದಪಿರಿ
ಟ್ಟೆಡೆವೆರ್ಗಡೆತನದೊಳಿದೇ
ವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ ೨೩.೪

ಸುರ ಭೂರುಹಮಿರೆ ಮತ್ತಿನ
ಮರಮಂ ಜಳ ರಾಶಿಯಿರೆ ಕುಳುಂಪೆಯ ನೀರಂ
ಎರೆವಮೆ ಪುರು ಪರಮೇಶ್ವರ
ನಿರೆ ಭರತನನೆಮ್ಮ ಮಹಿಮೆಗಂತದು ದೊರೆಯೇ ೨೩೫

ಚಾದಗೆ ನವೋದಬಿಂದುವ
ನಾದರಿಪವೊಲು ಱದ ಕೆಱೆಯ ತೊಱೆಯುದಕಮನೇ
ನಾದರಿಕುಮೆ ದೇವನ ದಾ
ನೋದಯಮಂ ಪಾರ್ವವುಱದುದರ್ಕೆಱಗುವೆವೇ" ೨೩೬

ಎಂಬುದುಂ, ಧರಣೇಂದ್ರನವರ ಮಹಾನುಭಾವಮುಮನಾದಿ ದೇವನೊಳಾದ ನಿರ್ಭರ ಭಕ್ತಿಯುಮಂ ಮೆಚ್ಚಿ ದಿವ್ಯ ರೂಪಮಂ ತೋಱ,

"ಧರಣೇಂದ್ರನೆನಭವನ ಕಿಂ
ಕರನೆನ್ ನಿಮಗಪ್ಪ ಭಾಗಮಂ ಕುಡಲೆನ್ನನ್
ಗುರು ಮುನ್ನಂ ಬೆಸಸಿದನಿ
ನ್ನಿರದೆನ್ನೊಡವನ್ನಿಮೆನ್ನ ಪೇಳ್ದುದು ಗೆಯ್ಯಿಂ" ೨೩೭

ಎಂಬುದುಂ, "ಅಧಿಪಂ ಸಂಮುಖದಿಂ ಬೆಸಸಿದೊಡಲ್ಲದೊಲ್ಲೆವು" ಎನೆ, ವಿಕ್ರಿಯೆಯಿಂ ಬೆಸಸುವಂತೆ ಮಾಡಿ ನಮಿಯುಮಂ ವಿನಮಿಯುಮಂ ನಿಜ ವಿಮಾನಮನೇಱಸಿಕೊಂಡು ಪೋಗಿ ರಜತಾಚಲಮನೆಯ್ದಿ,

ದೊರೆಗಂ ಪೆಂಪಿಂಗಮಾಟಪ್ಪವರ ಮಹಿಮೆಯಂ ತಾಳ್ದಿದಿರ್ ನೀಮೆ ಗಂಭೀ
ರರಿರಂತಸ್ಸಾರರಿರ್ ನೀಮಿರೆ ಪೆಱರೊಳರೇ ಸಕ್ಕಿಮಾಡಲ್ಕೆ ವಿಶ್ವಂ
ಭರೆಯೊಳ್ ಸಂದೀ ಮದೀಯಾಯತಿಯ ದೊರೆಗೆ ನೀಂ ಸಕ್ಕಿಯೆಂಬಂ
ತಿರೆ ನೀಳ್ಪಿಂ ಪರ್ವಿ ಪೂರ್ವಾಪರ ಜಳಧಿಗಳಂ ಮುಟ್ಟೆ ನಿಂದತ್ತಗೇಂದ್ರಂ ೨೩೮

ಮಿಡಿವಂ ಬೀಣೆಯನಿವನಿವ
ಳೊಡನೆಸೆವಳ್ ಬೆರಲ ಕೊರಲ ಕೂಟಂ ಬೆರಲಂ
ಮಿಡಿಯಿಸಿದುದೆನಿಸಿ ರಾಗದ
ತೊಡರೊಳ್ ತೊಡರ್ದಿರ್ಪುವಲ್ಲಿ ಕಿನ್ನರ ಯುಗಳಂ ೨೩೯

[ಇಂತು ಸೊಗಯಿಸಿರ್ದ] ವಿಜಯಾರ್ಧದೊಳ್ ನಿಂದು, ಅವರನಲ್ಲಿಗೆ ವಾಸ್ತವ್ಯರ್ ಮಾಡಿ ದಕ್ಷಿಣೋತ್ತರ ಶ್ರೇಣಿಗಳೊಳಿರ್ಪ ವಿದ್ಯಾಧರಾಧೀಶ್ವರರಂ ಬರಿಸಿ, ಗಗನವಲ್ಲಭ ರಥನೂಪುರ ಚಕ್ರವಾಳಂಗಳೆಂಬ ರಾಜಧಾನಿಗಳಾಗಿ ನೆಗಳ್ದು ನೂಱಪತ್ತುಂ ಪೊಲಲ್ಗಳನೊಳಕೊಂಡ ದಕ್ಷಿಣೋತ್ತರ ಶ್ರೇಣಿಗಳಂ ನಮಿ ವಿನಮಿಗಳ್ಗೆ ಕೊಟ್ಟು, ಗಾಂಧಾರ ಪನ್ನಗ ವಿದ್ಯೆಗಳನವರ್ಗೆ ವಿಧಿ ಪೂರ್ವಕಮಿತ್ತು,

"ಇದು ಪುರು ದೇವ ಶಾಸನಮಿವರ್ ನಿಮಗಾಳ್ವರುಮಿರ್ವರೆನ್ನ ಪೇ
ಳ್ದುದನಿದನಿಂತೆ ನಂಬಿ ಬೆಸಕಯ್ವುದು ನೀಮಿವರ್ಗೆ"ಂದು ಖೇಚರಾ
ಸ್ಪದ ಸಕಳಾಧಿಪತ್ಯಮನನಾಕುಳಮಂತವರ್ಗಿತ್ತನಾರ್ಗಮ
ಭ್ಯುದಯಮನೀಗುಮೆಂಬುದದು ಚೋದ್ಯಮೆ ತತ್ಪುರುದೇವ ಸೇವನಂ ೨೪೦

## ೧೧ ಚರ್ಯಾ ಪರ್ಯಟನಂ; ಅಕ್ಷಯ ದಾನಂ

ಅನ್ನೆಗಮಿತ್ತಲ್,

ಇದು ಬೇಱೊಂದಿಳೆಗತ್ಯುದಗ್ರ ಮಹಿಮಂ ಹೇಮಾಚಳೇಂದ್ರಂ ಜಗ
ಕ್ಕಿದು ಬೇಱೊಂದತಿ ನಿಷ್ಪ್ರಕಂಪ ಸಲಿಲಂ ಗಂಭೀರ ಕೂಪಾರಮೆಂ
ಬುದನೆಂದರ್ಚಿಸೆ ಖೇಚರಾಮರ ಗಣಂ ನಿಂದಂ ಕೊಳಲ್ ಶಾಶ್ವತಾ
ಸ್ಪದಮಂ ಯೋಗ ನಿಯೋಗ ನಿಶ್ಚಳಮನಂ ಸಂದಾದಿ ಭಟ್ಟಾರಕಂ ೨೪೧

ಪರಮಂ ಪೂಣ್ದ ಱುದಿಂಗಳಂ ನೆಱಪಿ ಚರ್ಯಾಮಾರ್ಗ ದೊಂದಂದಮಂ
ಧರೆಯೊಳ್ ಮಾರ್ಗ ವಿಬೋಧನಾರ್ಥಮಱ ಪಲ್ಕೆಂದೆತ್ತಿ ಕಯ್ಯಂ ಸುರೇ
ಶ್ವರಶೈಳಂ ತಳರ್ವಂತೆವೊಲ್ ತಳರ್ದನೀರ್ಯಾಗೋಚರಂ ಶುದ್ಧಿ ತ
ಳ್ತಿರೆ ತನ್ನೊಳ್ ಧರೆಯಂ ಪದಾಂಬುಜ ರಜಂಗಳ್ ನೀರಜಂ ಮಾಳ್ಪಿನಂ ೨೪೨

ಅಂತು ತಳರ್ದು ಗ್ರಾಮ ನಗರ ಖೇಡ ಖರ್ವಡ ಮಡಂಬಂಗಳೊಳೊಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ ಜನ ಪದ ಪುರ ಸನಾಭಿ ಜನಂಗಳ್ ಕಂಡರ್ ಕಂಡಲ್ಲಿಯೆ ಮುಸುಱಿಕೊಂಡು,

ಬೆಸನಾವುದೆಮಗೆ ಬೆಸನಂ
ಬೆಸಸೆನೆಯೇಬಾಟ್ತಿಯೆಂದು ಮುಂದಿಟ್ಟರ್ ಪ್ರ
ಗ್ವಸನ ವಿಲೇಪನ ಭೂಷಾ
ಪ್ರಸರಂಗಳನಲ್ಲಿ ಕೆಲಬರತಿ ಜಡಮತಿಗಳ್ ೨೪೩

ಸುತ್ತಿದ ಕರಗದ ನೀರುಮ
ನೆತ್ತಿದ ಬೋನಮುಮನಿದಿರೊಳಿಟ್ಟರೆ ಬನ್ನಿಂ
ಇತ್ತೇೞ್ತಾಯೆಂದರ್ ಮುನಿ
ಪೋತ್ತಮನಂ ಮುಗ್ಧಮತಿಗಳೇನಂ ಮಾಡರ್ ೨೪೪

ಪಸೆಯಂ ಪಸುರ್ವಂದರುಮಂ
ಪೊಸಯಿಸಿ ಕನ್ನೆಯರನಾನಕಧ್ವನಿ ದೆಸೆಯೊಳ್
ಪಸರಿಸೆ ತಂದರ್ ಪಿರಿದೊಂ
ದೊಸಗೆಯೊಳಿರದರಸ ಮದುವೆನಿಲ್ಲೆಂದರೆಬರ್ ೨೪೫

ಬಳಗಂ ಬೆರಸರೆಬರ್ ಕಾ
ಲ್ಗಳ ಮೊದಲೊಳುದಶ್ರುಲೋಚನರ್ ಮಿಂದುಂಡೀ
ಗಳೆ ಬಿಜಯಂಗೆಯ್ಯೆಂದಿರೆ
ಕುಳಾದ್ರಿ ಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ ೨೪೬

ಅಂತಾ ಮುನೀಶ್ವರಂಗೆ ನಿಖಿಳ ಜಗಜ್ಜನಾಶ್ಚರ್ಯ ಚರ್ಯಾ ಪರ್ಯಟನದೊಳ್ ಮತ್ತಮಱುದಿಂಗಳ್ ಪೋಗೆ ಸಂವತ್ಸರಂ ನೆಱೆದಂದು, ಹಸ್ತಿನಾಪುರಮನಾಳ್ವ ಕುರು ವಂಶ ಶಿಖಾಮಣಿ ಸೋಮಪ್ರಭಂಗೆ ತತ್ಸ್ವಯಂಪ್ರಭಾ ಶ್ರೀಮತ್ಯಾರ್ಯಾ ಸ್ವಯಂಪ್ರಭದೇವ ಕೇಶವ ಮಹೀಶಾಚ್ಯುತ ಪ್ರತೀಂದ್ರಂ ಧನದೇವಚರಂ ಸರ್ವಾರ್ಥ ಸಿದ್ಧಿಯಿಂ ಬಂದು ಶ್ರೇಯಾಂಸನೆಂಬೊಂ ಪ್ರಿಯಾನುಜನಾಗಿರ್ದಾತಂ ಅಂದಿನ ಬೆಳಗಪ್ಪ ಜಾವದೊಳ್,

ಸುರ ಶೈಲಂ ಕಲ್ಪವೃಕ್ಷ ಪ್ರಕರ ಪರಿವೃತಂ ರಾಜ ಗೇಹಾಂಗಣಾಳಂ
ಕರಣಂ ಬಂದಿರ್ದುದಂ ಕಂಡಮರ ಗಿರಿ ನಿಭಂ ಪ್ರಾರ್ಥಿತಾರ್ಥ ಪ್ರದಂ ಮಾ
ಣ್ದಿರದಾದಿ ಬ್ರಹ್ಮನೇೞ್ತರ್ಪುದನೆ ಕನಸುವೇೞ್ದಪ್ಪುದೆಂದಗ್ರಜಂಗಾ
ದರದಿಂದಂ ಪೇೞ್ದು ಕಾಣ್ಬುತ್ಸವದೊಳೆ ಪರಮಾನಂದಮಂ ತಾಳ್ದಿ ನಿಂದಂ ೨೪೭

ಅಕ್ಷಯದಾನಂ

ಅನ್ನೆಗಮಾದಿ ಮುನೀಶ್ವರನುಮಾ ಪುರಾಂತರಾಳದೊಳ್ ಉತ್ತಮ ಮಧ್ಯಮ ಜಘನ್ಯಾಗಾರಂಗಳೊಳ್ ಚಂದ್ರ ಗತಿಯಿಂ ಸಲುತ್ತುಮಾಳೋಕ ಸಂಭ್ರಮೋಪೇತ ಪುರ ಜನಾನುಗಮ್ಯಮಾನಂ ಸೋಮಪ್ರಭ ರಾಜ ಮಂದಿರಾಭಿಮುಖನಾಗಿ ಬರ್ಪನ್ನೆಗಂ ದ್ವಾರಪಾಳಕಂ ಸೋಮಪ್ರಭಂಗಂ ಶ್ರೇಯಾಸಂಗಮಱಿಪಿದಾಗಳ್,

ಕರ ಕಳಿತಾರ್ಘ್ಯ ಪಾದ್ಯನನವದ್ಯಗುಣಂಗೆ ಸಮಸ್ತ ರಾಜಕಂ
ಬೆರಸಿದಿರೆಟ್ದು ರಾಜ ಗೃಹದಿಂ ಪೊಱಮಟ್ಟತಿ ಭಕ್ತಿಯಿಂ ಪದಾಂ
ಬುರುಹಮನೆಯ್ದೆ ವಂದಿಸಿಗೆ ಶೋಭಿಸಿದಂ ಮುನಿ ಮುಖ್ಯನಾಗಳಿ
ರ್ವರ ನಡುವಿರ್ದು ನೀಳನಿಷಧಂಗಳ ಮಧ್ಯದ ಮಂದರಾದ್ರಿವೋಲ್ ೨೪೮

ಆಗಳಾದಿ ತೀರ್ಥ ಕರ್ತಾರನ ದಿಗಂಬರರೂಪಮಂ ಕಾಣಲೊಡಂ ಶ್ರೀಮತಿಯಾದ ಭವದೊಳ್ ವಜ್ರಜಂಘನುಂ ತಾನುಂ ಚಾರಣ ಯುಗಳಕ್ಕೆ ಮಹಾದಾನಮನಿತ್ತುದನಾಗಳಾಗಳೆ ಪುಟ್ಟಿದ ಭವ ಸಂಸ್ಕಾರದಿಂದಂ ಸವಿಸ್ತರಮಱಿದು,

ಈಯಲ್ ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವಪುಣ್ಯಾರ್ಜಿತಂ
ಈಯಲ್ ಬಂದತ್ತಿದೊಂದಕ್ಷಯ ನಿಧಿಯೆನುತುಂತನ್ನನೊಲ್ದಾ ತ್ರಿಲೋಕ[ಕೊಳ್
ಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿ ಕರ್ಣಾವತಂಸಂ
ಶ್ರೇಯಾಂಸಂ ಪ್ರೋನ್ನತಾಂಸಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ
೨೪೯

ಇದಿರೊಳ್ ಮಂಗಳ ಗೀತ ತೂರ್ಯ ನಿನದಂ ಕೈಗಣ್ಮೆ ಮಾಂಗಲ್ಯ ವೇ
ಷದ ಕಾಂತಾ ತತಿ ಮಂಗಳೋಪಕರಣ ದ್ರವ್ಯಂಗಳಿಂದೊಪ್ಪೆ ಪೆ
ರ್ಚಿದ ತನ್ನುತ್ತಮ ಭಕ್ತಿಯಿಂ ನಿಲಿಪುದುಂ ಶ್ರೇಯೋ ಗೃಹ ದ್ವಾರದೊಳ್
ನಿಧಿ ನಿಲ್ವಂತಿರೆ ನಿಂದನೂರ್ಜಿತ ಗುಣಂ ಸಂಸಾರ ಸಾರೋದಯಂ ೨೫೦

ಶ್ರೀ ದಾನ ತೀರ್ಥಮಿಂತನಿ
ನಾದುದು ಪೆಱರಾದಿ ತೀರ್ಥ ಕರನಂ ನಿಱಿಸ
ಲ್ಕೇ ದೊರೆಯರೀಗಳೀ ಯುಗ
ದಾದಿಯೊಳೀತನೆ ಸರಸ್ವತೀ ಮಣಿಹಾರಂ ೨೫೧

ಎಂಬಿನಮಾದಿ ತೀರ್ಥ ಕರ್ತಾರನಂ ಶ್ರದ್ಧಾದಿ ಗುಣ ಸಂಪನ್ನನಾಗಿ ನಿಱಿಸಿ, ಕರ್ಮ ಭೂಮಿಯ ಮೊದಲೊಳಾದಿ ದಾನತೀರ್ಥ ಪ್ರವರ್ತಕಂ ಶ್ರೇಯಾಂಸಂ ನಿಜಾಗ್ರಜನಪ್ಪ ಸೋಮಪ್ರಭಂಬೆರಸು ಕನಕ ಕಳಶದೊಳ್ ತೀವಿದಮೃತ ರಸ ಸಮಾನ ಧವಳೇಕ್ಷು ರಸ ಧಾರೆ ಪುಣ್ಯಧಾರೆಯಂತೆ ಸೊಗಯಿಸುವಿನಂ ವಿಶಾಲ ಪಾಣಿ ಪಾತ್ರದೊಳೆಱೆವುದುಂ,

ವಸು ಧಾರೆ ನಾಡೆಯುಂ ಕ
ಣ್ಗೆಸದಳಮಾಯ್ತಮರ ಕರ ಪರಿಚ್ಯುತಮೆತ್ತಂ
ಪೊಸ ಪೂವಿನ ಸರಿ ಪಿರಿದಾ
ಯ್ತುಸದಳಮೆಸಪೆಲರದೊಂದು ಮೇಲ್ವಾಯ್ದಾಗಳ್ ೨೫೨

ಆನಂದ ದುಂದುಭಿ ಧ್ವನಿ
ತಾನೊಡನೊಡನೆಸೆಯೆ ನಭದೊಳೊಡನೆಸೆದುದಹೋ
ದಾನಿಯಹೋ ಪಾತ್ರಮಹೋ
ದಾನಮಹೋ ದೇಯಮೆಂಬ ದಿವ್ಯಧ್ವನಿಗಳ್ ೨೫೩

ಅಂತು ಕಾಯ ಸ್ಥಿತಿಯಂ ನಿರ್ವರ್ತಿಸಿ ತದನಂತರಮೆ

ಕುರು ಗೋತ್ರಂ ಧರೆಯೊಳ್ ಪವಿತ್ರಮೆನಿಸಲ್ಕಿನ್ನಾರ್ತುದಿಂದೆಮ್ಮ ಮಂ
ದಿರಮೀ ಭೂ ಭುವನೈಕ ಪೂತಮೆನಿಸಲ್ ಸಾಲ್ದಿರ್ದುದಾಮುಂ ಕೃತಾ
ರ್ಥರೆಮೆಂದಾದಮನುಗ್ರಹಂಗೆಯಲೆ ನೀಮೇಳ್ದಂದೊಡೆಂದಾಗಳಿ
ರ್ವರುಮತ್ಯುತ್ತಮ ಭಕ್ತಿಯಿಂದೆಱಗಿದರ್ ತತ್ಪಾದ ಪದ್ಮಂಗಳೊಳ್ ೨೫೪

ಅಕ್ಷಯ ದಾನಂ ನಿಮಗ
ಕ್ಕಕ್ಷುಣ್ಣಮಿದೆಂದು ಪರಮ ಮುನಿ ಪರಸೆ ಬಳಿ
ಕ್ಕಕ್ಷಯ ತೃತೀಯೆಯೆಂದಖಿ
ಳ ಕ್ಷಿತಿಗಂ ನೆಗಟ್ಟುದಲ್ತೆ ತತ್ಪುಣ್ಯದಿನಂ ೨೫೫

ಅಂತು ಪರಸಿ ಪೊಱಮಟ್ಟು ಪೋಪ ಯತಿಪತಿಯನಿರ್ವರುಮಗಲಲಾಱ ದೊಡನೆ ಪೋಗಿ ಕಿಱಿದಂತರಮಂ ಕಳಿಪಿ ಮಗುಳ್ದು ಬಂದು ದಿವಿಜ ಕರೋನ್ಮುಕ್ತ ರತ್ನಂಗಳಂ ಪೊಱಲ್ಗೆಲ್ಲಂ ಗೋಸನೆವಿಡಿಸಿ ನೆಗಟ್ದರ್.

## ೧೨ ಕೈವಲ್ಯಬೋಧೋದಯ ಮಹಿಮೆ

ಅನ್ನೆಗಮಿತ್ತ ವೃಷಭ ಯೋಗೀಂದ್ರನುಂ ಜಿನ ಕಲ್ಪಿತಮೆಂಬಾಚರಣಮಂ ಕೈಕೊಂಡು ಯೋಗ ಯೋಗ್ಯಂಗಳೊಳ್ ಅವಹಿತ ಧ್ಯಾನಾಧೀನ ಮಾನಸನಾಗಿ ವಿಹಾರಿಸುತ್ತುಂ ಸಂವತ್ಸರ ಸಹಸ್ರಂಗಳಂ ಕಳಿಪಿ, ಪುರಿಮತಾಳ ಪುರ ಬಹಿರ್ಭಾಗ ಶಕಟೋದ್ಯಾನ ವಟ ವಿಟಪಿಯ ಕೆಳಗೆ ವಿಶಾಳ ನಿರಾಕುಳ ನಿರ್ಜಂತುಕ ನಿರ್ಮಲ ಶಿಲಾಪಟ್ಟದ ಮೇಲೆ ನಿಬಿಡ ಬದ್ಧ ಪಲ್ಯಂಕಾಸನನುಂ ಪೂರ್ವಾನುಮುಖನು ಮಾಗಿರ್ದಾಗಳ್,

ಕರಣ ಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು
ಳ್ಳರೆಮುಗುಳ್ದಿಂಬುವೆತ್ತಿರೆ ಕರ ದ್ವಯ ಪಲ್ಲವಮಂಕದೊಳ್ ಮರ
ಲ್ದಿರೆ ತನು ನಿಷ್ಪ್ರಕಂಪಮಿರೆ ದಂತ ಚಯಂ ಸಮನಾಗಿ ತನ್ನೊಳೊಂ
ದಿರೆ ಸಮಸಂದುದಾ ಪರಮ ಯೋಗಿಗೆ ಯೋಗ ನಿಯೋಗ ಭಾವನಂ ೨೫೬

ಅಂತು ಯೋಗ ಯೋಗ್ಯ ಬಾಹ್ಯ ಸಾಮಗ್ರಿಯೊಳ್ ಮುನ್ನಮೆ ನೆಱೆದು ಪರಮ ಪದಮನೆ ಮನದೊಳ್ ನಿಱಿಸಿ ಸಿದ್ಧ ಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತುಂ, ಅಧ್ರುವಾದಿ ದ್ವಾದಶಾನುಪ್ರೇಕ್ಷಾ ಭಾವನಾ ಭಾವಿತಾಂತಃಕರಣನಾಗಿ, ದರ್ಶನ ಮೋಹನೀಯ ತ್ರಿಕದ ನಿರ್ಮೂಲದಿಂ ಕ್ಷಾಯಿಕ ಸಮ್ಯಗ್ದೃಷ್ಟಿಯಾಗಿ, ಶುಕ್ಲ ಧ್ಯಾನ ಪರಿಣತನಾಗಿರ್ದಾಯುಃಕರ್ಮಮನುೞಿಪಿ ಮತ್ತಿನುೞಿದ ಕರ್ಮಂಗಳನನುಕ್ರಮಂ ಕಿಡಿಸುತ್ತುಂ, ಚರಮ ಸಮಯದೊಳ್ ಜ್ಞಾನಾವರಣ ಪಂಚಕಮುಮಂ ಅಂತರಾಯ ಪಂಚಕಮುಮಂ ನಿರ್ಮೂಳಮಪ್ಪಂತೊರ್ಮೊದಲೆ ಕಿಡಿಸಿ, ತದನಂತರ ಸಮಯದೊಳ್ ಫಾಲ್ಗುನ ಬಹುಳೈಕಾದಶಿಯೊಳ್ ಉತ್ತರಾಷಾಢದೊಳ್,

ಅಳಿಱೆ ಕಿಡೆ ಘಾತಿಗಳ್ ದಾ
ನ ಲಾಭ ಭೋಗೋಪಭೋಗ ವೀರ್ಯಂಗಳೊಳ
ಗ್ಗಳಿಸಿದನಂತ ಚತುಷ್ಟಯ
ವಿಳಾಸಿ ಕೈವಲ್ಯ ಲಕ್ಷ್ಮಿಯಂ ಯತಿ ಪಡೆದಂ ೨೫೭

ಧ್ಯಾನ ಮರೀಚಿಯಿಂ ಬಿದಱಿ ಘಾತಿ ತಮಸ್ತಮುಮೆಯ್ದೆ ಭವ್ಯ ಸಂ
ತಾನ ಸರೋಜ ರಾಜಿಗಲರ್ವಾ ದರಮಾದಮುಱುಂಬಮಾಗೆ ವೈ
ಮಾನಿಕ ಚಕ್ರವಾಕದೊಲವುಣ್ಮಿರೆ ಚಲ್ವೆಸೆದತ್ತು ಕೇವಲ
ಜ್ಞಾನ ದಿನೇಶಬಿಂಬದ ಪೊದಱ್ದುದಯಂ ವೃಷಭೋದಯಾದ್ರಿಯೊಳ್ ೨೫೮

ಸುರ ಪುಷ್ಪಾಸಾರದಿಂದಂ ಸುರ ಗಣ ಪಟಹ ಪ್ರಸ್ಫುರದ್ಧ್ವಾನದಿಂದಂ
ಸುರ ಕಾಂತಾ ನೃತ್ಯದಿಂದಂ ಸುರ ವಿರಚಿತ ಮಂದಾನಿಳಾಂದೋಳದಿಂದಂ
ಸುರ ವಂದಿ ಸ್ತೋತ್ರದಿಂದಂ ದೆಸೆ ಗಗನತಳಂ ತೀವಿ ತಳ್ಳಂಕಗುಟ್ಟ
ತ್ತಿರೆಯುಂ ಕೈವಲ್ಯ ಬೋಧೋದಯ ಮಹಿಮೆ ಜಗಕ್ಕಾದುದಾಶ್ಚರ್ಯಭೂತಂ ೨೫೯

ಆಗಳ್ ಸೌಧರ್ಮೇಂದ್ರನಿಂದ್ರಾಣೀ ಸಮೇತಮನೇಕ ಕಲ್ಪಾಮರೇಂದ್ರ ಪರಿ
ವೃತನಾಗಿ ಬರೆ,

ಜಯ ಜಯ ನಂದ ನಂದ ಪರಮೇಶ್ವರ ಪಾಪ ವಿನಾಶ ಲೋಕ ವಿ
ಸ್ಮಯಕರ ಶಂಭು ಶಂಕರ ಮನೋಜ ಭಯಂಕರ ಭವ್ಯಬಂಧು ನಿ
ಮ್ಮಯ ದಯೆಯಿಂದಮೀ ಭವ ಸಮುದ್ರಮನೀಸುವೆವೆಂಬ ದೇವಕೋ
ಟಿಯ ನಿನದಂ ಪಳಂಚಲೆಯೆ ಘೂರ್ಣಿಸಿದತ್ತು ಸಮಸ್ತ ದಿಕ್ತಟಂ ೨೬೦

ಸೌಧರ್ಮೇಂದ್ರಂ ತನ್ನ ಬೆಸದೊಳ್ ಮುನ್ನಮೆ ಧನದಂ ಸಮೆದ ಸಮವ
ಸರಣಮಂ ಕ್ರಮಕ್ರಮದೊಳೆ ನೋಡುತ್ತುಂ ಬಂದು ಗಂಧಕುಟಿಯಂ ತ್ರಿಃಪ್ರದ
ಕ್ಷಿಣಂಗೆಯ್ದು ಸರ್ವಾಂಗಪ್ರಣತನಾಗಿ,

ಇನಿತೆಂದಿನ್ನ ವಿವೆಂದುಮೀ ವಿಧದವೆಂದಾರ್ ಬಣ್ಣಿಸಲ್ ಬಲ್ಲರೆಂ
ಬಿನೆಗಂ ನಿರ್ಭರ ಭಕ್ತಿ ತಮ್ಮ ಮನದೊಳ್ ಕೈಗಣ್ಮೆ ಕೈಮ್ಮೈಯೊಳಿಂ
ದ್ರನುಮಿಂದ್ರಾಣಿಯುಮಿಂದ್ರ ವೃಂದಸಹಿತಂ ದೇವೇಂದ್ರ ಲೋಕಂಗಳ
ರ್ಚನೆಯಿಂದರ್ಚಿಸಿದರ್ ಜಿನೇಂದ್ರ ಪದ ಪೀಠೋಪಾಂತ ಭೂಪ್ರಾಂತಮಂ ೨೬೧

ಅಂತರ್ಚಿಸಿ ಭಕ್ತಿಯಿಂ ಸ್ತುತಿಯಿಸಿ ನಿಜೋಚಿತ ಸ್ಥಾನದೊಳ್ ಕುಳ್ಳಿರ್ದಾದಿ
ತೀರ್ಥ ಕರರನೋಲಗಿಸುತ್ತಿರ್ಪನ್ನೆಗಂ ಪುರಿಮತಾಳ ಪುರಾಧೀಶ್ವರಂ ಭರತ

ಮಹೀಶನಿಂ ನೇರ್ಗಿಱಿಯಂ ವೃಷಭಸೇನ ಕುಮಾರಂ ನಾನಾ ವಿಧಾರ್ಚನಾ ಮಂಗಳ ದ್ರವ್ಯ ಹಸ್ತಂ ಸಮಸ್ತ ಪರಿಜನ ಪರಿವೃತಂ ಬಂದು ವೃಷಭೇಶ್ವರನ ಶ್ರೀ ಮುಖಮಂ ಕಾಣಲೊಡಂ ಆಸನ್ನ ಭವ್ಯತಾಪ್ರೇರಿತನಾಗಿ,

ಭಗವದರುಹನ ಸಮಕ್ಷದೊ
ಳಗಣ್ಯ ಪುಣ್ಯ ಪ್ರಭಾವದಿಂದಂ ಕೊಂಡಂ
ಭಗವದ್ರೂಪಮನಿಂದ್ರಾ
ದಿಗಳೆಲ್ಲಂ ಪೊಗೞೆ ಕಾಲ ಲಬ್ಧಿಯನಾಗಳ್ ೨೬೨

## ೧೩ ಭರತನ ಅರ್ಹತ್ಪದಾರ್ಚನಂ

ಅಂತು ದೀಕ್ಷಾ ಗ್ರಹಣಾನಂತರ ಸಮುತ್ಪನ್ನ ಸಪ್ತರ್ಧಿ ಜ್ಞಾನ ಚತುಷ್ಟಯಂ ಪ್ರಥಮ ಗಣಧರನಾದಂ. ಅನ್ನೆಗಮಿತ್ತ ಭರತ ರಾಜನಯೋಧ್ಯೆಯೊಳಾಸ್ಥಾನ ಮಂಟಪದೊಳಿರೆ ಪುರೋಹಿತಾಯುಧಾಧ್ಯಕ್ಷಾಂತಃಪುರ ವೃದ್ಧ ಕಂಚುಕಿಗಳ್ ಬಂದು ಪ್ರಣಾಮ ಪುರಸ್ಸರಂ ಶಿರೋವೇಷ್ಟನ ಪ್ರಲಂಬ ಚೇಳಾಂಚಳ ಪಿಹಿತ ವದನರಾಗಿ,

ಪುರು ದೇವಂಗಾದ ಕೈವಲ್ಯದ ಮಹಿಮೆಯನುಗ್ರಾಯುಧಾಗಾರದೊಳ್ ಭಾ
ಸ್ಕರ ಚಕ್ರೋದ್ಭಾಸಿ ಚಕ್ರೋದ್ಭವದ ಪಿಱಿದುಮಾಶ್ಚರ್ಯಮಂ ಶೋಭಿತಾಂತಃ
ಪುರದೊಳ್ ಮಾದೇವಿಗಾದಾತ್ಮಜನೊಸಗೆಯನಾ ಮೂವರುಂ ಬಿನ್ನಪಂಗೆ
ಯ್ದಿರೆ ಜಾತಾನಂದನೀ ಮೂಱೊಸಗೆಗಳೊಳಮಿನ್ನಾವುದಂ ಮುನ್ನ ಮಾೞ್ಪೆಂ
[೨೬೩

ಧರ್ಮಾರ್ಥ ಕಾಮಮೆಂಬಿವು
ಧರ್ಮಾರ್ಥಿ ಜನಕ್ಕೆ ನೆಱೆದ ನೆರ್ಮಂತವಱೊಳ್
ಧರ್ಮಂ ಪ್ರಧಾನಮರ್ಥಂ
ಧರ್ಮಾಂಘ್ರಿಪ ಫಳಮದರ್ಕೆ ರಸಮದು ಕಾಮಂ ೨೬೪

ಅದಱಿಂದಮಿವಱೊಳರ್ಹ
ತ್ಪದ ಪದ್ಮ ಪ್ರಣತಿ ಮುಖ್ಯಮೊಸಗೆಯುಮೆಮಗಿ
ನ್ನಿದಱಿಂದಮಿಲ್ಲಿ ಮೇಲಾ
ವುದೆಂದು ಬಗೆ ಬೆದಱಿ ಭಕ್ತಿನಿರತಂ ಭರತಂ ೨೬೫

ಪುರಜನ ಪರಿಜನ ಪರಿವೃತಂ ಬಂದು, ಅಭವನಾಸ್ಥಾನ ಮಂಟಪಮಂ ಗೆಂಟಱೊಳೆ ಕಂಡು ರಾಜ ಚಿಹ್ನಂಗಳನಿರಿಸಿ, ಶ್ರೀ ಮಂಟಪ ಶ್ರೀಯನತ್ಯಂತ ವಿಸ್ಮಯಸ್ಮೇರ ಮುಖನುಂ ರೋಮಾಂಚ ಕಂಚುಕಿತನುಮಾಗಿ ನೋಡುತ್ತುಂ ಅನೇಕಾರ್ಚನೆಗಳಿಂದರ್ಚಿಸುತ್ತುಂ ಮೂಱು ಸೂಱ್ ಬಲಗೊಂಡು ಜಗತ್ತ್ರಿತಯಾಧೀಶ್ವರ ಶ್ರೀ ಮುಖಾಭಿಮುಖನಾಗಿ,

"ತ್ರಿದಶೇಂದ್ರ ಮೌಳಿ ಮಣಿ ಶೋ
ಣ ದೀಪ್ತಿಗಳ್ ಪುದಿದು ಪೊಳೆವಲಕ್ತಕ ರಸದಿಂ
ಪುದಿದಂತೊಪ್ಪಿರ್ಪರ್ಹತ್
ಪದಂಗಳೆಮಗೀಗೆ ತಡೆಯದರ್ಹತ್ಪದಮಂ ೨೬೬

ಭುವನೇಶ್ವರ ನಿಜ ರೂಪ
ಸ್ತವ ವಸ್ತುಸ್ತವ ಗುಣಸ್ತವಂಗಳನವಱಿಂ
ತುವರಂ ಬಣ್ಣಿಸಲಮರೇಂ
ದ್ರ ವಾಸುಕಿ ಪ್ರಮುಖರಾರ್ತರಿಲ್ಲೆನ್ನಳವೇ ೨೬೭

ಅಳತೆಗೆ ತೂಕಕ್ಕೆಣಿಕೆಗ
ಮೊಳಗಾದುವು ಸಕಳ ವಸ್ತುಗಳ್ ಭುವನ ಜನ
ಕ್ಕಳೆಯಲ್ ತೂಗಲ್ಕೆಣಿಸ
ಲ್ಕಱುಂಬಮೆನಿಸಿದುವು ನಿನ್ನ ಗುಣ ಗಣಮರ್ಹಾ ೨೬೮

ತನ್ನಿರ್ದೆಡೆಯದೆ ಮೇರುವಿ
ನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ
ನಿನ್ನ ಗುಣೋನ್ನತಿ ಸಕಳಜ
ಗನ್ನುತ ಭುವನಾಂತರಾಳಮಂ ಪರ್ಬಿರ್ಕುಂ ೨೬೯

ಆಕುಳನೆನಾಗಿ ಸುಱಿದೆನ
ನಾಕುಳಮಪ್ಪೆಡೆಯನಱಿಸಿ ಕಾಣೆಂ ಮೂಱುಂ
ಲೋಕದೊಳಂ ನಿನ್ನಿರ್ಕೆಯೆ
ಲೋಕಾಗ್ರಮೆ ಸಂತಮದನೆ ಮಾಡೆನಗರ್ಹಾ ೨೭೦

ಭವ ನಿಗಳದ ತೊಡರಂ ಕಳೆ
ಭವ ಜಳಧಿಯ ತಡಿಗೆ ಸಾರ್ಚು ಭವ ಗಹನದುಪ
ದ್ರವಮಂ ಕಿಡಿಸು ಭವಾಂತಕ
ಭವನಕ್ಕುಯ್ ತಡೆಯದೆನ್ನ ನೀಂ ಭವಮಥನಾ ೨೭೧

ಮರಣದ ಜನ್ಮದ ನಿಗಳಂ
ನಿರಾಕುಳಂ ಪತ್ತುವಿಡುವಿನಂ ಜಿನ ನಿನ್ನಂ
ಸ್ಮರಿಯಿಪುದನಣೋರಣ್ವಂ
ತರವ್ಯತಿಕ್ರಮಣ ಮಾತ್ರಮಂ ಮಱಿದಪೆನೇ ೨೭೨

ತಿಳಕಂ ವಶ್ಯಮೆ ಜಡಜನ
ವೊಳಗಱಿಯದು ಸಕಳ ಭವ್ಯ ತಿಳಕಂಗೆ ಜಗ
ತ್ತ್ರಿಳಕ ಭವತ್ಪದ ಚಂದನ
ತಿಳಕಂ ತ್ರೈಲೋಕ್ಯ ವಶ್ಯಮಕ್ಕುಮವಶ್ಯಂ ೨೭೩

ಅಮರೇಂದ್ರೋನ್ನತಿ ಖೇಚರೇಂದ್ರ ವಿಭವಂ ಭೋಗೀಂದ್ರ ಭೋಗಂ ಮಹೇಂ
ದ್ರ ಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಱ್ಪಂತು ಬೆಳ್ಳಲ್ಲೆನು
ತ್ತಮ ದೀಕ್ಷಾ ವಿಧಿಯುಂ ಸಮಾಧಿ ಮರಣಂ ಕರ್ಮ ಕ್ಷಯಂ ಬೋಧಿ ಲಾ
ಭಮುಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀ ಮನೋವಲ್ಲಭಾ" ೨೭೪

ಎಂದನೇಕ ಸ್ತೋತ್ರ ಪವಿತ್ರೀಕೃತ ಮುಖಾರವಿಂದಂ ನಿಜೋಚಿತ ಸ್ಥಾನ ದೊಳ್ ಕುಳ್ಳಿರ್ದು,

ನೃ ಸುರಾಸುರ ಪರಿಷತ್ಸ
ಸ್ಯ ಸಂಕುಳಂ ಜಿನ ವಚೋಮೃತಾಸಾರಮನಂ
ದಸದಳಮೆ ಬಯಸೆ ಭರತಂ
ಬೆಸಗೊಂಡಂ ಜಿನನನಖಿಳ ವಸ್ತುಸ್ಥಿತಿಯಂ ೨೭೫

## ೧೪ ತತ್ತ್ವೋಪದೇಶಂ

ಅಂತು ಬೆಸಗೊಳೆ ದಿವ್ಯಧ್ವನಿಯೊಳಾ ಪರಮ ಯೋಗೀಂದ್ರನಿಂತೆಂದು ಬೆಸಸಿದಂ: "ನಿನ್ನ ಬೆಸಗೊಂಡ ತತ್ತ್ವಮುಂ ಹೇಯೋಪಾದೇಯ ರೂಪದಿಂ

ದ್ವಿವಿಧಮಕ್ಕುಂ. ಅಲ್ಲಿ ಸಂಸಾರ ಕಾರಣಂಗಳ್ ಹೇಯಂಗಳ್; ಮುಕ್ತಿ ಕಾರಣಂಗಳುಪಾದೇಯಂಗಳ್. ಮಿಥ್ಯಾದರ್ಶನಾದಿ ಕರ್ಮಂಗಳ್ ಸಂಸಾರ ಕಾರಣಂಗಳ್. ಅನಂತ ಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ. ಸಮ್ಯಗ್ದರ್ಶನ ಚಾರಿತ್ರಂಗಳ ವಿಕಲ್ಪಂಗಳ್ ಮೋಕ್ಷಕಾರಣಂಗಳ್. ಅಲ್ಲಿ ತತ್ತ್ವಾರ್ಥ ಶ್ರದ್ಧಾನಂ ಸಮ್ಯಗ್ದರ್ಶನಂ. ಆ ತತ್ತ್ವಮುಂ ಜೀವಾಜೀವಾಸ್ರವ ಬಂಧ ಸಂವರ ನಿರ್ಜರಾ ಮೋಕ್ಷ ಭೇದದಿಂ ಸಪ್ತವಿಧಂ. ಚೇತನಾಲಕ್ಷಣ ಮಪ್ಪುದು ಜೀವತತ್ತ್ವಂ. ಆ ಜೀವತತ್ತ್ವಮುಂ ಸಂಸಾರ ಮುಕ್ತಿ ಭೇದದಿಂ ದ್ವಿವಿಧಮಕ್ಕುಂ. ಮುಕ್ತ ಜೀವಮೇಕ ಪ್ರಕಾರಮೆ. ಸಂಸಾರಿ ಜೀವಂ ತ್ರಸ ಸ್ಥಾವರ ವಿಕಲ್ಪದಿಂದಿರ್ತೆಱನಕ್ಕುಂ. ಶಂಖಾದಿದ್ವೀಂದ್ರಿಯಂಗಳ್, ಪಿಪೀಲಿ ಕಾದಿ ತ್ರೀಂದ್ರಿಯಂಗಳ್, ಮಧುಕರಾದಿ ಚತುರಿಂದ್ರಿಯಂಗಳ್, ಮನುಷ್ಯಾದಿ ಪಂಚೇಂದ್ರಿಯಂಗಳೆಂದಿಂತು ತ್ರಸ ಜೀವಂಗಳ್ ಚತುರ್ವಿಧಮಕ್ಕುಂ. ಸ್ಪರ್ಶ ನೇಂದ್ರಿಯ ಮಾತ್ರಂಗಳ್ ಸ್ಥಾವರಂಗಳೆಂಬುವು. ಅವು ಪೃಥಿವ್ಯಪ್ತೇಜೋ ವಾಯು ವನಸ್ಪತಿ ಭೇಧದಿಂ ಪಂಚವಿಧಂ. ಚೇತನಾ ರಹಿತಮಜೀವತತ್ತ್ವಂ. ಅದು ಧರ್ಮಾಧರ್ಮಾಕಾಶ ಪುದ್ಗಲ ಕಾಲಭೇಧದಿಂ ಪಂಚವಿಧಂ. ಶುಭಾಶುಭ ರೂಪ ಮನೋವಾಕ್ಕಾಯ ಪರಿಸ್ಪಂದ ಹೇತುಕಮಾಗಿ ಬರ್ಪ ಕರ್ಮದ ಬರ ವಾಸ್ರವಮೆಂಬುದು. ಕರ್ಮದ ಜೀವನ ಕ್ಷೀರ ನೀರ ನ್ಯಾಯ ಸಂಬಂಧಂ ಬಂಧ ಮೆಂಬುದು. ಶುಭಾಶುಭ ಪರಿಣಾಮ ಪ್ರಣಾಳಿಕೆಯಿಂ ಬರ್ಪ ಕರ್ಮಮಂ ಬರಲೀಯದೆ ಗುಪ್ತ್ಯಾದಿಗಳಿಂ ತಗುಳ್ವುದು ಸಂವರೆಯೆಂಬುದು. ಯಥಾಕಾಲಾ ನುಭವನ ತಪೋನಿಮಿತ್ತಮಾಗಿ ಸವಿಪಾಕಾವಿಪಾಕರೂಪದಿಂ ಪೂರ್ವಾರ್ಜಿತ ಕರ್ಮ ನಿರ್ಜರಣಂ ನಿರ್ಜರೆಯೆಂಬುದು. ಕರ್ಮ ಪ್ರಕೃತಿಗಳ ನಿರ್ಮೂಳೋ ಚ್ಛಿತ್ತಿ ಮೋಕ್ಷಮೆಂಬುದು. ಜೀವಾದಿ ಪದಾರ್ಥ ಯಾಥಾತ್ಮ್ಯಾವಗಮಂ ಸಮ್ಯಗ್ ಜ್ಞಾನಂ. ಅದು ಮತಿ ಶ್ರುತಾವಧಿ ಮನಃಪರ್ಯಯ ಕೇವಲಜ್ಞಾನ ಭೇದದಿಂ ಪಂಚವಿಧಂ. ಸಂಸಾರ ಪರಿತ್ಯಾಗೋದ್ಯುಕ್ತ ಸಮ್ಯಗ್ ಜ್ಞಾನೋಪೇತ ಭವ್ಯ ಜೀವನ ಬಾಹ್ಯಾಭ್ಯಂತರ ಕ್ರಿಯಾ ನಿವೃತ್ತಿ ಸಮ್ಯಕ್ಚಾರಿತ್ರಮೆಂಬುದು" ಎಂದು ಹೇಯೋಪಾದೇಯ ತತ್ತ್ವಮನಱಿಪಿ, ಮತ್ತಮಿವರ್ಕಾಧಾರಭೂತ ಜಗತ್ರ ಯಾಂತಸ್ಥಿತ ನರಕ ಪ್ರಸ್ತಾರ ಭವನ ವ್ಯಂತರಾವಾಸಾಸಂಖ್ಯಾತ ದ್ವೀಪಾಬ್ಧಿ ತ್ರಿ ಷಷ್ಟಿ ಸ್ವರ್ಗ ಪಟಲಂಗಳುಮಂ ವಿಸ್ತರಿಸಿ, ತನ್ನಿವಾಸಿಗಳ ದೇಹಾಯುಃ ಪ್ರಮಾಣಂಗಳುಮಂ ಸುಖ ದುಃಖಾದಿಗಳುಮಂ ತಿರ್ಥಕರ ಚಕ್ರಧರ ಬಲದೇವ

ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಂಮಾಡಿದಾಗಳ್,

ಸುರ ದನುಜ ಮನುಜ ವರ ಕಿ
ನ್ನರ ತಿರ್ಯಗ್ಗಣಮನೆಯ್ದೆ ತಿಳಿಪಿದುದರ್ಹತ್
ಪರಮೇಶ್ವರ ಗದಿತ ಮನೋ
ಹರ ಧರ್ಮಾಮೃತಮದಿರ್ದೊಡಮೃತಂ ಸವಿಯೇ ೨೭೬

ಬ್ರತ ಸಮ್ಯಕ್ತ್ವ ವಿಶುದ್ಧಿಯೊ
ಳತರ್ಕ್ಯ ಗುಣನೆಯ್ದೆ ನೆಱೆದು ಭರತೇಶ್ವರನೂ
ರ್ಜಿತ ಪುಣ್ಯನೊಪ್ಪಿದಂ ಶರ
ದೃತು ವಿಕಸತ್ಕಮಳ ವನ ಸಲೀಲ ಶ್ರೀಯಿಂ ೨೭೭

ತದನಂತರಂ ಕುರುವಂಶ ಚೂಡಾಮಣಿಯೆನಿಸಿದ ಸೋಮಪ್ರಭನುಮಾತನನುಜನಾದಿ ದಾನತೀರ್ಥ ಪ್ರವರ್ತನಂ ಶ್ರೇಯಾಂಸನುಂ ಭರತೇಶ್ವರಾನುಜನನಂತವೀರ್ಯನುಂ ಭಟ್ಟಾರಕ ಪಾದಮೂಲದೊಳ್ ದೀಕ್ಷೆಯಂ ಕೈಕೊಂಡು ಗಣಧರರಾದರ್. ಬ್ರಹ್ಮಿಯುಂ ಸೌಂದರಿಯುಂ ನಿರ್ವೇಗೆಯರ್ ವಿವಾಹ ವಿಮುಖೆಯರಾಗಿ ಗುರು ಪ್ರಸಾದದಿಂ ದೀಕ್ಷೆಯಂ ಕೈಕೊಂಡು ಗಣಿನೀ ಗಣ ಪ್ರಧಾನೆಯರಾದರ್. ಗೃಹೀತೋಪವಾಸಕವ್ರತಂ ಶ್ರುತಕೀರ್ತಿಯೆಂಬಂ ಶ್ರಾವಕಾಗ್ರಣಿಯಾದಂ. ಪ್ರಿಯವ್ರತೆಯೆಂಬೊಳಣುವ್ರತ ಗ್ರಹಣದಿಂ ಶ್ರಾವಿಕಾ ಪುರಸ್ಸರೆಯಾದಳ್. ಭರತರಾಜ ಪುತ್ರಂ ಮರೀಚಿಯೊರ್ಬನುೞಿಯೆ ಮುನ್ನಂ ಭಗ್ನರಾದ ಕಚ್ಛ ಮಹಾ ಕಚ್ಛಾದಿಗಳರ್ಹದ್ರೂಪಮಂ ಕೈಕೊಂಡರ್. ಅನಂತ ವೀರ್ಯನೀ ಕ್ಷೇತ್ರದೊಳನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗಮಂ ಮುನ್ನಮೆ ಸಮಱುವೆ ನೆಂಬಂತೆ ಮೋಕ್ಷಲಕ್ಷ್ಮೀ ವಲ್ಲಭನಾದಂ. ಭರತೇಶ್ವರನುಂ ಬಾಹುಬಲಿ ಕುಮಾರನುಂ ಜಿನೇಶ್ವರ ಪಾದಪದ್ಮಂಗಳ್ಗೆಱಗಿ ನಿಜ ರಾಜಧಾನಿಗಳ್ಗೆ ಪೋದರ್.

## ೧೫ ಧರ್ಮಚಕ್ರಪ್ರವರ್ತನಂ

ಇತ್ತ ಸೌಧರ್ಮೇಂದ್ರನುಂ ಧರ್ಮ ಚಕ್ರವರ್ತಿತ್ವಕ್ಕೆ ದಿಗ್ವಿಜಯಮೆನಿಸಿದ ಭಗವದ್ವಿಹಾರಮನವಧಿಯಿಂದಮಱಿದು ಅದನೆ ಪುನರುಕ್ತಂಮಾಳ್ಪಂತೆ,

"ದೇವ ವಿ[ನೇ]ಯೋತ್ಕರ ಸ
ಸ್ಯಾವಳಿ ಸುಗಿದುಗಿದು ಕೂಡೆ ಬಾಡಿರ್ದುದು ಪಾ
ಪಾವಗ್ರಹದಿಂದದನಖಿ
ಳಾವನಿ ತಳಕಂತು ತಳಿಯ ಧರ್ಮಾಮೃತಮಂ ೨೭೮

ಮಿಳಿರೆ ದಯಾ ಧ್ವಜಮುನ್ನತಿ
ಗೊಳಗಾಗಿರೆ ಧರ್ಮ ಚಕ್ರಮಾಯತಿಯಂ ಕೈ
ಕೊಳೆ ಭವ್ಯ ವರೂಥಿನಿ ನಿ
ರ್ಮಳ ನಿನ್ನ ವಿಹಾರಮಾರನೇನೆಱಗಿಸದೋ" ೨೭೯

ಎಂದಾದಿ ಜಿನೇಂದ್ರಂಗೆ ಬಿನ್ನಪಂಗೆಯ್ಯಲೊಡಮನೇಕ ಭವ್ಯ ಕೋಟಿಯ ಪುಣ್ಯ ಪ್ರೇರಣೆಯಿಂದಂ ಸಮವಸರಣ ಮಂಡಳಂ ಗಗನ ಮಂಡಳದೊಳ್ ನಡೆಯೆ, ಜನಿತ ಜಗಜ್ಜನಾನಂದನುಂ ಸಮಸ್ತ ಜನ ಮೈತ್ರೀ ಸಮೇತನುಂ ಸಹಸ್ರ ದಿನಕರ ಕರ ಸ್ಪರ್ಧಿ ಸಹಸ್ರಾರ ಧರ್ಮಚಕ್ರ ಪುರಸ್ಸರನುಮಾಗಿ ಧರ್ಮ ಕ್ಷೇತ್ರಂಗಳಂ ವಿಹಾರಿಸಿ ಬಂದು,

ಪರಮಾನಂತ ಚತುಷ್ಟಯೈಕ ನಿಳಯಂ ಶ್ರೀಮತ್ಸಭಾ ಮಂಡಳಾಂ
ತರ ಸಿಂಹಾಸನ ಸುಸ್ಥಿತಂ ಗಣವೃತಂ ಚಂಚಚ್ಚತುಷ್ಷಷ್ಟಿ ಚಾ
ಮರ ವಿಭ್ರಾಜಿತನಾನತ ತ್ರಿಭುವನಂ ಕುಂದೇಂದು ದುಗ್ಧಾಬ್ಧಿ ಪಾಂ
ಡುರ ಕೈಲಾಸ ನಗೇಂದ್ರದೊಳ್ ನೆಲಸಿದಂ ಸಂಸಾರ ಸಾರೋದಯಂ ೨೮೦

# ಮೂರನೆಯ ಭಾಗ

## ಭರತ ಚಕ್ರವರ್ತಿ ಚರಿತ್ರಂ

---

### ೧ ಚಕ್ರಪೂಜೆ; ವಿಜಯ ಪ್ರಸ್ಥಾನಂ

ಶ್ರೀ ಪರಿಪೂರ್ಣಂ ಭರತಮ
ಹೀಪಾಳಂ ಚಕ್ರ ಪೂಜೆಗೆಯ್ದಂ ಸಕಳ
ಕ್ಷ್ಮಾಪ ಶಿರೋರತ್ನಾಂಶು
ವ್ಯಾಪಿತ ಚರಣಂ ಸರಸ್ವತೀಮಣಿಹಾರಂ ೨೮೧

ಪೂಜಿಸಿ ಪೊಱಮಟ್ಟಗ್ರತ
ನೂಜೋತ್ಪತ್ತ್ಯುತ್ಸವಕ್ಕೊಡರ್ಚುವ ಪದದೊಳ್
ರಾಜಾಧಿರಾಜನಮರಮ
ಹೀಜದ ಲೀಲೆಯನೆ ಲೀಲೆಯಿಂ ಕೈಕೊಂಡಂ ೨೮೨

ಅನ್ನೆಗಂ,

ಪೊಸ ಜಾದಿಯ ಬೆಳೆದೊಱಗಿದ
ಪೊಸಗಱಮೆಯ ಪೊಸತರಲ್ದ ತಾವರೆಗಳ ಕಂ
ಪಸದಳಮೆಸೆದಿರೆ ದೆಸೆದೆಸೆ
ಗೊಸಗೆಯೆ ಬರ್ಪಂತೆ ಕಣ್ಗೆವಂದುದು ಶರದಂ ೨೮೩

ಅಂತು ದಿಗ್ವಿಜಯೋದ್ಯೋಗಕ್ಕುಪಯೋಗಿಯಾಗಿ ಬಂದ ಶಾರದಶ್ರೀಯ ನಿದಿರ್ಗೊಂಡು ಶುಭಮುಹೂರ್ತದೊಳ್ ದಿಗ್ವಿಜಯ ಪ್ರಯಾಣ ಭೇರಿಯಂ ಪೊಯ್ಸಿದಾಗಳ್,

ಒದವಿದ ಚಕ್ರರತ್ನದೊಳಿದೊಂದೆಣೆಯಾಯ್ತೆನಿಸಿರ್ದ ಚಕ್ರಯು
ಗ್ಮದಿನಮರ್ದಚ್ಚು ವಜ್ರಮಯಮಾಗೆ ಕನನ್ಮಣಿಮೌಕ್ತಿಕಪ್ರಭಾ
ಸ್ಪದಮಮರೇಂದ್ರರುಂದ್ರ ಗಿರಿಕುಂಜವಿಚಂಚಳಕೇತನಾಳಿ ಕ
ಟ್ಟಿದಿರೊಳೆ ಬಂದು ನಿಂದುದಜಿತಂಜಯಮಾತ್ತಮನೋರಥಂ ರಥಂ ೨೮೪

ಆಗಳ್ ಮೌಹೂರ್ತಿಕರ್ ಬಂದು, "ದೇವಾ ವಿಜಯ ಪ್ರಸ್ಥಾನಲಗ್ನಂ ಸಾರೆ ವಂದುದೆ"ಂದು ಬಿನ್ನಪಂಗೆಯ್ದಾಗಳ್,

ರೋದೋಂತರ್ಭಾಗದೊಳ್ ದುಂದುಭಿಗಳೆಸೆಯೆ ಮಾಂಗಲ್ಯಗೀತ ಪ್ರಣಾದಂ
ವಾದಿತ್ರಧ್ವಾನದೊಳ್ ಸಂದಣಿಸೆ ಗುರುಜನೋದ್ಗೀತ ನಾನಾ ವಿಧಾಶೀ
ರ್ವಾದಂ ಶೇಷಾಕ್ಷತಂಗಳ್ವೆರಸೆಸೆಯೆ ಮಹಾ ವಂದಿವೃಂದಾಂತಮಾಲಾ
ನಾದಂ ಗಂಭೀರ ನಾದಂ ನೆಗೞ್ದಿರೆ ತಳರ್ದಂ ರಾಗದಿಂ ಸಾರ್ವಭೌಮಂ ೨೮೫

ಅಂತು ತಳರ್ದು ಚಿತ್ತದೊಳ್ ವೀರರಸಂ ಪೊಣ್ಮುತ್ತಿರೆ ನಿಜಬಲಮಂ ನೋಡಿ ಎರಡುಂ ಕೆಲದೊಳಂ ಬಂದೆಱಗಿದ ರಾಜಚಕ್ರಮನೀಕ್ಷಣ ದರಹಸಿತ ವಿಸ್ರಂಭಾಳಾಪಂಗಳಿಂ ಸಂತಸಂಬಡಿಸುತ್ತುಂ ಬಂದು ಅಂದಿನ ದಿನಮಯೋಧ್ಯಾ ಪುರಾಸನ್ನದೊಳ್ ನಿಜ ಸ್ಥಪತಿರತ್ನ ವಿರಚಿತಮಾಗಿ,

ವಿಜಯಶ್ರೀ ಗೃಹಮೆನಿಸುವ
ವಿಜಯ ಪ್ರಸ್ಥಾನ ಶಿಬಿರ ನೃಪಮಂದಿರಮಂ
ವಿಜಿಗೀಷು ಬಂದು ಪೊಕ್ಕಂ
ವಿಜಯಾಳಂಕಾರ ಬಾಹು ಭರತಮಹೀಶಂ ೨೮೬

ಮಱುದಿವಸಂ ಆನಂದಿಗಳೆಂಬ ಪನ್ನೆರಡು ಭೇರಿಗಳುಂ ವಿಜಯ ಘೋಷಂಗಳೆಂಬ ಪನ್ನೆರಡು ಪಟಹಂಗಳುಂ ಗಂಭೀರಾವರ್ತಂಗಳೆಂಬಿರ್ಪತ್ತುನಾಲ್ಕು ಶಂಖಂಗಳುಂ ನಾಲ್ವತ್ತೆಂಟು ಕೋಟಿ ಪತಾಕೆಗಳುಮೆಸೆಯೆ ಪೂರ್ವಾಭಿಮುಖನಾಗಿ ಚಕ್ರರತ್ನಪುರಸ್ಸರಂ ಬಿಜಯಂಗೆಯ್ದಾಗಳ್,

ಘನ ಘಟೆ ನಭದಿಂದಂ ಧಾತ್ರಿಗೆತ್ತೆತ್ತ ಬಂದ
ತ್ತೆನಿಸಿ ಕಳೆದುದೆತ್ತಂ ಚೂತ ಸಪ್ತಚ್ಛದೈಲಾ
ವನ ಸುರಭಿ ಮದಾಸಾರಾಸವಾಸಕ್ತ ಭೃಂಗೀ
ನಿನದ ಮುಖರಿತಾಶಾ ಚಕ್ರ ಗಂಧೇಭ ಚಕ್ರಂ ೨೮೭

ವನಧಿಯ ನೀಳ್ದ ಪೆರ್ದೆರೆಗಳೀ ನೆಲನಂ ಕವಿದಪ್ಪುವೀಗಳೆಂ
ಬಿನಮತಿ ವೇಗದಿಂ ಪರಿವ ಪಾಱುವ ಲಕ್ಕೆಯನೊಡ್ಡುವೊಳ್ಪು ತ
ನ್ನನೆ ನಡೆ ನೋಡಿಸುತ್ತುಮಿರೆ ಜಾಯಿಲವೊಂದೆರಡೆಂದು ತೋಱಿ ನೆ
ಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ ೨೮೮

ವಿವಿಧಾಯುಧ ಪೂರ್ಣಂಗಳ್
ಪ್ರವೀರ ಪುರುಷ ಪ್ರತಿಷ್ಠಿತಂಗಳ್ ಚೇತೋ
ಜವ ಹರಿ ಯೋಗ್ಯಂಗಳ್ ತಳ
ರ್ದುವಾಗಳೆಂಬತ್ತುನಾಲ್ಕು ಲಕ್ಕೆ ರಥಂಗಳ್ ೨೮೯

ಪಾದಾಭಿಘಾತ ವಿಚಳ
ನ್ಮೇದಿನ್ಯುತ್ಥಿತ ವಿಶಾಲ ಧೂಳೀ ಪಟಲಾ
ಚ್ಛಾದಿತ ಗಗನಂ ನಡೆದುದು
ಪಾದಾತಂ ಚತುರಶೀತಿ ಕೋಟಿ ಪ್ರಮಿತಂ ೨೯೦

ಎಡೆ ನೆಱೆಯದು ಭುವನತಳಂ
ನಡೆವ ಚತುರ್ಬಲಕೆ ದಿವಿಜ ಖೇಚರ ಸೈನ್ಯ
ಕ್ಕೆಡೆ ನೆಱೆಯದು ಗಗನಮುಮೆನೆ
ಷಡಂಗ ಬಲಮಿಂತು ತಳರೆ ತಳರ್ದಂ ಭರತಂ ೨೯೧

ಲಯದಿಂ ಮೆಲ್ಪಿಂ ಬೆಡಂಗಂ ಪಡೆವ ತುರಗದಿಂ ಚಿತ್ರಿತ ಚ್ಛತ್ರಿಕಾ ಲೀ
ಲೆಯಿನುದ್ದಂ ಬರ್ಪ ಚೇಟೀ ನಿವಹದ ಬರವಿಂ ಭೂಷಣಾಡಂಬರೋದ್ಘೋ
ತಿಯಿನೊಪ್ಪಿರ್ದುದ್ವಿಳಾಸಂ ವಿಳಸಿತ ಕಮಳಾ ವಾಸಮಿಾ ಬರ್ಪುದುಂ ರಾ
ಣಿಯ ವಾಸಂ ನೋಡಿಮೆಂಬಂತೆಸೆದುದು ಪಲವುಂ ತಂಡದಿಂ ಪೆಂಡವಾಸಂ
೨೯೨

ತುರಗಮುಮೊಂದು ಸತ್ತಿಗೆಯುಮೊಂದಿರೆ ಕಾಪಿನ ಬಂಟು ಸುತ್ತಲುಂ
ಬರೆ ಮುಸುಕಿಟ್ಟ ಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣ ಬೆಳ್ಪುಮೋ
ಹರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ ನಾಟ್ಯವಿಳಾಸದೊಳ್
ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡಮೋಳಿಯೊಳ್ ೨೯೩

ಪಡೆಗಡ್ಡಮಿರ್ದ ಬೆಟ್ಟ
ಟ್ಟೆಡೆ ಘಟ್ಟಮಿಱುಂಬಮೆಂಬಿವಂ ಸಣ್ಣಿಸಿ ಸಾ
ರ್ವೆಡೆ ನಡೆವ ದಂಡರತ್ನಂ
ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ ೨೯೪

ತಡೆವಂ ಗಂಗಾದ್ವಾರದಿ
ನೆಡೆಯೊಳ್ ಬೀಡಿಲ್ಲ ಭರತ ರಾಜಂಗೆಂದೇಂ
ನಡೆದುದೊ ಪೆರ್ಬಡೆ ಗಂಗೆಯ
ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ ೨೯೫

## ೨ ಪೂರ್ವ ದಿಗ್ವಿಜಯಂ; ಮಾಗಧ ದರ್ಪ ದಳನಂ

ಚತುರಂಗಬಲ ಸಮನ್ವಿತ
ರತರ್ಕ್ಯ ವಿಕ್ರಮರನೇಕ ಕರಿ ತುರಗ ಮಣಿ
ಪ್ರತತಿಗಳಂ ಮುಂದಿಟ್ಟವ
ನತರಾದರ್ ಚಕ್ರಿಗಳ್ಕಿ ದಂಡೋಪನತರ್ ೨೯೬

ಅತಿ ಭಯಮಂ ತಮಗೆ ಚಮೂ
ಪತಿ ಮಾಡಿದೊಡಳ್ಕಿ ಕುಪ್ಯ ಸಾರಾದಿ ಧನ
ಪ್ರತತಿಯನಿತ್ತೆತ್ತಂ ಪ್ರತಿ
ಹತ ಭುಜ ವಿಕ್ರಾಂತರಂತಪಾಳರ್ ಕಂಡರ್ ೨೯೭

ಕಸ್ತೂರಿಕಾಂಡಕಂ ವನ
ಹಸ್ತಿ ರದಂ ಹಸ್ತಿ ಮಸ್ತಕೋದ್ಭವ ಮುಕ್ತಾ
ವಿಸ್ತಾರವೆಂದು ತಂದು ಸ
ಮಸ್ತ ವನಾಧೀಶರವನಿಪತಿಯಂ ಕಂಡರ್ ೨೯೮

ಮತ್ತಂ ಪ್ರಾಚ್ಯರ್ಣವ ತಟ ನಿಕಟ ವರ್ತಿಗಳಪ್ಪತಿ ಪ್ರಚಂಡ ಮಂಡಳಿಕರ್ ಭರತೇಶ್ವರ ಚಕ್ರವರ್ತಿಯ ಬರವಂ ಕೇಳ್ದು,

ಕರಿ ಸಂಘಾತಮುಮಂ ಹಯ ವ್ರಜಮುಮಂ ಪಿಂತಿಕ್ಕಿ ತೂರ್ಯ ಸ್ವನೋ
ತ್ಕರಮಂ ಮಾಣಿಸಿ ಹೇತಿ ಮುಕ್ತ ಭಟ ದೋರ್ದಂಡಾಗ್ರ ಶುಂಭದ್ಧ್ವಜೋ
ತ್ಕರ ಸಂದೋಹಮುಮಂ ಬಿಸುಟ್ಟುಡುಗಿ ಪಿಂಛ ಚ್ಛತ್ರಮಂ ಪ್ರಶ್ರಯಾ
ಕರ ವೇಷೋಚಿತರರ್ಘ್ಯ ಹಸ್ತರಿದಿರಂ ಬಂದರ್ ಭಯಭ್ರಾಂತಿಯಿಂ ೨೯೯

ಅಂತು ತನ್ನ ಬಲಂಬೆರಸೆಲ್ಲಿಯುಂ ನಿಲ್ಲದೆ ಬಂದು ಲವಣ ಸಮುದ್ರದೊಳಗನೆ ಪೊಲ್ತಿರ್ದುಪ ಸಮುದ್ರದ ತಡಿವಿಡಿದು ಅದಂ ನೋಡುತ್ತಂತೆ ಬಂದು ಗಂಗಾ ದ್ವಾರದ ವಜ್ರ ವೇದಿಕೋತ್ತುಂಗ ತೋರಣ ದ್ವಾರದಂತರ್ವಣ ತುಂಗ ಕುಜಂಗಳ ನೆಟಲ್ಗಳೊಳ್ ನಾಲ್ವತ್ತೆಣ್ಗಾವುದದ ನೀಳದ ಮೂವತ್ತಾಱು ಗಾವುದದಗಲದ ಬೀಡಂ ಬಿಡಿಸಿದಾಗಳ್,

ಭುವನಸ್ತುತ್ಯಾದಿ ಚಕ್ರೇಶ್ವರಬಲರಜದಿಂ ಪೂತವಾಗಿರ್ದೆನೆಂಬು
ತ್ಸವದೊಳ್ ವೇಳಾ ತರಂಗೋತ್ಕರ ಕರ ಚಯದಿಂದಾಡುವಂತಿರ್ದ ಪೂರ್ವಾ
ರ್ಣವಮಂ ಬಾಹಾ ಬಳೋಪಾರ್ಜಿತ ವಿಜಯ ಯಶೋ ದುಂದುಭಿ ಧ್ವಾನ ಧೀರಾ
ರವಮಂ ಕೈಕೊಂಡುದಂ ಕ್ಷತ್ರಿಯ ಕುಲ ತಿಲಕಂ ನೋಡಿದಂ ಚಕ್ರ ನಾಥಂ
೩೦೦

ಅಂತು ಲವಣಾಂಬುರಾಶಿಯಂ ನೋಡಿ,

"ಎನಗೆ ಪೊಸಂತಿಲೀ ನೆಗಳ್ದ ವಜ್ರದ ವೇದಿಕೆ ಗೋಷ್ಪದಂ ದಲೀ
ವನನಿಧಿ ಪಾಯ್ದು ಮಾಗಧನನೀಗಳೆ ಕಟ್ಟುವೆನಿಲ್ಲಿ ಪೂಣ್ದು ನಿ
ಲ್ವನಿತುವರಂ ಸುರಂ ಗಹನಮೇ ಪುದಿದವ್ವಳಿಪೆನ್ನ ಕಾಯ್ಪು ಪೋ
ಪಿನಮಿರದೀಗಳೀಂಟುವೆನೊ ದಾಂಟುವೆನೋ ಲವಣಾಂಬು ರಾಶಿಯಂ ೩೦೧

ಚಕ್ರದೊಳೇಂ? ಎನ್ನ ಬಾಹು ದಂಡಮೆ ಸಾಲ್ಗುಂ" ಎಂದು ಭುಜಬಳಾವಲೇಪಮನೆ ಮುಂದಿಟ್ಟು ನುಡಿದ ಚಕ್ರವರ್ತಿಯಂ ಪುರೋಹಿತ ಪ್ರಮುಖ ಕುಲ ವೃದ್ಧರ್,

"ದೇವರ ಭುಜ ಗರ್ವಕ್ಕೇ
ನಾವುದುಮರಿದುಂಟೆ ಸಂದ ಚಕ್ರಿಗಳೆಸಕಂ
ದೇವ ನಿನಗೆಸಕಮದಱಿಂ ಳೆ
ದೇವರ್ ನೆಗಟಿಲ್ಕೆವೇಟ್ಕುಮೆ"ಂಬುದುಮಾಗಳ್ ೩೦೨

ಮಾಗಧ ದರ್ಪ ದಳನಂ

ದರ್ಭ ಶಯನ ತಳ ಗತನಾಗಿ ನಾನಾ ವಿಧ ಮಂತ್ರಾನುಷ್ಠಾನನುಪವಾಸದಿಂ ತ್ರಿರಾತ್ರಮನಿರ್ದು ಪಂಚ ಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕ ಪೌಷ್ಟಿಕ ಕ್ರಿಯೆಯಂ ನಿರ್ವರ್ತಿಸಿ, ಮಱುದಿವಸಂ ನೇಸಱ್ ಮೂಡೆ

ಪಡೆವಳ್ಳನಂ ಪಡೆಗೆ ಕಾಪುವೇೞ್ದು ದಿವ್ಯಾಸ್ತ್ರಂಗಳಿಂ ತೀವಿ ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯವೆಂಬ ರಥಮನೇಱಿ ಸಾರಥಿಯಂ ಚೋದಿಸಲ್ವೇೞ್ದು ಗಂಗಾದ್ವಾರದೊಳಗನೆ ಲವಣ ಜಳಧಿಯಂ ಪೊಕ್ಕಾಗಳ್,

ನೆಗೞ್ದಿನ್ನ ಗುಣಮುಲಂಘ್ಯಂ
ಜಗದೊಳದಂ ಕಿಡಿಸಿದಪ್ಪನೀ ನೃಪನೆಂದ
ಜ್ಜಿಗದೊಳೆ ಪುಯ್ಯಲಿಪಂತೆವೊ
ಲೊಗೆದುದು ಚಳದಸಿಲ ಹತ ಪಯೋನಿಧಿ ನಾದಂ ೨೦೩

ರಥದಿಂದಂ ಮುಂಚೆ ಮನೋ
ರಥಂ ಮನೋರಥದಿನತ್ತಲದು ಮುಂಚೆ ಬೃಹದ್
ರಥಮಿಂತು ಭರತ ರಾಜನ
ರಥದ ಮನೋರಥದ ಬೇಗವೊದವಿದುದಾಗಳ್ ೨೦೪

ಕುದುರೆಯ ಖುರಂಗಳಿನಿಸಾ
ಱದೆಯುಂ ಚಕ್ರಂಗಳೞ್ದು ಬಾರದೆಯುಂ ಚ
ಕ್ರದ ಚೀತ್ಕಾರ ರವಂ ಕುಂ
ದದೆಯುಂ ರಥಮಿಂತು ಪರಿದುದಂಭೋನಿಧಿಯೊಳ್ ೨೦೫

ಅಂತು ರಥಂ ಪನ್ನೆರಡು ಯೋಜನಂಬರಂ ಪೋದಾಗಳ್,

ಮಿಡುಕಲ್ ಸಲ್ಲಿಲ್ಲಿಂದೊಂ
ದಡಿಯಂ ನಿನಗೆಂದು ಲವಣ ವಾರಾಶಿಯೆ ಬ
ಲ್ಪಿಡಿವಿಡಿದಂತೆ ವರೂಥಂ
ಮಿಡುಕದೆ ನಿಂದತ್ತು ಚೋದ್ಯಮಪ್ಪಿನಮಾಗಳ್ ೨೦೬

ಅಂತು ಬೀೞ್ಗುಂಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ರಥಮಂ ಕಂಡು ಮುಳಿದು ವಜ್ರಕಾಂಡವೆಂಬ ವಿಜಯ ಕಾರ್ಮುಕಕ್ಕೆ ನಿಜ ಭುಜಾ ದಂಡಮಂ ನೀಡಿ ನೀಡಿಲ್ಲದೇಱಿಸಿ ನೀವಿ ಜೇವೊಡೆದಮೋಘ ಬಾಣಂ ಬಾಣ ಮನುರ್ಚಿಕೊಂಡು,

" ಪುರು ಪರಮೇಶ್ವರ ಪುತ್ರಂ
ಭರತೇಶ್ವರ ಚಕ್ರವರ್ತಿ ಬಂದಿರ್ದಂ ತ
ದ್ಧರಣಿ ನಿವಾಸಿಗಳುಂ ವ್ಯಂ
ತರಾಮರರ್ ಬಂದು ಕಾಣ್ಬುದವನತ ಮಕುಟರ್" ೨೦೭

ಎಂಬಕ್ಕರದಿಂದೆಸೆದುದ
ನಂಬರ ತಳವೊಡನೆ ಬೆಳಗೆ ಬೆಳಪುದನಾ ಶೌ
ರ್ಯಾಂಬುಧಿ ತೊಟ್ಟಿಸಲೊಡವಿುರ
ದಂಬರದಿಂದುಳ್ಕುವುಳ್ಕಮುಂ ಪೋಲ್ತು ಶರಂ ೨೦೮

ಕಾಳಾಂತ ಪವನ ಹತಿ ಕ
ಲ್ಲೋಳಾವಿಳ ಜಳಧಿ ನಿನದವೋ ನಿರ್ಘಾತಾ
ಭೀಳತರ ರಭಸವೋ ಲಯ
ಕಾಳಾಂಬುದ ಘೋಷವೋ ನೆಲಂ ಮೊಱಗಿದುದೋ ೨೦೯

ಎನೆ ಪುರಜನಮುಂತಃಪುರ
ಜನಮುಂ ಪರಿಜನಮುಮಳ್ಕಿ ತದ್ರಾಜನಿಕೇ
ತನದಲ್ಲಿ ಬಿಱ್ದು ಪಡೆದುದು
ಮನಕ್ಕೆ ಕಡುಮುಳಿಸಿನೆಸಕಮಂ ಮಾಗಧನಾ ೨೧೦

" ಪರಿಭವದ ಪೊಱೆಯೆನಾಂತಿ
ರ್ದರಾತಿಗಳ್ಗಳ್ಕಿ ತನ್ನ ಕುಲಮುಂ ಚಲಮುಂ
ದೊರೆಯುಂ ಕಿಡೆ ಬಾೞ್ವಂ ಗಂ
ಡ ರೂಪಿನೊಳ್ ಗಂಡನಲ್ತು ಪೆಂಡತಿಯೆವಲಂ ೨೧೧

ಬಗೆಗೊಂಡ ಕುಲಧನಂ ಸಮ
ದ ಗಜಂ ಜಾತ್ಯಶ್ವಮೆಂಬಿವಂ ಮತ್ತೊರ್ಬಂ
ಪಗೆವಂಗೆ ಕೊಟ್ಟು ಚಿಃ ಕೆ
ಮ್ಮಗೆ ಬೆಸೆವವನರಸದೆಂತೊ ಪಗರಣದರಸಂ ೨೧೨

ಶರ ಚಾಪ ಚಕ್ರಭೀಕರ
ಕರವಾಳಾಯುಧ ವಿರಾಜಿ ಮತ್ಕರ ಯುಗಮಿನ್
ದೊರೆಗಿಡೆ ಪೆಱಂಗೆ ಮುಗಿವುದೆ
ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ ೩೧೩

ಕುಲದ ಚಲದಾಯದಱಿವಿನ
ಕಲಿತನದುನ್ನತಿಯನಲಸದೀ ಸುರ ಸಭೆಯೊಳ್
ಪಲವಾಡುವೆನ್ನ ನಾಲಗೆ
ಬಲಸ್ಥನೊರ್ವಂಗೆ ಜೀಯ ದೇವೆಂದಪುದೇ ೩೧೪

ಶರಮನಿದಂ ಕಡಿಕಡಿದುಡಿ
ದೆರಡೆರಡಪ್ಪಂತು ತಱಿದು ರಿಪುಬಲ ಗಹನಾಂ
ತರಮಂ ಸುಡಲೊಗೆವುದು ದು
ರ್ಧರ ಕೋಪಾಗ್ನಿಯನೆ ಮುನ್ನಮಾನ್ ಪೊತ್ತಿಸೆನೇ" ೩೧೫

ಎಂದು ನುಡಿವನಿತುಮಂ ನುಡಿದು ಮಾಣ್ದ ಮಾಗಧಾಮರನಂ ಕುಲವೃದ್ಧರೆಯ್ದೆ ವಂದು, "ಬಲಸ್ಥನೊಳ್ ಬಲಮನೆ ಪೂಣ್ಬುದುಂ ಪರಿಭವಕ್ಕೆ ಮೊದಲ್.

ಕಡುಗಲಿತನಮುಂ ಚಾಗದ
ಪಡೆಮಾತುಂ ವಿದ್ಯೆಯುರ್ಕುಮೊರ್ವನೊಳೆಂತುಂ
ನಡೆಯವು ಭುವನಾಂತರದೊಳ್
ನಿಡಿಯರ್ಗಂ ನಿಡಿಯರೊಳರಿದೇಂ ವಿಸ್ಮಯಮೋ ೩೧೬

ಸಾಮಾನ್ಯಮಲ್ತು ಶರಮಿದು
ಸಾಮಾನ್ಯ ಮನುಷ್ಯನಲ್ಲನಿದನೆಚ್ಚಾತಂ
ನಾಮಾಕ್ಷರ ಮಾಳಿಕೆಗಳ್
ತಾಮಱಪವೆ ಚಕ್ರವರ್ತಿಯೆಂಬುದನಾತಂ ೩೧೭

ಪುರು ಪರಮೇಶ್ವರ ಪುತ್ರಂ
ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಿಲ್
ದೊರೆ ಪೆಱರಾರ್ ಭರತನೊಳೆ"ನೆ
ಕರಗಿದುದಾ ಗರ್ವ ಪರ್ವತಂ ಮಾಗಧನಾ ೩೧೮

ಅಂತು ನಿಜ ಶೌರ್ಯ ಮದ ಜ್ವರಂ ಮಂತ್ರಿವರ್ಗ ವೈದ್ಯ ವಚನೌಷಧಿಗಳಿಂ ಪತ್ತುವಿಡೆ,

ಮುನ್ನಂ ಪೂಜಿಸಿ ಶರಮಂ
ರನ್ನದ ಪಡಲಿಗೆಯೊಳಿಟ್ಟು ನಿಜ ಪರಿವಾರಂ
ತನ್ನುಳ್ಳನಿತುಂ ಬೆರಸು ಭ
ಯಂ ನಡುಕಮನೀಯೆ ಬಂದು ಕಂಡಂ ದಿವಿಜಂ ೩೧೯

ಪೊಂಗುಱಿದು ಭರತ ನೃಪ ಚರ
ಣಂಗಳ್ಗಾ ಮಾಗಧಾಮರಂ ವಿನಮಿತ ಸ
ರ್ವಾಂಗಭರಂ ಚಜ್ಜಾರು ಭು
ಜಂಗನ ಕೊರಲಂತೆ ಬಾಗಿದಂ ಮೂಱಿಡೆಯೊಳ್ ೩೨೦

"ಚಕ್ರಂ ಪುಟ್ಟಲೊಡಂ ಪರ
ಚಕ್ರ ಭಯಂಕರ ಬರಲ್ಕೆವೇೞ್ಪುದನಱಿದೆಂ
ವಿಕ್ರಮಮನುೞಿದೆನೆನತೊಂ
ದಕ್ರಮಮಂ ಸೈರಿಸೊಂದು ಸೂೞ್ ಚಕ್ರಧರಾ" ೩೨೧

ಎಂದು ಮಾಗಧಾಮರಂ ತನ್ನ ಸದ್ಭಾವ ಸರ್ವಸ್ವದೊಡನೆ ಸರ್ವಸ್ವಮೆಲ್ಲಮುಮಂ ಮುಂದಿಟ್ಟಾಗಳ್,

ಕುಳಶೈಲೋನ್ನತನುಗ್ರ ಶಾತ್ರವ ಶಿರೋ ಮಾಣಿಕ್ಯಮಾಳಾಂಶುಮಾಂ
ಸಳಿತ ಶ್ರೀ ಪದ ಪೀಠ ರತ್ನ ಕಿರಣಂ ಚಕ್ರೇಶ್ವರಂ ವಾರ್ಧಿ ಭೂ
ತಳ ನಾಥಂಗನುರಾಗಮಂ ಬಳೆಯಿಸಲ್ಕರ್ಘ್ಯ ಕ್ರಿಯಾ ತಂಡುಲಂ
ಗಳಿವೆಂದಾದರದಿಂದೆ ಕೊಂಡನವಱೊಳ್ ಪತ್ತೆಂಟು ರತ್ನಂಗಳಂ ೩೨೨

ಮಣಿ ಸಂಘಾತಂಗಳಂ ಮಾಗಧನತಿ ಭಯದಿಂದಿತ್ತುವಂ ಚಕ್ರಿ ಚೂಡಾ
ಮಣಿ ಕೈಕೊಂಡಾಜ್ಞೆಯಂ ದಾಂಟದೆ ನಡೆವುದು ನೀನೆಂದಣಂ ಮಾಣದೇಕ
ಕ್ಷಣದಿಂದಂ ತನ್ನ ಲೀಲಾ ರಥದೊಳೆ ಲವಣಾಂಭೋಧಿಯಂ ದಾಂಟಿ ನಾನಾ
ಗುಣ ರತ್ನಾಂಭೋಧಿ ಬಂದಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ ೩.೨೩

ಶ್ರೀಯೊಳೊಡಂಬಡಿಸಿ ಜಯ
ಶ್ರೀಯಂ ಷಟ್ಖಂಡ ಮಂಡಳ ಕ್ಷಿತಿಯುಮನಾ
ತ್ಮೀಯಂ ಮಾಡುವೆನೆಂಬ ನಿ
ಜಾಯತಿಯಿಂದಂ ಸರಸ್ವತೀ ಮಣಿಹಾರಂ ೩.೨೪

## ೩ ದಕ್ಷಿಣ ಪಶ್ಚಿಮ ದಿಗ್ವಿಜಯಂ

### ವರತನು ಪ್ರಭಾಸಾಮರ ಜಯಂ

ಅಂತು ಭರತೇಶ್ವರ ಚಕ್ರವರ್ತಿ ದಕ್ಷಿಣಾಂಬು ರಾಶಿಯನೆಯ್ದಿ ವೈಜಯಂತೀ ದ್ವಾರದೊಳ್ ಬೀಡಂ ಬಿಟ್ಟು, ಮುನ್ನಿನಂತೆ ಲವಣ ಜಲಧಿಯಂ ಪೊಕ್ಕು ಮಾಗಧನಂ ಗೆಲ್ದವೊಲ್ ವರತನುವನೊತ್ತಿ ಕಪ್ಪಂಗೊಂಡು ಅಭೇದ ಕವಚ ಮುಮಂ ಚೂಡಾ ರತ್ನಮುಮಂ ಪಲವುಂ ಪರಾರ್ಥ್ಯ ರತ್ನಂಗಳಂ ಕೊಂಡು ಮಗುಳ್ದು, ಲವಣ ಸಮುದ್ರದುಪ ಸಮುದ್ರದ ನಡುವೆ ನಡೆದು ಬಂದು ಸಿಂಧು ದ್ವಾರದೊಳ್ ಆವಾಸಿತ ವಿಜಯ ಕಟಕನಾಗಿ, ಪೂರ್ವ ಸ್ಥಿತಿಯೊಳೆ ಜಳಧಿಯ ನೀರಂ ದಾಂಟಿ ಪ್ರಭಾಸಾಮರನಂ ನಿಜ ವಿಜಯ ಯಶಃ ಪ್ರಭಾ ಸಮೂಹ ದಿಂದಂ ಪುದಿದು, ಸಿಂಧು ನದೀ ತೀರಂ ಬಿಡಿದು ಬರ್ಪಲ್ಲಿ,

ಎಳವಿಸಿಲೀಗಳೀಗಳೆ ಮುದಿರ್ದುದು ಚೂತ ಕುಜಾತವೀಗಳೀ
ಗಳೆ ನನೆದೋಱಿತಿಂದೊಳದಿನುನ್ಮದ ಷಟ್ಪದ ವೃಂದವೀಗಳೀ
ಗಳೆ ಮೊರೆದತ್ತು ಚಂದನದ ತಳ್ಕಬಳಾ ನಿಕರಕ್ಕದೀಗಳೀ
ಗಳೆ ನೆಗಲ್ದತ್ತೆಲೇ ಪುಗಿಲದಾಗಲೆ ವೇಡ ವಸಂತ ರಾಜನಾ ೩.೨೫

ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಳಿ ಕೂಡೆ ಸೋರ್ವ ಮಾ
ವಿನ ಸೊನೆ ಗಂಧ ಸಿಂಧುರ ಮದಂ ತಳಿರೋಳಿ ತಗುಳ್ದು ತಳ್ತ ಕೇ
ತನ ತತಿ ಚಾಮರೋತ್ಕರದೆಲರ್ ಮಳಯಾನಿಳನಾಗೆ ರಾಜ ರಾ
ಜನ ಪಡೆ ಚೆಲ್ವನೇನೆಱೆದುಕೊಂಡುದೊ ಬಂದ ಬಸಂತ ರಾಜನಾ ೩.೨೬

ವಿಜಯಾರ್ಧ ಪರ್ವತಾಗಮನಂ

ಅಂತು ದಿಗ್ವಿಜಯ ಯಾತ್ರೆಯೆ ವಸಂತೋದ್ಯಾನ ಯಾತ್ರೆಯನನುಕರಿಸೆ ವಿಜಯೋದ್ಯೋಗದಿಂ ವಿಜಯಾರ್ಧಾಚಳೋಪಾಂತಮನೆಯ್ದಿ ವನ ವೇದಿಕೆಯ ತೋರಣ ದ್ವಾರದಿಂದಂ ನುಗುಳ್ದು ವಿಜಯಾರ್ಧ ಮಧ್ಯಮ ಕೂಟಾಸನ್ನ ಪ್ರದೇಶ ನಿವೇಶಿತ ಶಿಬಿರನಾಗಿ ನಿಯಮದೊಳಿರ್ದ ಭರತೇಶ್ವರ ಚಕ್ರವರ್ತಿಯಿರವನಱಿದು ವಿಜಯಾರ್ಧ ಕುಮಾರಂ ಬಂದು ಎಱಗಿ ಮುಂದೆ ನಿಲ್ವುದುಂ, ನೃಪೇಂದ್ರಂ ಸಾರೆ ಕರೆದು ಭದ್ರಾಸನಮನಿಕ್ಕವೇೞ್ ಕುಳ್ಳಿರ್ದು,

"ಇದು ವಿಜಯಾರ್ಧಮೆನ್ನ ಪೆಸರುಂ ವಿಜಯಾರ್ಧಮಲಂಘ್ಯಮೆಂದುಮಿಂ
ತಿದು ಪೆಱರ್ಗಾನುಮಿನ್ನೆಗಮಲಂಘ್ಯನೆನಿನ್ ನಿನಗಾಳೆನಾಳ ಲೆ
ಕ್ಕದೊಳಿದು ಚಕ್ರವರ್ತಿಗಳ ದಿಗ್ವಿಜಯಾರ್ಧದೊಳೊಂದಿ ನಿಂದುದ
ಪ್ಪುದಱಿಂದೊಳೆ ಸಂದುದೀ ಗಿರಿಯುಮೀ ಜಗದೊಳ್ ವಿಜಯಾರ್ಧ ನಾಮದಿಂ ೩೨೭

ಇದಱಿಂದೊಳ್ ಮಧ್ಯಮ ಕೂಟದೊಳ್ ವಸಿಯಿಪೆಂ ನಿನ್ನಾಜ್ಞೆ ಪೂಮಾಲೆಯಂ
ದದೆ ನಿಂದಿರ್ಪುದು ಮತ್ಕಿರೀಟ ತಟದೊಳ್ ಚಕ್ರೇಶರಾರ್ ಬಂದೊಡಂ
ಮೊದಲೊಳ್ ಮಾೞ್ಪ ನಿಯೋಗಮಿಂತಿದೆನಗೆ"ಂದಾನಂದದಿಂ ತಾನೆ ಮಾ
ಡಿದನಾ ಚಕ್ರಿಗೆ ನಾಡೆಯುಂ ವಿಭವದಿಂ ಪುಣ್ಯೋದಕ ಸ್ನಾನಮಂ ೩೨೮

ಅಂತು ವಿಜಯಾಭಿಷೇಕಂಗೆಯ್ದು ಸಾರ ವಸ್ತುಗಳನೋಲಗಿಸಿ ವಿಜಯಾರ್ಧ ಕುಮಾರನಾಜ್ಞಾ ವಿಧೇಯನಾಗಿ ಪೋದಂ. ಭರತೇಶ್ವರ ಚಕ್ರವರ್ತಿಯುಮಲ್ಲಿ ಚಕ್ರರತ್ನಮಂ ಪೂಜಿಸಿ ತನ್ನ ಮುನ್ನೆ ಬಂದ ವನವೀಧಿಯೊಳಗನೆ ಮಗುಳ್ದು ಪೋಗಿ ವೇದಿಕಾ ದ್ವಾರದಿಂ ಪೊರಮಟ್ಟು ಬೀಡಂ ಬಿಟ್ಟಿರ್ಪನ್ನೆಗಂ, ಗಂಗಾ ಸಿಂಧುಗಳೆರಡಱಿಡೆಯ ಕುರುರಾಜಾದಿಮೂರ್ಧಾಭಿಷಿಕ್ತ ಪಾರ್ಥಿವರ್ ಮುನ್ನ ವೃಷಭನಾಥನ ನಡಪಿದುದುಮಂ ತಮ್ಮ ನಣ್ಪುಮಂ ಬಗೆದು ಸನ್ನದ್ಧ ಬಲ ಪರಿವೃತರಾಗಿ ಭರತೇಶ್ವರ ಚಕ್ರವರ್ತಿಯನಾಸ್ಥಾನದೊಳ್ ಬಂದು ಕಂಡು, "ನಿನಗುತ್ತರಾರ್ಧಮೊಂದರ್ಧ ನಿಮೇಷ ಮಾತ್ರದಿಂ ಕೈಗೆ ಬಾರದೆ? ದೇವರ್ ನಡೆವನಿತುಮಾವುದು ಗಹನಂ? ಎಮ್ಮನೆ ಬೆಸಸಾ" ಎಂಬನ್ನೆಗಂ ಒರ್ವ ನಮರನಾಗಿರಿವರದಿಂದವತರಿಸಿ ಚಕ್ರಿಯಂ ಕಂಡು,

"ಕೃತಮಾಳನೆನೆಂಬೆನಿಳಾ
ಪ್ರತೀತನೆಂ ಗಿರಿತಟಂಗಳಿನ್ನಱಿಯದುವಿ
ಲ್ಲ ತಮಿಸ್ರ ಗುಹಾ ಕೂಟ
ಸ್ಥಿತನೆಂ ನೀನೆನ್ನನಾಳ್ವುದಾಳ್ವೆಸಗೆಯ್ವೆಂ" ೩೨೯

ಎಂದು ತನ್ನಂ ಮುನ್ನಮಱಿಪಿ,

ಬೆಲೆಯಿಡಲಱಿವೊಡೆ ಮಂಡಲಿ
ಬೆಲೆಯಿಡುಗೆಮ ನೋಟಕ್ಕೊಡಿವಱ ತೇಜದ ಮೇಲು
ಜ್ಜ್ವಲ ತೇಜ ನಿನ್ನ ತೇಜಂ
ನೆಲಸಿದುದೆನೆ ಪೇೞ್ವರ್ಕೆ ಬೆಲೆಗಳುವೊಳವೇ ೩೩೦

ಒಂದೊಂದಱನೀ ತುಡುಗೆಗ
ಳೊಂದೊಂದಗ್ಗಳಮಿವೆಂದು ಪದಿನಾಲ್ಕುಮನೋ
ರೊಂದನೆ ತೋಱಿ ನಿಜಾದರ
ದಿಂದಂ ಭರತೇಶ್ವರಂಗೆ ದಿವಿಜಂ ಕೊಟ್ಟಂ ೩೩೧

ಕೊಟ್ಟು, ಚಕ್ರವರ್ತಿಯ ಮನ್ನಣೆಯೊಳ್ ಸಂತಸಂಬಟ್ಟು ವಿಜಯಾರ್ಧ ಗುಹಾದ್ವಾರ ಪ್ರವೇಶೋಪಾಯಮನೆಲ್ಲಮಱಿಯೆ ಬಿನ್ನಪಂಗೆಯ್ದು ಪೋಗಲೊಡಂ, ಕುರು ರಾಜಾದಿ ಪಾರ್ಥಿವರಂ ಸ್ವಹಸ್ತ ತಾಂಬೂಲ ದಾನದಿಂ ತಮ್ಮ ತಮ್ಮ ಬೀಡುಗಳ್ಗೆ ಪೋಗಲ್ವೇೞ್ದು, ಸೇನಾ ನಾಯಕನ ಮೊಗಮಂ ನೋಡಿ ಕೃತಮಾಳಾಮರೋದ್ದಿಷ್ಟೋಪಾಯಮನೆಲ್ಲಮಂ ಪೇೞ್ದು,

"ತೆಱೆವ ತೆಱನಿಂತುಟಿಂತೀ
ತೆಱದಿಂದೆ ತಮಿಸ್ರಗುಹೆಯ ವಜ್ರದ ಪಡಿಯಂ
ತೆಱೆದದಱ ಬೆಂಕೆ ಪೋಪಿನ
ಮೆಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ" ೩೩೨

## ಮ್ಲೇಚ್ಛಖಂಡ ವಿಜಯಂ

ಎನೆ, ರಥಿನೀ ಪತಿ ಚಕ್ರೇಶನ ಬೆಸನಂ ಪೂಣ್ದು ರಜತಾಚಳ ಜಗತೀ ತಳಮನೇಱಿ ಬಲಮೆಲ್ಲಮಂ ಪಡುವಣ ಸೋಪಾನಂಗಳಿಂದಂ ಬೆಂಕೆ ಭೋಂಕೆನಳುರ

ದಂತು ಬೇಗಂ ಮ್ಲೇಚ್ಛ ಖಂಡಾಂತರ್ವರ್ತಿಯಾಗೆ ಮುನ್ನಂ ಕಱಿಪಿ, ಗುಹೋತ್ಸಂಗಮಂ ತಾನೊರ್ಬನೆಯ್ದೆವಂದು ತುರಗರತ್ನಮನೇಱಿ ಚಕ್ರವರ್ತಿ ಗೆಲ್ಗೆಂದು ವಜ್ರ ಕವಾಟ ಪುಟಂಗಳಂ

ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್
ಬಿರಿದತ್ತೆಂಬಂತುಮಾ ಪರ್ವತಮುಳಱಿದುದೆಂಬಂತುಮಾಕಾಶಮಾಶಾಂ
ತರದಿಂದಂ ಪತ್ತುವಿಟ್ಟೇ ಧರೆಗೆ ಕೆಡೆದುದೆಂಬಂತುಮಾಶಂಕೆ ಪೊಣ್ಮ
ತ್ತಿರೆ ಪೆರ್ಚಿತ್ತುಗ್ರಘೋಷಂ ಪ್ರಳಯ ಘನ ಘಟಾಟೋಪ ಗಂಭೀರ ಘೋಷಂ ೩೩೩

ಅಂತಭೇದ್ಯ ವಜ್ರಕವಾಟ ಪುಟಂಗಳಾ ಪರ್ವತದೆರ್ದೆದೆಱೆವಂತೆ ತೆಱೆಯೆ, ಭೋಂಕೆನಳುರ್ವ ಬೆಂಕೆಯಂ ಸೋಂಕಲೀಯದೆ ತುರಂಗಮರತ್ನಂ ಪನ್ನೆರಡು ಯೋಜನಂಬರಂ ಲಂಘಿಸಿದುದು. ತುರಂಗ ರತ್ನದ ಜವದೊಳೊಡಂಬಟ್ಟಂತೆ ಸಕಳಚಮೂ ಪತಿಯುಮನಶ್ವರತ್ನಮುಮಂ ದಂಡರತ್ನಮುಮಂ ಮೆಯ್ಮೆ ಯ್ಯೊಳೆ ಕಾವ ದೇವತೆಗಳ್ ಮ್ಲೇಚ್ಛ ಖಂಡದೊಳಗಣ ಭೂಮಿಭಾಗಮಂ ಪುಗಿಸಿ ದಾಗಳ್, ಸೇನಾನಾಯಕಂ ಮ್ಲೇಚ್ಛ ಖಂಡಮಂ ತ್ರಿಃಪ್ರದಕ್ಷಿಣಂಗೆಯ್ದು ಬಾಯ್ಕೇಳಿಸಿ, ಪಲಂಬರ್ ಮ್ಲೇಚ್ಛರಾಜರಂ ಮುಂದಿಟ್ಟು ತೋರಣ ದ್ವಾರ ದಿಂದಂ ಬಂದು ಜಗತೀತಳಮನೇಱಿ ಬರ್ಪನ್ನೆಗಂ,

ಒಳಗಣ ಬೆಂಕೆಯನಱಿದಿಂ
ಗಳಂತು ನಗಮುಗುಳ್ದು ಶಾಂತರೂಪದಿನಿರ್ದ
ತ್ತಳುರುತ್ತುಮಿರ್ದ ಕೋಪಾ
ನಳನಿಂದುಪಶಾಂತನಾದ ಭೂಭೃತ್ಪತಿವೊಲ್ ೩೩೪

## ೪ ಉತ್ತರ ಭರತ ವಿಜಯೋದ್ಯೋಗಂ

ಅಗಳಾ ಗುಹಾ ದ್ವಾರಮಂ ಪತಾಕಿನೀ ಪತಿ ಪಡೆಗೆ ನಡೆಯಲಿಂಬಪ್ಪಂತು ಶೋಧಿಸಿ ಕಾಪಂ ಪೇಟ್ದು ಶಿಬಿರಮಂ ಪೊಕ್ಕು, ಚಕ್ರ ವಲ್ಲಭನಾಸ್ಥಾನಮಂಟಪ ದೊಳ್ ಮ್ಲೇಚ್ಛರಾಜರಂ ಲಲಾಟ ಸ್ಪೃಷ್ಟ ಭೂತಳರಂ ಮಾಡಿ ಕಾಣಿಸಿ, ಅವರ ದೇಶ ನಾಮ ಕುಲ ಗೋತ್ರಂಗಳಂ ತಿಳಿಯೆ ಬಿನ್ನಪಂಗೆಯ್ದು ಭೃತ್ಯ ಭಾವಮಂ ಪೂಣಿಸಿ ಸನ್ಮಾನ ದಾನಂಗಳೊಳ್ ಸಂತಸಂಬಡಿಸಿ ತಂತಮ್ಮ ನೆಲೆಗಳ್ಗೆ ಪೋಗಲ್ವೇಟ್ದು, ಶುಭ ಮುಹೂರ್ತದೊಳ್ ಉತ್ತರ ಭರತ ವಿಜಯೋದ್ಯೋಗ

ಮಂ ಭರತ ರಾಜನನಱಪಲೆಂದು ವಿಜಯ ಭೇರಿಯಂ ಪೊಯಿಸಿದಾಗಳ್, ರಾಜ ರಾಜಂ ಜಯ ಗಜಮನೇಱ ಪೊಱಮಟ್ಟು ನಡೆಯೆ, ಸೈನ್ಯಾಧಿ ನಾಥನಧಿ ನಾಥನ ಕೆಲದೊಳ್ ಪಕ್ಷ ಗಜಾಧಿರೂಢನಾಗಿ ಅನೇಕ ದೇಶಾಧೀಶ ಬಲಂಗಳಂ ಬೇಱೆ ವೇಱೆ ತೋಱುತ್ತುಂ ಬರ್ಪನ್ನೆಗಂ ಮುಂದೆ ತಮಿಸ್ರಗುಹೆಯನೆಯ್ದಿದಾಗಳ್, ಕಾಕಿಣೀ ರತ್ನಂಗಳೊಳ್ ಬರೆದ ಚಂದ್ರಾದಿತ್ಯರ ಬೆಳಗುಗಳೊಳಂ ಮುಂದೆ ನಡೆವ ಚಕ್ರರತ್ನ ಪ್ರಭಾ ಚಕ್ರದೊಳಂ ಆ ಪಡೆ ಕಣ್ಬಡೆದಂತೆ ನಡೆದು ಕೆಲವು ಪಯಣಂಗಳಿಂ ಗುಹಾ ಭಿತ್ತಿಗಳೆರಡುಂ ದೆಸೆಯ ಕುಂಡಂಗಳೊಳ್ ಪುಟ್ಟಿ ಬಂದೆರಡುಂ ದೆಸೆಯೊಳಂ ಸಿಂಧುವಿನೊಳ್ ಕೂಡಿದ ಗುಹಾ ಮಧ್ಯದ ನಿಮ್ನಗಾ ತಟದೊಳ್ ಬೀಡಂ ಬಿಡಿಸಿ,

ಒಂದಱ ನೀರ್ ಮುಳಲೊಂದ
ಕೊರ್ಗಂದಿಸುತುಂ ಮೇಗೆ ಕೊಂಡು ನೆಗೆವುದಿದೇಂ ಮ
ತ್ತೊಂದಱ ನೀರಡಿಗಬ್ಬು ವು
ದೆಂದತಿ ವಿಸ್ಮಯದೆ ನೋಡಿದಂ ಭರತೇಶಂ ೩೩೫

ಅಂತುಭಯ ನದಿಯ ವೈಷಮ್ಯಮನಾಶ್ಚರ್ಯಂಬಟ್ಟು ನೋಡಿ ಸ್ಥಪತಿ ರತ್ನಮಂ ಕರೆದು ತೋಱದೊಡೆ, ದಿವ್ಯ ಶಕ್ತಿ ಪ್ರಭಾವದಿಂದಮಾನುಷಾರಣ್ಯಂಗಳ ಮಹಾ ದ್ರುಮಂಗಳಂ ತರಿಸಿ ನಡಿಸಿ ನಟ್ಟ ಕಂಬಂಗಳ ಮೇಗೆ ಸಾರ ದಾರುಗಳನೆಡೆಗಿಱಿದಿರೆ ಪಾಸಿ ಪಡೆಗೆ ನಡೆಯಲಪ್ಪಂತೆ ಮಾಡಿದಾಗಳ್, ರಾಜ ಮಾರ್ಗದೊಳ್ ನಡೆವಂತದಱ ಮೇಲೆ ನಡೆದು ಪೊಱಮಟ್ಟಾಗಳ್,

ಸೆಱೆವನೆಯಿಂದಂ ಭೋಂಕನೆ
ಪೊಱಮಟ್ಟವೊಲಂದು ಗರ್ಭಗೃಹದಿಂದಂ ಮೇಣ್
ಪೊಱಮಟ್ಟವೊಲಾ ಗುಹೆಯಿಂ
ಪೊಱಮಟ್ಟುದು ಸೈನ್ಯಮಂಬುಧಿ ಧ್ವನಿಯಿಂದಂ ೩೩೬

ಅಂತು ತಮಿಸ್ರ ಗುಹಾ ದ್ವಾರದಿಂ ಪೊಱಮಟ್ಟು ವಿಜಯಾರ್ಧ ಮಹೀಧರೋಪಕಂಠ ವನ ನಿಕಟದೊಳ್ ಬೀಡಂ ಬಿಟ್ಟು ಮುನ್ನಿನಂತೆ ಪಶ್ಚಿಮ ಖಂಡಮುಮಂ ಧ್ವಜಿನೀ ಪತಿಯನಟ್ಟಿ ಬಾಯ್ಕೇಳಿಸಿ ಚಕ್ರ ರತ್ನಮಂ ಮುಂದಿಟ್ಟು ಮಧ್ಯಮ ಖಂಡಮುಮಂ ಔಂಕಿ ಪೊಕ್ಕವಷ್ಟಂಭಿಸಿ ನಿಂದಾಗಳ್, ಬಳಾಕಾವರ್ತ

ರೆಂಬಿರ್ವರುಂ ಮ್ಲೇಚ್ಛ ರಾಜರ್ ತಮ್ಮ ಬಲಮನೊಂದು ಮಾಡಿ ಕೂಡಿಕೊಂಡು ಚಕ್ರವರ್ತಿಯೊಳುಚ್ಚ ವಿಗ್ರಹಂಗೆಯ್ಯಲೆತ್ತಿಕೊಂಡುದಂ ಕಂಡು ಮಂತ್ರಿಗಳ್ ಮಾರ್ಕೊಂಡು, "ಈ ಗಿರಿ ದುರ್ಗಮಂ ದಾಂಟಿ ಬಂದ ಬಲ್ಲಾಳ್ ದಿವ್ಯ ಪ್ರಭಾವ ನಕ್ಕುಮವೋಘನಕ್ಕುಂ; ಅದಱಿಂ ಈತನೊಳ್ ಇದಿರ್ಚಿ ಕಾದುವ ಮರುಳ್ತನಂ ಬೇಡ. ಯಂತ್ರಾಯುಧಾವರಣೋಪಕರಣ ಪರಿಣತಂಗಳಾಗಿರ್ದ ದುರ್ಗಂಗಳೊಳ್,



[ಗಳ್

ಘನ ದೋರ್ದಂಡ ಪ್ರಭಾವಾರ್ಜಿತ ಧರಣಿ ಗುಹಾ ಸಿಂಹರಿರ್ ನೀಮುವಿಾ
ವನ ಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇ
ಶನ ತಂತ್ರಂ ನಿಲ್ಕುಮಾರ್ತಲ್ಲಿಗೆ ನೆಱೆದು ಭರಂಗೆಯ್ದು ದುರ್ಕುಳ್ಳ ಸಾಮಂ
ತ ನಿಕಾಯಂ ಯಂತ್ರ ಮುಕ್ತಾನಳ ಶರ ದೃಷದಾಸಾರ ವಿಧ್ವಂಸಮಕ್ಕುಂ ೩೩೭

ಅಂತೀತನ ಕಟಕಕ್ಕೆ ನಿತ್ಯ ಕ್ಷಯ ವ್ಯಯ ಪ್ರತ್ಯವಾಯಂಗಳಂ ಮಾಡಿ ಬೇಸಱಿಸಿ ನೆಲದಿಂ ತೆರಳ್ಚುವಮಲ್ಲದೊಡಂ ನಮ್ಮ ಕುಲದೇವತೆಗಳಪ್ಪ ವೇಘ ಮುಖರೆಂಬ ನಾಗ ರಾಜರಿಂದಮಿಾತನಳುರ್ಕೆಯುಮನುರ್ಕುಮಂ ಕಿಡಿಸಿಗೆಲ್ವಂ" ಎಂದು ನುಡಿದ ಮಾತಂ ಮನದೆಗೊಂಡು ಬಳಾಕಾವರ್ತರ್ ಪೂಜಾಪುರಸ್ಸರಂ ತದುದ್ಯೋಗ ಪರರಾದಾಗಳ್, ನಾಗರಾಜರ್ ಬಂದು, "ನಿಮಗಾಮುಳ್ಳಂತೆ ದುಂದುಗಮೇಕಪ್ಪುದು?" ಎಂದು,

ಜಳದಾಕಾರದೊಳೆಯ್ದೆ ಪರ್ಬಿ ಸಕಳಾಶಾ ಚಕ್ರಮಂ ವ್ಯೋಮ ಮಂ
ಡಳಮಂ ಕರ್ಗಿ ಕಱಂಗಿ ತೋಱ ಸಿಡಿಲಿಂ ಮಿಂಚಿಂ ಘನ ಧ್ವಾನದಿಂ
ದಿಳೆ ಕಂಪಂಗೊಳೆ ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂ
ತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್ ೩೩೮

ಅಡಿಯೊಳ್ ಪಾಸಿದ ಚರ್ಮರತ್ನ ಪಟಮುಂ ತಚ್ಛತ್ರ ರತ್ನಂ ಬೆಡಂ
ಗಿಡಿದೋರಂತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ ತನ್ಮಧ್ಯದೊಳ್
ಸೊಡರಿರ್ಪಂತಿರೆ ಚಕ್ರ ರತ್ನ ಮುದಱೊಳ್ ನಿರ್ಬಾಧಮಿರ್ದತ್ತು ಪೆ
ರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ದಿರ್ದವೊಲ್ ೩೩೯

ಮೇಘಮುಖ ಪರಾಭವಂ

ಸೇನಾಧಿನಾಥರಕ್ಷಿತಮಪ್ಪ ಕಟಕಕ್ಕೆ ವಜ್ರ ಪ್ರಾಕಾರರೂಪನಾಗಿ ಕುರುಕುಲಾಗ್ರಗಣ್ಯನಪ್ಪ ಸೋಮಪ್ರಭನ ಮಗಂ ಜಯಕುಮಾರಂ ಸ್ಥಪತಿರತ್ನ ವಿರಚಿತಾಂಬರಗೋಚರರಥನಿಕರಂಗಳುಂ ವಜ್ರ ಗಿರಿಗಳುಂಬೆರಸು ಮೇಘಮುಖಾಮರರೊಳ್ ಕಾದುವಾಗಳ್,

ತಮದೊಡ್ಡಿರ್ಪ ವೊಲಿರ್ಪ. ಕಾರ್ಮುಗಿಲ ತಳ್ತೊಡ್ಡೆಲ್ಲಮಂ ಮುನ್ನಮ
ಗ್ನಿಮುಖಾಸ್ತ್ರಂಗಳಿನೆಚ್ಚು ತೂಳ್ದು ಭಃಟಿಯಂ ಮೆಯ್ಗ್ಗಂಡು ಪುಂಖಾನುಪುಂ
ಖಮಿಸುತ್ತಿರ್ಪೆಡೆಯೊಳ್ ತೆರಳ್ಚಿದುವಗುರ್ವಿಂ ಪರ್ಬಿ ಬಂದಿರ್ದ ಮೇ
ಘಮುಖಾಹೀಂದ್ರರ ಪೊಂಕಮಂ ಜಯ ಕುಮಾರೋನ್ಮುಕ್ತ ಬಾಣಾಳಿಗಳ್ ೩೪೦

ಆಗಳಾ ನೆಗಲ್ದ ಸಮರ ಕಳಕಳಮಂ ಕೇಳ್ದಿದೇನೆಂದು ಭರತೇಶ್ವರ ಚಕ್ರವರ್ತಿ ಖಡ್ಗರತ್ನಕ್ಕೆ ಕೈಯಂ ನೀಡಿದಾಗಳ್,

ಗಣ ಬದ್ಧಾಮರ ಹೂಂಕೃತಂ ಜಯ ಕುಮಾರೋನ್ಮುಚ್ಯಮಾನೋಗ್ರ ಮಾ
ರ್ಗಣಮಾ ವೀರನಿನಾದ ಸಿಂಹ ನಿನದಂ ತಮ್ಮಂ ಪಳಂಚಲ್ಕೆ ತತ್
ಫಣಿವೃಂದಂ ಮಣಿದೋಡೆ ಮಾಣದೆ ಬಳಾಕಾವರ್ತರಳ್ಕುತ್ತೆ ಕೇ
ಲ್ಮಣಿದಿನ್ನೆಂದುದನೆಂಬೆವೆಂದೆಱಗಿದರ್ ಚಕ್ರೇಶ ಪಾದಾಬ್ಜದೊಳ್ ೩೪೧

## ೫ ವೃಷಭಾದ್ರಿ ಗಮನಂ; ಭರತ ವಿಜಯ ಪ್ರಶಸ್ತಿ

ಆಗಳ್ ಜಯನ ಸಿಂಹನಾದಕ್ಕೆ ಚಕ್ರವರ್ತಿ ಮೆಚ್ಚಿ ಮೇಘೇಶ್ವರನಾಮಮಂ ವೀರಾಗ್ರಗಣ್ಯ ಪದವಿಯಂ ದಯೆಗೆಯ್ದು ಬಳಾಕಾವರ್ತರಂ ವಿಧೇಯರ್ ಮಾಡಿ, ಸಿಂಧು ನದೀತೀರಂಬಿಡಿದು ಪೋಗಿ ಹಿಮವತ್ಪರ್ವತದ ಸಿಂಧು ಪ್ರಪಾತಮನೆಯ್ದಿ ಸಿಂಧು ದೇವಿಯಿಂದಂ ಸಿಂಧು ಜಳಂಗಳೊಳಭಿಷಿಕ್ತನಾಗಿ ಭದ್ರಾಸನಮಂ ಪಡೆದು, ಕತಿಪಯ ಪ್ರಯಾಣಂಗಳಿಂ ಹಿಮವನ್ಮಧ್ಯ ಕೂಟಾಭಿಮುಖ ಪ್ರದೇಶದೊಳ್ ಬೀಡಂ ಬಿಟ್ಟು, ನಿಯಮಸ್ಥನಾಗಿ ಹಿಮವತ್ಕುಮಾರನುಮಂ ವಿಜಯಾರ್ಧಕುಮಾರನಂದದೊಳೆ ಸಾಧಿಸುವುದುಂ, ಆತನಂದೋಲಗಿಸಿದ ಸಾರವಸ್ತುಗಳಂ ಕೈಕೊಂಡು ಸಿಂಧು ನದೀತೀರಂಬಿಡಿದು ಪೋಗಿ ಹಿಮವತ್ಪರ್ವತಮಂ ನೋಡಿ,

ಇದಱಿಂ ಮಧ್ಯದ ಪದ್ಮೆಯೆಂಬ ಕೊಳದಿಂದಂ ಗಂಗೆಯುಂ ಸಿಂಧುವುಂ
ಮೊದಲೊಳ್ ಪುಟ್ಟಿ ನೆಗೞ್ತೆವೆತ್ತುವು ನೆಲಕ್ಕೆಮ್ಮಾಳ್ವ ಷಟ್ಖಂಡಕಿಂ
ತಿದಱಿಂದಿತ್ತೆಯೆ ಮೇರೆ ನೋಡಿಮೆಮಗೀ ಶೈಳೇಂದ್ರಮೆಂದಂದು ತೋ
ಱಿದನಾ ತನ್ನೊಡವರ್ಪ ಭೂಪನಿಕರಕ್ಕುತ್ತುಂಗ ಹೈಮಾದ್ರಿಯಂ ೩೪೨

ತದ್ಗಿರೀಂದ್ರಮಧ್ಯಮ ಕೂಟದಿಂದಂ ಸಯ್ತು ತೆಂಕ ವೋಗದೆ ಬಂದು ವೃಷಭಾಚಳಮಂ ಕಂಡಂ. ಆ ವೃಷಭಾದ್ರಿಯ ಮೇಖಳಾ ಭಿತ್ತಿಯೊಳ್ ಆತ್ಮೀಯ ವಿಜಯ ಪ್ರಶಸ್ತಿಯನಲ್ತಿಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ,

ಅದಱೊಳನೇಕ ಕಲ್ಪ ಶತ ಕೋಟಿಗಳೊಳ್ ಸಲೆ ಸಂದ ಚಕ್ರಿವೃಂ
ದದ ಚಲದಾಯದಾಯತಿಯ ಬೀರದ ಚಾಗದ ಮಾತುಗಳ್ ಪೊದ
ಱ್ದೊದವಿರೆ ತತ್ಪ್ರಶಸ್ತಿಗಳೊಳಂತವನೊಯ್ಯನೆ ನೋಡಿ ನೋಡಿ ಸೋ
ರ್ದುದು ಕೊಳಗೊಂಡ ಗರ್ವರಸಮಾ ಭರತೇಶ್ವರ ಚಕ್ರವರ್ತಿಯಾ ೩೪೩

ಭರತ ವಿಜಯ ಪ್ರಶಸ್ತಿ

ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಳ ಪ್ರಶಸ್ತಿಯೊಳೊಂದೊಂದಂ ದಂಡರತ್ನದಿಂ ಸೀಂಟಿ ಕಳೆದು ನಿಜ ಪ್ರಶಸ್ತಿಗೆಡೆಮಾಡಿ,

"ಸ್ವಸ್ತಿ ಸಮಸ್ತ ನರೇಶ್ವರ
ಮಸ್ತಕ ವಿನ್ಯಸ್ತ ಶಾಸನಂ ಸಕಲ ಜಗ
ದ್ವಿಸ್ತಾರಿತ ಯಶನನ್ವಯ
ವಿಸ್ತಾರಕನಾದಿ ದೇವನಗ್ರತನೂಜಂ ೩೪೪

ಭುವನ ವಿಶೇಷಕನಿಕ್ಷ್ವಾ
ಕು ವಂಶ ಗಗನೇಂದು ಚಕ್ರರತ್ನಾಧೀಶಂ
ನವ ನಿಧಿ ವಲ್ಲಭನಾನತ
ದಿವಿಜಗಣಂ ನೆಗೞ್ದ ನಾಭಿರಾಜನ ಮೊಮ್ಮಂ ೩೪೫

ಆವನ ದಿಗ್ವಿಜಯದೊಳೈ
ರಾವತ ಗಜ ನಿಭ ಗಜಂಗಳಿಂ ಭುವನ ತಳಂ
ಶೀವಿದುದಾವನ ಸೈನ್ಯದೊ
ಳಾವರಿಸಿದ ಧೂಳಿ ಪೂಟ್ಟುದಂಭೋನಿಧಿಯಂ ೩೪೬

ವೇಳಾ ವನಂಗಳುಂ ಕು
ತ್ಕೀಳಂಗಳುಮಾವ ನೃಪನ ಪಡೆ ನಡೆವೆಡೆ ನಿ
ರ್ಮೂಳಂಗಳಾದುವಾವನ
ತೋಳಿಂ ನಿಮಿರ್ದತ್ತು ಜಳಧಿವರಮವನಿತಳಂ ೩೪೭

ದೇವಾಂಗನೆಯರ್ ಪಾಡುವ
ರಾವನ ಜಸಮಂ ಕುಳಾಚಳಾವಳಿಯೊಳ್ ಶೌ
ರ್ಯಾವಷ್ಟಂಭದಿನಾಳ್ದವ
ನಾವಂ ಷಟ್ಖಂಡ ಮಂಡಿತ ಕ್ಷಿತಿ ತಳಮಂ ೩೪೮

ಆತಂ ಭರತೇಶ್ವರನಿಂ
ತೀ ತೆಱದಿಂ ನೆಗಳ್ದು ತನ್ನ ಕೀರ್ತಿಯನೀ ವಿ
ಖ್ಯಾತ ವೃಷಭಾದ್ರಿಯೊಳ್ ಸುರ
ಗೀತ ಯಶಂ ನಿಱಿಸಿದಂ ನೆಲಂ ನಿಲ್ವಿನೆಗಂ" ೩೪೯

## ೭ ವಿದ್ಯಾಧರ ಬಾಂಧವ್ಯಂ; ಪೂರ್ವ ಮ್ಲೇಚ್ಛಖಂಡ ವಿಜಯಂ

ಅಂತಾತ್ಮೀಯ ವಿಜಯ ಪ್ರಶಸ್ತಿಯನಾ ವೃಷಭಗಿರಿಯೊಳ್ ಬರೆಯಿಸಿ, ಬಱಿಕ್ಕದರೀಶಾನದೊಳಿರ್ದ ಗಂಗಾ ಕೂಟಕ್ಕಭಿಮುಖನಾಗಿ ಆತ್ಮೀಯ ಮಂಗಳ ಜಳಂಗಳಿಂದಭಿಷೇಕಂಗೆಯ್ದು ಅನೇಕಾಶೀರ್ವಾದ ಪುರಸ್ಸರಂ ಸಿಂಹಾಸನಮಂ ಕೊಟ್ಟ ಗಂಗಾ ದೇವಿಯಂ ವಿಸರ್ಜಿಸಿ, ಗಂಗಾ ತಟಂಬಿಡಿದು ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು ವಿಜಯಾರ್ಧಾಚಳ ಕಾಂಡಕ ಪ್ರಪಾತ ಗುಹಾ ಸಮೀಪದೊಳ್ ಬೀಡಂ ಬಿಟ್ಟು, ಮುನ್ನಿನ ಮಾಟಿಕ್ಕೆಯೊಳೆ ವರೂಥಿನೀ ಪತಿಯಂ ಬೆಸಸಿದೊಡೆ, ಆತನಾ ಗುಹಾ ದ್ವಾರಮಂ ಪೂರ್ವೋಕ್ತ ಕ್ರಮದೊಳೆ ತೆಱೆದದಱ ಬೆಂಕೆಯಾಱುವನ್ನೆಗಂ ಮ್ಲೇಚ್ಛ

ಖಂಡಮುಮಂ ಮೂಡಣ ದೆಸೆಯೊಳಿರ್ದುವುಮಂ ಬಾರ್ಯ್‌ಕೇಳಿಸಲ್ ಪೋಗೆ, ದಕ್ಷಿಣೋತ್ತರ ಶ್ರೇಣಿಗಳ ವಿದ್ಯಾಧರ ರಾಜರ್ ನಮಿ ವಿನಮಿಗಳಂ ಮುಂದಿಟ್ಟು ಬಂದು,

ಭರತೇಶ್ವರ ಪದ ನಖ ಮಣಿ
ಮರೀಚಿಗಳ್ ತಮ್ಮ ಮಕುಟ ಮಣಿ ದೀಧಿತಿಯೊಳ್
ಬೆರಸಿರೆ ತದಾಜ್ಞೆಯಂ ನಿಜ
ಕಿರೀಟದಿಂ ತಾಳ್ದಿದಂದದಿಂ ಸೊಗಯಿಸಿದರ್ ೩೫೦

ನಮಿ ವಿನಮಿಗಳ್ ಕಚ್ಛ ಮಹಾಕಚ್ಛರ್ಕಳಿಂದವೊದವಿದ ನಣ್ಪುವರ್ದಿರೆ ತಮ್ಮೊಡವುಟ್ಟಿದ ಸುಭದ್ರೆಯೆಂಬ ಕನ್ಯಾರತ್ನಮಂ ಅಂಬರ ಚರೋಚಿತ ಕಲ್ಯಾಣಂಗಳಿಂದಂ ಆ ಪುರುಷ ರತ್ನಾಕರನೊಳ್ ನೆರಪಿ ಅನರ್ಘ್ಯ ರತ್ನಂಗಳಂ ಬೞಿವೞಿಗೊಟ್ಟು ಬೀೞ್ಕೊಂಡು ಪೋದರ್. ಅನ್ನೆಗಂ ಮುನ್ನಮೆ ತೆಱೆದಱುದಿಂಗಳ್ಪರಮಾಱಿದ ಕಾಂಡಕ ಪ್ರಪಾತ ಗುಹೆಯೊಳಗಣಿಂದಂ ಚಕ್ರರತ್ನಂ ಮುಂದೆ ನಡೆಯೆ ಕಾಕಿಣೀ ರತ್ನ ರಚಿತ ಸೂರ್ಯ ಚಂದ್ರ ಮಂಡಲಂಗಳ ಬೆಳಗಿನೊಳಂ ಗಂಗಾ ನದ್ಯುಭಯ ತಟ ಮಹಾ ವೀಥಿಗಳೊಳಂ ನಡೆದು ಕತಿಪಯ ದಿನಂಗಳಿಂ ಗುಹಾ ದ್ವಾರಮಂ ಪೊಱಮಡುವಾಗಳ್, ತದ್ಗುಹಾ ಕೂಟ ನಿವಾಸಿಯಪ್ಪ ನಾಟ್ಯಮಾಲಾಮರಂ ಸುವರ್ಣ ಪೂರ್ಣ ಕುಂಭಾದಿ ಮಂಗಳಂಗಳಿನಿದಿರ್ಗೊಳೆ, ಗುಹಾ ದ್ವಾರದಿಂ ಪೊಱಮಟ್ಟು ಪೂರ್ವ ದಿಗ್ಭಾಗ ಸ್ಥಿತಮಂ ಮ್ಲೇಚ್ಛ ಖಂಡಮನಪ್ರತಿಹತ ಶಾಸನಾಂಕಿತಂಮಾಡಿ ಬರೆ, ವಿಜಯ ಸೈನ್ಯ ವಿನಿರ್ಜಿತ ಭರತಮಂಡಳಂ ಭರತೇಶ್ವರ ಚಕ್ರವರ್ತಿ ಸಿದ್ಧ ದಿಗ್ವಿಜಯನಾಗಿ,

## ೭ ಕೈಲಾಸ ಗಮನಂ; ವೃಷಭನಾಥ ಸ್ತುತಿ

ಗಂಗಾ ತಟಂಬಿಡಿದು ಪಯಣಂಬಂದು ಕೈಳಾಸಾಚಳ ನಿಕಟದೊಳ್ ಕಟಕಮಂ ನಿಱಿಸಿ, ಪರಿಮಿತ ಪರಿಜನಂಬೆರಸು ತದ್ಗಿರೀಂದ್ರಮನೆಯ್ದೆ ವಂದು,

ಶರಭಂಗಳ್ಗೆಡೆ ಸಿಂಹದುರ್ಗ ವನ ಗಂಧೇಭೋತ್ಕರಕ್ಕೆಂದುಮಾ
ಗರಮೀ ಭೂಧರಮೀ ಮಹೋಗ್ರ ಮೃಗ ಸಂಘಾತಂಗಳೊಂದೊಂದನಿಂ
ತಿರೆ ಕಂಡೋಡುವುವಲ್ಲದಿಂತಿವೊಡಗೂಡಿರ್ದಪ್ಪುವಿಂತೀ ಜಗ
ದ್ಗುರು ಬಂದಿರ್ದುದಱಿಂದೆ ಶಾಂತರಸಮಂ ಕೈಕೊಂಡುದೀ ಪರ್ವತಂ ೩೫೧

ಎಂದು ಕೈಳಾಸಾಚಳಮನೇಱಿ ವೃಷಭ ನಾಥನಾಸ್ಥಾನ ಮಂಟಪಮಂ ನೋಡುತ್ತುಂ ಬಂದು, ಜಗತ್ತ್ರಯ ತಿಳಕನ ಪಾದ ಪದ್ಮಂಗಳ್ಗೆ ಭರತೇಶ್ವರ ಚಕ್ರವರ್ತಿ ಮಹೀತಳ ನಿಹಿತ ಮಣಿ ಕಿರೀಟನಾಗಿ,

### ವೃಷಭನಾಥಸ್ತುತಿ

"ಸಮಸ್ತ ಸುರಕೋಟಿ ಹೇಮಘಟಕೋಟಿಯಿಂ ತೀವಿ ತಂ
ದಮೇಯ ಭುಜ ಕೋಟಿಯಿಂ ಮಿಸಿಸೆ ದುಗ್ಧ ಸಿಂಧು ಪ್ಲವಂ
ಶ್ರಮಾಂಬು ಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿ
ಲ್ಲಮಾನುಷಮನಂತ ವೀರ್ಯ ಗುಣಮಾದಿ ತೀರ್ಥೇಶ್ವರಾ ೩೫೨

ವಿದಗ್ಧ ಸುರ ಸುಂದರೀ ನಯನ ಸೌಂದರಂ ನಿನ್ನ ರೂ
ಪಿದೆತ್ತ ಕುಸುಮಾಸ್ತ್ರನಂ ತುೞಿದು ಗೆಲ್ದ ವಿಕ್ರಾಂತಮೆ
ತ್ತಿದಚ್ಚರಿ ದಲೆಂಬಿನಂ ನೆಗೞ್ದಿ ನೀನ್ ತ್ರಿಲೋಕಂಗಳೊಳ್
ನ ದೇವಚರಿತಂ ಚರೇತೆನಿಸಿದೈ ತ್ರಿಲೋಕೇಶ್ವರಾ ೩೫೩

ಅತೀಂದ್ರಿಯ ಸುಖಾಮೃತಾಂಬುಧಿ ನಿವಾಸಮೊಂದೊಂದನಾ
ತ್ಮತತ್ತ್ವ ವಿದ ಮುಕ್ತಿಮಾರ್ಗಮನೆ ಕೇಱಿ ಕಂಡಯ್ ಪೆಱರ್
ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರೆಂತುಂ ಕರ
ಸ್ಥಿತಾಮಳಕಮೆಂಬರಾ ಜಱುಚನೇವುದಿಂದ್ರಾರ್ಚಿತಾ ೩೫೪

ಮರು ಸ್ಥಳದ ಮಾಳದೊಳ್ ನಡುಪಗಲ್ ಬಿಸಿಲ್ ಗ್ರೀಷ್ಮದೊಳ್
ಸುರುಳ್ವಿನೆಗಮುೞ್ವೆ ಬೇವವರ್ಗೆ ಜೊಂಪಮಿಮ್ಮಾವು ನಿ
ರ್ಝರಾಂಬು ದೊರೆಕೊಳ್ವವೊಲ್ ಭವ ದವಾಗ್ನಿಯೊಳ್ ಬೇವ ಜೀ
ವ ರಾಶಿಗೆ ಭವದ್ವಚೋಮೃತಮೆ ಮರ್ದನಂಗಾಂತಕಾ ೩೫೫

ಭವಂ ತವೆ ಭವತ್ಪದಾಂಬುರುಹ ಸೇವೆಗೆಯ್ವಾರುಮಂ
ಭವಂಗಿಡಿಪೆಯೇನ್ ತ್ರಿಲೋಕಗುರುವೆಂಬ ಪೆಂಪಿಂತುಟೇನ್
ಭವಂಗಿಡಿಸುವೊಲಗಕ್ಕಭವ ಬೇಸಱಿಂ ಪೋಗೆ ಪೋ
ಭವಂ ಭವದುಪಾಂತದಲ್ಲಿಯೆ ಮನೋಭವಧ್ವಂಸಕಾ ೩೫೬

ಜವಂಗಿಡದೆ ಮುಟ್ಟೆ ಬರ಼್ ಜವನಂ ಜವಂಗುಂದಿಸಲ್
ಜವಂಗೆ ಜವನಾಗಲಿನ್ ಪೆಱರ್ಗೆ ತೀರ್ಗುಮೇ ತೀರದಾ
ಜವಂಜವಜವಾಗಿ ಮುಟ್ಟುಗಿಡುವನ್ನ ಮಿನ್ನಾ ಜವಂ
ಜವ ವ್ಯಸನ ಪುಂಜಮಂ ಕಿಡಿಪುದಾದಿ ತೀರ್ಥೇಶ್ವರಾ ೩೫೭

ಅನೇಕ ಭುಜ ನೇತ್ರ ಪಂಕ್ತಿ ರಸನಾಳಿಗಳ್ ದೇವ ನಿ
ನ್ನನರ್ಚಿಸುವ ನೋೞ್ಪ ಬಣ್ಣಿಸುವ ಪೊೞ್ತುದೇಕಾಗದಿಂ
ದ್ರನಂತೆನಗೆ ಸಾಲವಿನ್ನೆರಡೆ ಕೈಯೆರಡ್ಕಣ್ಗಳೊಂ
ದೆ ನಾಲಗೆಯುಮೆಂದೆ ಚಿಂತಿಸುವೆನಾದಿ ಭಟ್ಟಾರಕಾ ೩೫೮

ಫಣಿ ಪ್ರಭುಗಮೆತ್ತಮತ್ತಳಗಮಲ್ತೆ ರೂಪಸ್ತವಂ
ಗುಣ ಸ್ತವಮುದಾತ್ತ ವೃತ್ತ ಭವದೀಯ ವಸ್ತು ಸ್ತವಂ
ಗುಣಾಗುಣ ವಿವೇಕ ಮೂಕರತಿ ಮೂರ್ಖರೆಮ್ಮಂದಿಗರ್
ಪ್ರಣಾಮದೊಳೆ ಪುಣ್ಯಮಂ ಪಡೆವರಾದಿ ತೀರ್ಥೇಶ್ವರಾ" ೩೫೯

ಎಂದನೇಕ ಸ್ತವನಂಗಳಿಂ ಸ್ತುತಿಸಿ,

ಚತುರಂಭೋರಾಶಿ ಮಧ್ಯ ಕ್ಷಿತಿ ವಲಯದೊಳಂ ತನ್ನುದಗ್ರ ಪ್ರತಾಪೋ
ನ್ನತಿಯಿಂದಂ ತನ್ನ ರತ್ನ ಪ್ರತತಿಗಳೊಳಪೂರ್ವಂಗಳಂ ಕೊಂಡು ಕೊಂಡೂ
ರ್ಜಿತ ಪುಣ್ಯಂ ಪೂಜಿಸುತ್ತುಂ ತಣಿಯನೆ ಭಗವತ್ಪಾದ ಪೀಠೋಪ ಕಂಠ
ಕ್ಷಿತಿಯಂ ಚಕ್ರಾಧಿನಾಥಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ ೩೬೦

ಸುರ ಗೀತಂ ಸುರ ದುಂದುಭಿ ಧ್ವನಿ ಸುರಸ್ತ್ರೀ ರಮ್ಯ ಸಂಗೀತಕಂ
ಸುರ ಪುಷ್ಪೋತ್ಕರ ಸೌರಭಂ ಸುರ ಜಯ ಸ್ತೋತ್ರಂ ಸುರಾಶೀಸ್ತವಂ
ಸುರ ರಾಜೇಂದ್ರ ಮಹಾ ವಿಭೂತಿ ತರೆ ಚಿತ್ತೋತ್ಸಾಹಮಂ ತಾಳ್ದಿದಂ
ಪರಮಾನಂದಮನಾದಿ ದೇವ ಸಭೆಯೊಳ್ ಸಂಸಾರ ಸಾರೋದಯಂ ೩೬೧

ಶ್ರೀ ರಮಣನೆಱಗಿ ಮುಕ್ತಿ
ಶ್ರೀ ರಮಣನ ಪಾದ ಪೀಠದೊಳ್ ಸುರ ಸಭೆ ಕ
ಣ್ಣಾರೆ ನಡೆ ನೋಡೆ ಮದನಾ
ಕಾರಂ ತಳರ್ದಂ ಸರಸ್ವತೀ ಮಣಿಹಾರಂ ೩೬೨

## ೮ ಚಕ್ರ ಗತಿ ಸ್ಖಲನಂ

ಅಂತು ಸಮವಸರಣ ಮಂಡಳದಿಂ ಪೊಱಮಟ್ಟು ನಿಜ ವಿಜಯ ಕಟಕಕ್ಕೆ ವಂದು ಅಯೋಧ್ಯೆಗೆ ಮೊಗಸಿ ಕೆಲವು ಪಯಣಂಗಳಿಂದಂ ರಾಜಧಾನಿಯನೆಯ್ದಿದಾಗಳ್, ಚಕ್ರ ರತ್ನಮಯೋಧ್ಯಾ ಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಮದಂ ರಕ್ಷಿಸುವ ಯಕ್ಷ ಸಹಸ್ರಂಬೆರಸು ಗಣ ಬದ್ಧದೇವರೆಲ್ಲಂ ನೆರೆದು,

"ಪುರ ಗೋಪುರದೊಳಗಂ ಚ
ಕ್ರ ರತ್ನಮಿಂತೇಕೆ ಪುಗದೆ ಮಾಣ್ದಿರ್ದುದೊ ಮ
ಚ್ಚರಿಪದಟನಿನ್ನನಾವನೊ
ಭರತೇಶ್ವರ ಚಕ್ರವರ್ತಿಗಿನ್ನುಂ ಜಗದೊಳ್ ೩೬೩

ಆವಂಗೆ ಕಾಲ ಚಕ್ರಮು
ನೋವದೆ ಮಾಡಲ್ಕೆ ಚಕ್ರಮಿದು ಬಗೆದುದೊ ಶೌ
ರ್ಯಾವಿರ್ಭೂತ ದವಾನಳ
ನಾವನ ಚತುರಂಗ ಬಲಮನಿನ್ ಸುಟ್ಟಪುದೋ ೩೬೪

ಆತಂಗೆ ಚಕ್ರಿವೇೞ್ಕುಮೆ
ಪೋ ತಳ್ತಿಱಿದಾಮೆ ಗೆಲ್ವಮೆ"ಂದನಿಬರುಮು
ತ್ಪಾತ ಮರುದಾಭಿಘಾತೋ
ದ್ಭೂತ ಪಯೋನಿಧಿಗಳಂತೆ ಮಸಗಿದರಾಗಳ್ ೩೬೫

### ಪುರೋಹಿತ ವಚನಂ

ಅಸ್ಖಲಿತ ಗತಿಯಪ್ಪ ಚಕ್ರ ರತ್ನ ಸ್ಖಲನಕ್ಕೆ ಚಕ್ರಿ ವಿಸ್ಮಯಂಬಟ್ಟು ಪುರೋಹಿತ ರತ್ನಮಂ ಬರಿಸಿ,

"ಪದಿನಾಲ್ಕುಂ ರತ್ನಕ್ಕಂ
ಮೊದಲೆನಗೀ ಚಕ್ರ ರತ್ನಮಿದಱಿಂ ಮೇಲಾ
ವುದು ದೈವಮೆನಗಯೋಧ್ಯೆಯ
ನಿದು ಪುಗದೆ ತಱುಂಬಿ ನಿಂದ ಕಾರಣಮೇನೋ ೩೬೬

ಎನಗಮರಾತಿಗಳೊಳರೆಂ
ಬಿನಿತು ಪರಾಭವಮನೀಗಳೀ ಚಕ್ರಂ ಸೂ
ಚನೆಗೈದುದಿನ್ನನಾವಂ
ತನಗಿರಲೆಡೆಮಾಡಿದಪ್ಪನಂತಕಮುಖಮಂ” ೩೬೭

ಎಂದನಿತನೆ ಬೆಸಸಿ ಮಾಣ್ದ ಚಕ್ರವಲ್ಲಭಂಗೆ ಪುರೋಹಿತನಭಿಮುಖನಾಗಿ,

“ಇದು ಪಗೆವರುಳ್ಳುದಂ ತೋ
ಱದಪುದು ನಿನಗರಿನೃಪರ್ಕಳಿಲ್ಲದಿದಿಂತಿ
ರ್ಪುದೆ ದುರ್ನಿರೀಕ್ಷ್ಯಮಿನ ಬಿಂ
ಬದಂತೆ ಪಜ್ಜಳಿಸಿ ಬಾಗಿಲೊಳ್ ಪುರವರದಾ ೩೬೮

ನಿನಗರಸ ಬಹಿರ್ಮಂಡಳ
ಮನೆ ಸಮಱಲ್ಕಿನಿತು ಬರಿಸಮುಂ ಪೋದುವು ಕೇ
ಳಿನಿಸಂತರ್ಮಂಡಲಸಾ
ಧನಮುಂಟೆಂದಱಿಪಿದುದು ಮನಿನ್ನಱಿಪುವೇ ೩೬೯

ಪುರುತನಯಂ ತಾನಾಮುಂ
ಪುರುತನಯರೆಮೆಮಗೆ ತಂದೆಯಿತ್ತವನಿತಳಂ
ಪೊರೆಯುಂಟೆ ತಮಗೆ ಭಾಗ್ಯಾ
ನುರೂಪದಿಂ ಬಾಟ್ವೆಮೆಱಗೆವೆಂಬತಿಮದದಿಂ ೩೭೦

ನಿನ್ನನುಜರನಿಬರುಂ ಮಾ
ನೋನ್ನತರಣಮೆಱಗರವರೊಳಗ್ಗಳದದಟಂ
ತನ್ನಭಿಮಾನದ ಭುಜಬಲ
ದುನ್ನತಿಯನೆ ಮೆಱೆವ ಬಾಹುಬಲಿ ಮುನ್ನೆಱಗಂ ೩೭೧

ಆದಿಬ್ರಹ್ಮರ ಕೊಟ್ಟೀ
ಮೇದಿನಿಗಾನೊಡೆಯನಾತನರಸಿನಿವಿರಿದಿಂ
ದಾದೊಡಮೇನೆನಗೆಂಬ ಮ
ದೋದಯದೊಳ್ ದೇವ ಬಾಹುಬಲಿ ಬಲ್ದಿರ್ದಂ ೩೭೨

ಭರತೇಶ್ವರ ನಿನ್ನ ಪದಾಂ
ಬುರುಹಕ್ಕವರೆಱಗಿ ಸುಖಮನನುಭವಿಸುಗೆ ಮೇಣ್
ಪುರು ಪರಮೇಶ್ವರನ ಪದಾಂ
ಬುರುಹಕ್ಕವರೆಱಗಿ ತಪಮನನುಭವಿಸುಗೆ ಮೇಣ್" ೩೭೩

ಎನೆ ಬಳೆದ ಮುನಿಸಿನೊಳ್ ಕೆ
ಚ್ಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ದಿ
ಗ್ವನಿತೆಯರ್ಗೆ ರಕ್ತಬಲಿಯಂ
ಮನಕ್ಕೆವರೆ ಬಳೆದ ಮುನಿಸೆ ಕುಡುವಂತಾಗಳ್ ೩೭೪

"ಏನೇನೋ ಮದನುಜರೆನ
ಗಾನತರಣಮಾಗದಿರ್ದರಾ ಮದವವರ್ಗೇನ್
ಏನೇತಱೊಳಾದುದನಿನಿ
ಸಾನುಂ ಬೇಗದೊಳೆ ಕಳೆದು ತೋಱೆನೆ ರಣದೊಳ್ ೩೭೫

ಎನಿಬರರಸುಗಳುಮೆಱಗಿದೊ
ಡೆನಗೇವಂದಪುದೊ ಬಾಹುಬಲಿ ಪೊಱಗೆನೆ ಪೇ
ೞಿನಿತುಂ ಪುರಮೇವುದೊ ಪೌ
ದನ ಪುರಮೆನ್ನಾಳ್ಕೆಗಿಂತು ಪೊಱಗೆನಿಪಾಗಳ್ ೩೭೬

ಏವನೆಮಗೆಂಬ ಶೌರ್ಯಮ
ದಾವಷ್ಟಂಭದೊಳವಂದಿರಿಂತುಱದಿರೆ ಪೇ
ೞಾವುದೊ ಬಾಯ್ಕೇಳಿಸಿಯುಮಿ
ದೇವುದೊ ಷಟ್ಖಂಡ ಮಂಡಿತಂ ಭೂವಳಯಂ" ೩೭೭

ಎಂದೊಡೆ ಪುರೋಹಿತಂ ನಿನ
ತೊಂದೋಲಗೆ ತೀರ್ವುದೊಂದು ಮನೆವಾರ್ತೆಗಿದೇ
ನೆಂದರಸ ಬಳಿಯೆ ನುಡಿದಪೆ
ಯೆಂದಟ್ಟಲೆವೇಟ್ಟನವರ್ಗೆ ಶಾಸನ ಹರರಂ ೩೭೮

ದೂತಪ್ರೇಷಣಂ

ಆಗಳ್ ಭರತೇಶ್ವರ ಚಕ್ರವರ್ತಿಯಟ್ಟಿದ ದೂತರ್ ಪುರು ಪರಮೇಶ್ವರ ತನೂಜರಲ್ಲಿಗೆ ಪೋಗಿ,

"ಎನಗೊರ್ವಂಗುಪಭೋಗ್ಯಮಲ್ತು ವಸುಧಾ ಸಾಮ್ರಾಜ್ಯಮೋರಂತೆ ನಿ
ಮ್ಮನಿಬರ್ಗಂ ಪಿರಿಯಣ್ಣನೇಂ ಜನಕನೇನೆಂಬೊಂದು ಕೊಂಡಾಟದಿಂ
ವಿನಯಂ ಸಲ್ವುದು ತಾಮುಮಾಮುಮೊಡನಿರ್ಪಂ ಬರ್ಪುದೆಂಬೀಶ ಶಾ
ಸನಮಂ ನೆತ್ತಿಯೊಳಾಂತು ಬನ್ನಿ ಮೆಱಗಿಂ ಚಕ್ರೇಶ ಪಾದಾಬ್ಜದೊಳ್" ೩೭೯

ಎಂದು ನುಡಿದ ನುಡಿಯುಮಂ ರಾಜಾದೇಶಮುಮನವಧಾರಿಸಿ ಬಂದ ದೂತರಂ ಮನ್ನಿಸಿ ಸಂತೋಷಂಬಡಿಸಿ ಪೋಗಲ್ವೇೞ್ದು,

"ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾ
ಳರಸೆಂಬೊಂದು ವಿಭೇದಮಾದೊಡೆಱಕಂ ಚಿಃ ಕಷ್ಟಮಲ್ತೇ ವಸುಂ
ಧರೆಗಯ್ಯಂ ದಯೆಗೆಯ್ಯೆ ಮುನ್ ಪಡೆದುದರ್ಕಿಂತೀತನೊಳ್ ತೊಟ್ಟ ಕಿಂ
ಕರ ಭಾವಂ ನಮಗಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೇ" ೩೮೦

ಭರತಾನುಜ ತಪೋಗ್ರಹಣಂ

ಎಂದು ತಮ್ಮೊಳನಿಬರುಂ ಪರಿಚ್ಛೇದಿಸಿ ಪರಿತ್ಯಕ್ತ ರಾಜ್ಯರಾಗಿ ಕುಮಾರರ್ ನೂರ್ವರುಂ ಸಮವಸರಣ ಭೂಮಂಡಲಮನೊಳಪೊಕ್ಕರ್. ಒಳಪುಗುವುದುಂ,

"ಪೊಡೆವಟ್ಟು ದೇವ ನೀನ್ ಕುಡೆ
ಪಡೆದೆವಿಳಾತಳಮನೊಡನೆ ಪುಟ್ಟಿದ ಮೇಳ
ಕ್ಕಡಿಗೆಱಗಿಮೆಂದು ಭರತಂ
ಜಡಿವಂ ನಿನಗೆಱಗಿ ಪರಮ ಪೆಱರ್ಗೆಱಗುವೆವೇ ೩೮೧

ಭವದಂಘ್ರಿ ಕಮಳ ರಜದಿಂ
ಪವಿತ್ರಮಾದೆಮ್ಮ ಮಕುಟಮೆಱಗದು ಪೆಱರ್ಗಂ
ಭವ ಭಯ ಹರ ಭರತನನೆಮ
ಗವಯವದೆಱಗಿಸುವ ತಪಮನೀಗಳೆ ದಯೆಗೆಯ್" ೩೮೨

ಎಂದು ಪರಮ ನಿರ್ವೇಗ ಪರಾಯಣರಾಗಿ ಅನಿಬರುಂ ಪರಮ ತಪೋಭರಮಂ ಪೂಣ್ದರ್.

## ೯ ಭರತ ಬಾಹುಬಲಿ ಯುದ್ಧಂ

ಭರತೇಶ್ವರಂ ಕೇಳ್ದು ವಿಸ್ಮಿತಾಂತಃಕರಣನಾಗಿ ಮನದೊಳೆ ಮೆಚ್ಚಿ,

"ಎನಗನುಜರಾಗಿಯುಂ ಚಲ
ದೆನಗೆಱಗದೆ ಪೋಗಿ ಭುವನ ಗುರುಗೆಱಗಿದರಂ
ತನಿಬರುಮವರಿಂದಗ್ಗಳ
ಮೆನೆ ನೆಗೞ್ದ ಬಾಹುಬಲಿಯನೆಂತೆಱಗಿಸುವೆಂ ೩೮೩

ಖರ ಕಿರಣ ಸ್ಫುರಿತಕ್ಕಿದಿ
ರುರಿವಂತಿರೆ ಸೂರ್ಯಕಾಂತಮೆನ್ನೀ ತೇಜ
ಸ್ಸ್ಫುರಿತಕ್ಕೆ ಸೆಣಸಿನೊಳ್ ಮಾ
ಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ ೩೮೪

ಅದಱಿಂದಮಾತನಂ ಸಾ
ಮದಿಂದಮಳವಡಿಸಿ ನೋಡುವೆಂ ಸಾಮದೊಳಂ
ಪದವಡದೊಡೆ ಬೞಿಕಿರ್ದ
ಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ" ೩೮೫

### ಬಾಹುಬಲಿ ಕುಮಾರಂಗೆ ಲೇಖನಂ

ಎಂದು ಮಂತ್ರಿ ವರ್ಗದೊಡನೆ ನಿರಾಕುಳಿತ ಕಾರ್ಯ ಪರ್ಯವಸಾನನಾಗಿ, ಬಾಹು ಬಲಿ ಕುಮಾರಂಗೆ ಲೇಖಮನಟ್ಟುವಂತು ಮಹಾ ಸಂಧಿ ವಿಗ್ರಹಿಗೆ ಬೆಸಸಿದೊಡಾತಂ ಮಹತ್ತರನ ಕೈಯೊಳ್ ಸನ್ಮಾನ ದಾನ ಪುರಸ್ಸರಮಾಗೆ ಕೊಟ್ಟು ವಿಜಯ ಕಾರ್ಯಸಿದ್ಧಿಯಕ್ಕೆಂದು ಪೋಗಲ್ವೇೞ್ವುದುಂ, ಆತನುಂ ಕತಿಪಯ ಪ್ರಯಾಣಂಗಳಿಂದಂ ಪೌದನ ಪುರಮನೆಯ್ದಿ ಪುರಶ್ರೀಯನೞ್ತಿವಟ್ಟು ನೋಡಿ ಮೆಚ್ಚುತುಂ ಬಂದು ರಾಜಮಂದಿರಮನೆಯ್ದಿ ದೌವಾರಿಕ ನಿವೇದಿತಾತ್ಮೀಯ ವೃತ್ತಾಂತನಾಸ್ಥಾನ ಮಂಡಪಮಂ ಪೊಕ್ಕು ಲಲಾಟ ತಟ ಸಂಘಟ್ಟಿತ ಸಭಾ ಕುಟ್ಟಿಮನಾಗಿ,

"ಪುರು ಪರಮೇಶ್ವರ ಪುತ್ರಂ
ಭರತೇಶ್ವರ ಚಕ್ರವರ್ತಿಗನುಜನೆನಲ್ ಸುಂ
ದರರೂಪನೀ ಕುಮಾರನೆ
ದೊರೆ ಚಕ್ರಿಗನೆಸೆಯದಿನಿತು ತೇಜಸ್ಸ್ಫುರಿತಂ" ೩೮೬

ಎಂದು ಮನದೊಳೆ ಬಗೆದು ವಿಸ್ಮಯಂಬಟ್ಟು, ಉಪಾಯನ ರತ್ನ ಕರಂಡಕಮಂ ಕೊಂಡು, "ದೇವ ಭವದೀಯಾಗ್ರಜಂ ರಾಜಾಧಿರಾಜಂ ನಿಮಗಟ್ಟಿದ ಮಹಾಪ್ರಸಾದಂ. ಬಿನ್ನಪಂ" ಎಂದು ಮುಂದಿಟ್ಟು ಮಹತ್ತರ ಯೋಗ್ಯಮಹೀನಿಹಿತಾಸನದೊಳಿರ್ಪುದುಂ; ಅದಂ ಮಹಾಸಂಧಿವಿಗ್ರಹಿ ಕೊಂಡು ಅಪನೀತ ಮುದ್ರೆಯಂ ಮಾಡಿ ರತ್ನಾಭರಣಂಗಳಂ ತೋಱಿ, "ದೇವ ಲೇಖಮಿದೆ"ಂದು ಬಾಜಿಸಿದಂ:—ಸ್ವಸ್ತಿ ಸಮಸ್ತ ವಿಷ್ಟಪಾಧೀಶ್ವರ ಪುರು ಪರಮೇಶ್ವರ ಚರಣ ಸರಸಿಜ ರಜೋರಂಜಿತ ಮಣಿ ಕಿರೀಟ ಮಕರಿಕಾ ಚಕ್ರಂ ಚಕ್ರ ರತ್ನ ಪ್ರಭಾ ಸಾಧಿತ ನಿಖಿಲ ದಿಕ್ಚಕ್ರಂ ಭರತೇಶ್ವರಚಕ್ರವರ್ತಿ ನಿಜ ಪ್ರಿಯಾನುಜ ಬಾಹುಬಲಿ ಕುಮಾರನಂ ಪರಮಾಶೀರ್ವಾದದಿಂ ಪರಸಿ ಕನಕ ಪತ್ರಾಂಕಿತ ಕಾರ್ಮುಕ ಲತಾಲಂಬನಂಗಳುಂ ವಿಜಯೋತ್ಸವ ತೋರಣ ಸ್ತಂಭಂಗಳುಂ ವೀರಶ್ರೀ ಭುಜಂಗೀ ಸಮಾಶ್ರಯ ಶ್ರೀ ಖಂಡ ಕಾಂಡಂಗಳುಮಪ್ಪ ದೋರ್ದಂಡಂಗಳಿಂದಮತಿ ನಿಬಿಡಾಲಿಂಗನಂಗೆಯ್ದು ಕಾರ್ಯಮಂ ಬೆಸಸಿರ್ಕುಂ.

ಬಾಹುಬಲಿಯ ದರ್ಪೋಕ್ತಿ

ಮತ್ತಪ್ಪುದೆ"ನಲೊಡಂ, "ನಾಣ್
ಮತ್ತತ್ತಣ ಕಾರ್ಯಮಱಿಯಲಾದುದು ಪೇೞ್ ಭೂ
ಪೋತ್ತಮನಿರ್ದನೆ ಸುಖದಿನು
ದಾತ್ತಯಶಂ ನೆಗೞ್ ನೆಗಲ್ದಯೋಧ್ಯಾ ಪುರದೊಳ್ ೩೮೭

ಎಂತಾನುಂ ನೆನೆದಂ ಬಹು
ಚಿಂತಂ ಚಕ್ರೇಶನೆಮ್ಮ ದಿಗ್ವಿಜಯಮುಮಾ
ದಂತೆಡಱದೆಯ್ದೆ ನಡೆದುದೆ
ಸಂತಮೆ ದಕ್ಷಿಣ ಭುಜಕ್ಕೆ ಭೂವಲ್ಲಭನಾ ೩೮೮

ಅರಸುಗಳೆಲ್ಲಂ ಬಾಯ್ಕೋ
ಳ್ದರೆಂದುಮಾಶಾಂತರಂಗಳಳ್ಕಿದುವೆಂದುಂ
ಧರಣಿತಳಂ ಕೀರ್ತಿಸೆ ಕೇ
ಳ್ದು ರಾಗಿಸುತ್ತಿರ್ಪೆವಿನ್ನುಮೇನ್ ತೊದಳುಂಟೇ ೩೮೯

ಇಲ್ಲೆಯೊ ಪೇೞ್‌"ಎಂದು ಮಹೀ
ವಲ್ಲಭದೂತಂಗೆ ನುಡಿದು ದಶನಾಂಶುಗಳಂ
ಮೆಲ್ಲನೆ ದಶನಚ್ಛದಮೃದು
ಪಲ್ಲವದಿಂ ಮುಱಿಸಿ ಮಾಣೆ ದೂತಂ ನುಡಿದಂ ೩೯೦

"ಭವದಗ್ರಜದಿಗ್ವಿಜಯೋ
ತ್ಸವಮಧಿಕಮಹೋತ್ಸವಂ ವಲಂ ನಿನಗಾದಂ
ಶ್ರವಣಸುಖಮೆಂದೆ ದಿಜ್ಮಾ
ತ್ರ ವರ್ಣನಂಗೆಯ್ವೆನುಂತದೇನೆನ್ನಳವೇ ೩೯೧

ಅದೆಂತೆಂದೊಡೆ ಮುನ್ನಂ ಪುರು ಪರಮೇಶ್ವರನ ಕೇವಲಜ್ಞಾನ ಪೂಜೆಯುಮಂ ಚಕ್ರ ಪೂಜೆಯುಮಂ ನಿರ್ವರ್ತಿಸಿ,

ನೃ ಸುರಾಸುರ ಖೇಚರರಂ
ಬೆಸಕಯ್ಸಿದನೆಡಱುವಹಿತರಂ ಚಕ್ರಮೆ ಸಾ
ಧಿಸಿದಪ್ಪುದು ನವನಿಧಿಗಳ್
ಪೊಸಯಿಸಿದಪ್ಪುವು ವಿಭೂತಿಯಂ ಪುರುಸುತನಾ ೩೯೨

ಎನ್ನಣುಗುದಮ್ಮನಿಲ್ಲದೆ
ಬಿನ್ನನೆ ಸಾಮ್ರಾಜ್ಯಮಿನಿತುಮಾದೆಱಕಮುಮ
ತ್ಯುನ್ನತಿಯಲ್ತೆನಗಾತಂ
ಮುನ್ನೆಱಗದೊಡೆಂದು ಬೆಸಸಿಯಟ್ಟದನೆನ್ನಂ ೩೯೩

ವಿನಯಂ ಸಹಜಂ ಕೃತ್ರಿಮ
ಮೆನಿಸಿದುವವು ಬೇಱೆವೇಱೆ ವಿದ್ವಜ್ಜನಮಂ
ಮನದೆ ಗೊಳಿಸುವುವಿವೆರಡುಂ
ನಿನಗೊಳವಾರಾರ ಮನಮುಮಂ ರಂಜಿಸವೇ" ೩೯೪

ಎಂಬುದುಂ ಬಾಹು ಬಲಿ ಕುಮಾರಂ ಕೋಪ ಗರ್ಭ ಸ್ಮಿತಂಬೆರಸು,

"ಮುನ್ನಂ ಸಾಮಮನೆಮ್ಮ ಮ
ನಂನೋಡಲ್ ನುಡಿದು ಭೇದಮಂ ದಂಡಮುಮಂ
ನಿನ್ನ ಱವನಿತಂ ನುಡಿದೆಯಿ
ದೇನ್ ನುಡಿಗಳೊ ಸಮಱಕೊಂಡ ನುಡಿಗಳ್ ನಿನ್ನಾ ೩೯೫

ಇನಿತೊಂದು ನುಡಿದ ಬಲ್ಮೆಯೆ
ನಿನಗಿಲ್ಲದೊಡೇಕೆ ನಿನ್ನ ನಾಳ್ದಂ ನಿನ್ನಂ
ಮನವೊಲ್ದು ನಚ್ಚಿಯಟ್ಟಿದ
ನನಾಕುಳಂ ದೂತನಿಂತು ನುಡಿಯಲ್ವೇೞ್ಕುಂ ೩೯೬

ನೀನ್ ನಿನ್ನ ನೃಪನ ದಿಗ್ವಿಜ
ಯೋನ್ನತಿಯಂ ಪೊಗೞ್ದು ಮೂರ್ಖವೋಪಯ್ ಪೊಗೞ್ದಂ
ನೀನ್ ನಿನ್ನ ಮನದೊಳಿಂತಿದು
ಬನ್ನಮನೆತ್ತುವ ವೊಲಾಯ್ತು ನಿನ್ನವನಿಪನಾ ೩೯೭

ಮುಂದಿಟ್ಟು ಚಕ್ರಮಂ ತಿರಿ
ತಂದುದುಮಂ ಪೂೞದಿರ್ದು ಬಯ್ತಂಗೊಳ್ವಂ
ದಂದದೆ ಕೊಂಡುದುಮನದೇ
ನೆಂದುನ್ನತಿಮಾಡಿ ಪೊಗೞ್ವೆಯೊಳಗಱಯದುದೇ ೩೯೮

ಪಸಿದುಣ್ಣ ಪಟ್ಟು ಬಿೞ್ದಿ
ರ್ದು ಸಮುದ್ರದ ತಡಿಯೊಳುದಕಮಂತ್ರದ ಬಲದಿಂ
ನುಸುಳ್ದೊಡೆ ಜಳನಿಧಿಯಂ ಕರು
ಣಿಸಿ ಕೊಟ್ಟರ್ ಧನಮನಂಜಿ ಕೊಟ್ಟರೆ ದಿವಿಜರ್ ೩೯೯

ಧರೆಯೊಳ್ ಕುಲಾಲ ಚಕ್ರಂ
ತಿರಿವಂತಿರೆ ತಿರಿಯೆ ಚಕ್ರಮುದಱಯೆ ಬೞಯಿಂ
ತಿರಿತಿರಿದು ಮಾಡಿದಂ ಕುಲ
ಧರ ಕುಲದೊಳ್ ಪಿರಿದು ಮಹಿಮೆಯಂ ನಿಮ್ಮರಸಂ ೪೦೦

ಉತ್ತರ ಭರತದೊಳಾದಾ
ಪತ್ತಂ ನೀನಱಿಯೆಯಕ್ಕುಮನಿತುಂ ಬಲಮಂ
ಮುತ್ತಿ ಬಳಾಕಾವರ್ತರ್
ಸುತ್ತಲುಮೇಸಾಡಿ ಪಿರಿದು ತಿಣಿಕಂ ತಂದರ್ ೪೦೧

ಮೇಘಮುಖರೆನಿಸಿ ಸಂದರ
ಘೌಘದಿನಂದೋಘ ಮೇಘಮಾದೊಡೆ ಮೞೆ ಶೌ
ರ್ಯಾಘಾತಂ ನೆಗೞೆ ಬಳ
ವ್ಯಾಘಾತಂ ನಿನ್ನ ಪತಿಗದಾದುದು ಪುಸಿಯೇ ೪೦೨

ಬೇಡವಡೆ ಮುಸುಱಿಕೊಂಡೇ
ಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱೆಯೊಳ್
ಗೂಡುಗೊಳುತಿರ್ದ ಶೌರ್ಯ
ಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ ೪೦೩

ಬರೆಯಿಸಿದಂ ಪೂರ್ವ ಮಹೀ
ಶ್ವರ ನಾಮಮನೆಯ್ದೆ ಕಳೆದು ವೃಷಭಾಚಲದೊಳ್
ಭರತಂ ನಿಜನಾಮಮನೆನೆ
ಪರಿಹಸಿತಂ ಬುಧ ಜನಕ್ಕದಲ್ಲದೆ ಪೆಱತೇಂ ೪೦೪

ಧನಮೆಂಬುದು ವಿಭುಗೆ ಯಶೋ
ಧನಮದನಿಂತೞಿಪಿ ಕೞಿಪಿ ಕಿಡೆ ಮಾಡಿರ್ದಾ
ತನ ಪಡೆದ ಧನಮದೇತಱ
ಧನಮದಱಿಂ ನಿಧನಮೆಯ್ದಿದರ್ ಪಲರರಸರ್ ೪೦೫

ಪಿರಿಯಣ್ಣಂಗೆಱಗುವುದೇಂ
ಪರಿಭವಮೇ ಕೀೞ್ ನೆತ್ತಿಯೊಳ್ ಬಾಳಂ ನಿ
ರ್ನೆರಮೂಱ ಚಲದಿನೆಱಗಿಸ
ಲಿರೆ ಭರತಂಗೆಱಗುವೆಱಕಮುಂಜಮೆಯಲ್ತೇ ೪೦೬

ವಿನಯಮುಮೆಱಕಮುಮುಪ್ಪುದು
ಸನಾಭಿಗಳ್ ಸಂಗತಂಗಳಪ್ಪೊಡೆ ಪೆಸರ್ಗೊಂ
ಡನಿತಱಿಳೆನ್ನಂ ಸೈರಿಸ
ನೆನೆ ಭರತಂಗೆಱಗಿ ಲೋಕದಿಂ ನಗಿಸುವೆನೇ ೪೦೭

ಭರತಂ ಷಟ್ಖಂಡ ಭೂ ವಲ್ಲಭನೆನೆ ಸಿರಿಯಂ ಗೆಂಟೆಱಿಳ್ ಕೇಳ್ದು ರಾಗಂ
ಬೆರಸಿರ್ಪೀ ನಣ್ಪೆ ಸಾಲ್ಗುಂ ಕರೆದೊಡೆ ಬೆಸನೇನೆಂಬ ಜೀಯೆಂಬ ದೇವಂ
ಬರಸೆಂಬಾಳೆಂಬ ದೈನ್ಯಕ್ಕೆಲವೊ ತನುವನಾನೊಡ್ಡುವಂತಾದಿ ದೇವಂ
ಪುರು ದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ ೪೦೮

ಧರೆಯಂ ಕುಡುವಂದೆನಗಂ
ಗುರು ತನಗಂ ರಾಜ ನಾಮಮುಂ ಕೊಟ್ಟೊಡೆ ನೋ
ಡಿರೆ ತನಗೀಗಳ್ ರಾಜಾ
ಧಿ ರಾಜನೆಂದಿಟ್ಟುಕೊಂಡನಡಕಿಲ್ಪೆಸರಂ ೪೦೯

ಚಕ್ರಂ ಪುಟ್ಟಿದೊಡೀಗಳ್
ಚಕ್ರೇಶ್ವರನೆಂಬ ಪೆಸರುವೂಾಯ್ತುಕ್ಕೆಮ ತಾನ್
ಚಕ್ರೇಶನಾದೊಡಂ ತ
ನ್ನಾ ಕ್ರಮಣಮನೆನ್ನೊಳೇಕೆ ಕೆಮ್ಮನೆ ತೋರ್ಪಂ ೪೧೦

ಪುರು ತನಯರ್ ಭುಜಬಲಿಯುಂ
ಭರತನುಮೆನೆ ದೊರೆಗೆವಂದೊಡಾರಳವುಮನೀ
ಧರೆಯಱಿಯಲೊಡಂ ತೂಗಲ್
ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ ೪೧೧

ಅದಲ್ಲದೆಯುಮುದಾರ ವೀರ ಚರಿತ ಕ್ಷತ್ರಿಯಂಗೆ ನಿರಾಲಂಬನವಾಗಾಡಂ
ಬರಂ ತಕ್ಕುದಲ್ತು.

ನೆಗಲ್ದೀ ಷಟ್ಖಂಡ ಭೂಮಂಡಲಮನನಿತುಮಂ ಗೆಲ್ದ ಖಂಡ ಪ್ರತಾಪಂ
ನೆಗಲ್ದಿಂತಾಱುಂ ಬಲಂಗಳ್‌ವೆರಸೊದವಿದ ಸಂಗ್ರಾಮ ಸಂರಂಭದಿಂದಂ
ಬಗೆಯಂ ಪ್ರಾಣ ಪ್ರಿಯ ಸ್ತ್ರೀಜನ ತನಯ ಧನ ವ್ರಾತದೊಳ್ ಮಾಡದಾರ್ತಾ
ಜಿಗೆ ಬಂದೊಡ್ಡಲ್ಕೆ ಪೇೞ್ ಸಂಗರ ನಿಕಷದೊಳೆಮ್ಮಂದಮಂ ನೀನೆ
[ಕಾಣ್ಬಯ್" ೪೧೨

ಎಂದು ಬಾಹುಬಲಿ ಕುಮಾರಂ ಭರತೇಶ್ವರ ಚಕ್ರವರ್ತಿಯ ದೂತನಂ ಪೋಗಲ್‌ವೇೞ್ದಾಗಳ್, ದೂತಂ ಸಾಕೇತ ಪುರಮನೆಯ್ದಿವಂದಾಸ್ಥಾನ ಮಂಟಪದೊಳಿರ್ದ ಚಕ್ರವರ್ತಿಯಂ ಕಂಡು ಪೊಡೆಮಟ್ಟು,

"ನಿನಗೀ ಷಟ್ಖಂಡ ಭೂಮಂಡಲಮೆಱಗಿದುದೇಂ ಸಾಲದೇ ಬೇಡದುದ್ವೃ
ತ್ತನೊಳಿನ್ನೇನೆಂದು ದೇವರ್ ಕಡೆಗಣಿಸಿರೆ ಸೌಂದರ್ಯಮಂ ಕಾದ ಪೆಂಪೀ
ವನಧಿ ದ್ವೀಪಾಂತರಾಳ ಕ್ಷಿತಿಯೊಳೆಸಗುವಾಕ್ಷೇಪಮಂ ಮಾಣ ನೀಂ ಕ್ರೋ
ಧನನಾಗಲ್ ನಿನ್ನ ತಮ್ಮಂ ನಿನಗೆಱಗನಿದಂ ನಂಬು ರಾಜಾಧಿರಾಜಾ" ೪೧೩

ಎಂದು ಬಿನ್ನಪಂಗೆಯ್ದಾಗಳ್,

"ತುದಿಯೆಯ್ದಿತ್ತೆಮ್ಮ ವಿಶ್ವ ಕ್ಷಿತಿ ತಳ ಜಯಮಿಂತೆಮ್ಮ ದಾಯಾದನುಂ ಕೋ
ಪದಿನೆನ್ನೊಳ್ ಕಾದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾ
ಣ್ಬುದು ಸೂೞಲ್ತೆಮ್ಮ ಸಾಪತ್ನನ ಭುಜಬಲಮಂ ನೋೞ್ಪಮೆ"ಂದಾಗಳಾಸ್ಥಾ
ನದಿನೆೞ್ದಿಂ ಚಕ್ರಿ ರಾಜನ್ಯಕ ಮಕುಟ ಮಣಿ ಪ್ರೋಜ್ಜ್ವಳದ್ವ್ಯೋಮ ಚಕ್ರಂ
೪೧೪

ಭರತ ಬಾಹುಬಲಿ ಯುದ್ಧಂ

ಆಗಳ್ ಸಮರ ಸನ್ನಾಹ ಭೇರೀ ನಿನಾದಮರ್ಣವ ಘೋಷಮಂ ಗೆಲ್ದು ಪೆರ್ಚೆ ವಿಜಯ ಪರ್ವತ ಗಜೇಂದ್ರದ ಬೆನ್ಗೆ ವಂದು ಸಾರ್ವಭೌಮಂ ಪೌದನ ಪುರಾಭಿಮುಖನಾಗಿ ಬಂದೊಡ್ಡಿ ನಿಂದಂ. ಆ ಬಾಹುಬಲಿ ಕುಮಾರನುಂ ವಿಜಯ ಗಜದ ಬೆನ್ಗೆ ವಂದು ಸಮರೋತ್ಸಾಹ ಸಂಪನ್ನನಾಗಿ ಚಕ್ರವರ್ತಿಯ ಬಲಮನಿದಿರ್ಚಲೆಂದು ಮೇಲೆತ್ತಿ ಬರ್ಪಾಗಳ್ ಉಭಯ ಬಲದ ಸೇನೆಗೋಳ್ಗ ಳೊಂದೊಂದಂ ಮುಟ್ಟುವಿನಮತ್ತ ರಾಜಾಧಿ ರಾಜನುಮಿತ್ತ ಯುವರಾಜನುಂ ನಿಂದಾಗಳ್,

ಇಸಲೆಂದಿರ್ದ ಧನುರ್ಬಲಂ ಪೊಳೆವ ಬಾಳುಳ್ಳಂಗಳಂ ಪೋಲೆ ಪಾ
ಯಿಸಲೆಂದಿರ್ದಳವಂ ಪೊದಟ್ದಿಸೆವ ಚಕ್ರಾರಾವವೋರಂತೆ ಚೋ
ದಿಸಲೆಂದಿರ್ದ ರಥಂ ಕನಲ್ದು ಮುಳಿಸಿಂ ಮಾಱಾನಲೆಂದಿರ್ದ ಖ
ಟ್ಗಿ ಸಮಂತೊರ್ಮೆಯೆ ನೂಂಕಲಿರ್ದ ಘಟೆ ನೋಟಕ್ಕೇನಗುರ್ವಾದುದೋ
೪೧೫

ಆಗಳುಭಯ ಬಲ ಮಂತ್ರಿ ಮುಖ್ಯರ್, "ಇವರಿರ್ಬರರಸುಗಳಪ್ಪೊಡೆ ಚರಮ ದೇಹ ಧಾರಿಗಳಿವರ ಯುದ್ಧಮೆಂಬುದತಿ ಕ್ರೂರ ಗ್ರಹ ಯುದ್ಧದಂತೆ ಸಕಳ ಪ್ರಜಾ ವಿನಾಶ ಕರಮಲ್ಲದೆ ಪೆಱತಲ್ತು. ಸಮಸ್ತ ಜನ ಸಂಹರಣ ಕಾರಣಮಪ್ಪ ರಣದೊಳೇ ವಂದಪುದು?" ಎಂದು ಧರ್ಮಯುದ್ಧಮನೆ ತಮ್ಮೊಳ್ ಸಮಕಟ್ಟೆ ಮುನ್ನಂ ಭರತೇಶ್ವರ ಚಕ್ರವರ್ತಿಯಲ್ಲಿಗೆ ವಂದು,

"ಜಯಮಂ ಕೈಕೊಳ್ವುದು ದೃ
ಷ್ಟಿ ಯುದ್ಧ ಜಳಯುದ್ಧ ಮಲ್ಲಯುದ್ಧದೊಳೆ ಜನ
ಕ್ಷಯ ಕರಣದೊಳೇಂ ಪಾಪಮು
ಮಯಶಮುಮಪ್ಪನಿತೆ ದೇವ ಕಡೆಗಣಿಪುದಿದಂ ೪೧೬

ಉಱುವುದು ಭುಜ ಬಲದಳವಂ
ಘಱಲನೆ ಕೊಳೆ ಹೀನ ಬಲನನಧಿಕ ಬಲಂ ತೊ
ತ್ತುಳಿದುಱದನೆಂಬ ಲೋಕದ
ಪೞು ಪೊರ್ದದೆ ಮಾಣೆ ಧರ್ಮಯುದ್ಧದೊಳೆಸಗಿಂ" ೪೧೭

ಎನೆ, ಭರತೇಶ್ವರ ಚಕ್ರವರ್ತಿ, "ಇಂತಾದೊಡೆಮಗೆ ಬಾಹುಬಲಿಯ ಸಮರ ಸಂಘಟ್ಟ ದೋಹಳಮಿದು ದರಿದ್ರಂಗೆ ಹೀನ ಗರ್ಭ ದೋಹಳದಂತಾದುದು" ಎಂದು ಸಿಂಧುರ ಸ್ಕಂಧ ಪೀಠದೊಳ್ ಸುಖಾಸೀನನಾಗಿರ್ದಾಗಳ್, ಬಾಹುಬಲಿ ಕುಮಾರನಲ್ಲಿಗೆ ಮಂತ್ರಿಗಳ್ ಬಂದು ಧರ್ಮಯುದ್ಧ ವ್ಯತಿಕರಮಂ ಬಿನ್ನಪಂ ಗೆಯ್ದಾಗಳ್,

"ಎನ್ನ ಚತುರಂಗ ಬಲಮನಿ
ದಂ ನರರಾರಾಂಪರೆಂಬ ನಿಮ್ಮರಸನ ಗ
ರ್ವೋನ್ನತಿಯುಡುಕುಮನಿನಿಸಾ
ನುಂ ನೋಡಿಂ ಧರ್ಮಯುದ್ಧಮಕ್ಕೆಮ ಬಱಿಯಂ" ೪೧೮

ಎಂದು ಈಷದ್ವಿಷಣ್ಣ ವದನನಾಗಿರ್ದ ಬಾಹುಬಲಿ ಕುಮಾರನಂ ಮಂತ್ರಿ ಪುಂಗವರ್ ನೋಡಿ,

"ಬಿಸುಡುವುದಸದಾಗ್ರಹಮಂ
ಪ್ರಸನ್ನ ಗಂಭೀರ ಚಿತ್ತದಿಂದಿದನವಧಾ
ರಿಸುವುದು ಯುವರಾಜ ಮನಂ
ಬಸದೊರ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ" ೪೧೯

ಎಂದು ನುಡಿದೊಡಂಬಡಿಸಿ ಧರ್ಮ ಯುದ್ಧಮನುಭಯ ಬಲಂಗಳೊಳ ಮಾನಂದಭೇರಿಯಂ ಪೊಯಿಸಿ ಘೋಷಿಸಲ್‌ವೇಳ್ದು, ಬಾಹುಬಲಿ ಕುಮಾರನ ಭರತೇಶ್ವರನ ಪಕ್ಷದ ರಾಜಲೋಕಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳಿರ್ಬರುಂ ನೀಲ ನಿಷಧ ಗಿರಿಗ ಳೊಂದೊಂದಱೊಳ್ ಬಂದು ಪೊಣರ್ದು ನಿಲ್ವಂತೆ ನಿಂದೊರ್ವರೊರ್ವರೆಮೆ ಯಿಕ್ಕದೆ ನೋಡುವಲ್ಲಿ,

ಚಕ್ರವರ್ತಿ ಪರಾಭವಂ

ಲಲಿತ ಮುಖ ಸರಸಿಜಂ ನಿ
ಶ್ಚಳ ಪಕ್ಷ್ಮಂ ಸ್ತಿಮಿತ ತಾರಕಂ ಭುಜಬಲಿ ಕ
ಣ್ಣೊಳೆ ತವೆ ಪೀರ್ವವೊಲೇ ನಿ
ಶ್ಚಳ ತನು ನಡೆನೋಡೆ ಭರತ ರಾಜಂ ಸೋಲ್ತಂ ೪೨೦

ಮತ್ತಮಿರ್ವರುಂ ಬಂದು,

ಕರಿಯೂಥ ಪತಿಗಳೆರಡುಂ
ಸರಸೀ ಜಳಮಂ ವಿಳಾಸದಿಂ ಪುಗುವ ವೊಲಾ
ದರದಿಂದೆ ಪೊಕ್ಕು ತುಳುಕಿದ
ರರವಿಂದ ರಜಃ ಪಿಶಂಗಿತಾಚ್ಛೋದಕಮಂ ೪೨೧

ಭರತೇಶ್ವರಂ ಪಂಚ ಶತ ಶರಾಸನೋತ್ಸೇಧನಪ್ಪುದಱಿಂ ಪಂಚ ವಿಂಶತ್ಯು ತ್ತರ ಪಂಚ ಶತ ಶರಾಸನೋತ್ಸೇಧನಪ್ಪ ಬಾಹುಬಲಿ ಕುಮಾರನ ಮೇಗೆ

ಭರದಿಂದಂ ತುಳುಕಿದ ನೀ
ರುರದೊಳ್ ಹಾರಾಂಶು ರುಚಿಯನಿರ್ಕುಱುಗೊಳೆ ದು
ರ್ಧರ ಜಳ ಯುದ್ಧಮುಮಾದಮೆ
ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್ ೪೨೨

ಅಂತು ಸೋಲ್ವುದುಂ ಕುಮಾರಂಗೆ ಘೋಷಿಸುವ ಜಯ ಘೋಷಣೆಯಂ ಕೇಳಲಾಱದೆ ಮಲ್ಲಯುದ್ಧದೊಳ್ ಬಂದು,

ಮರಕತ ಮಣಿ ಶೈಲಮನನು
ಕರಿಸುವ ಭುಜ ಬಲಿಯೊಳಿರದೆ ಪೊಣರ್ವುದುಮಾಗಳ್
ಸುರ ವಿದ್ಯಾ ಧರ ನರ ಬಲ
ಮೆರಡುಂ ದೆಸೆಯೊಳ್ ತೆರಳ್ದು ನೋಡಿತ್ತೆತ್ತಂ ೪೨೩

ಕನಕಾಚಳಮಂ ಪೊತ್ತುದು
ಘನ ಮರಕತ ಶೈಲಮೆನಿಸಿ ಭುಜಬಲಿ ಸಕಳಾ
ವನಿ ತಳ ವಲ್ಲಭನಂ ಭೋಂ
ಕೆನೆತ್ತಿ ಪೊತ್ತಿರ್ದನಿಕ್ಕಲೊಲ್ಲದೆ ನೆಲದೊಳ್ ೪೨೪

"ಭರತಾವನೀಶ್ವರಂ ಗುರು
ಪಿರಿಯಣ್ಣಂ ಚಕ್ರವರ್ತಿ ಮಹಿಮಾಕರನೀ
ದೊರೆಯನುಮಳವಱಿಯೆ ವಸುಂ
ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ" ೪೨೫

ಎಂದೊಯ್ಯನಿೞಿಪೆ ನೆಲದೊಳ್
ದುಂದುಭಿ ರವದೊಡನೆ ವಿಜಯ ಘೋಷಣೆ ನೆಗೞ್ದಿ
ತ್ತೆಂದು ಭುಜಬಲಿಯ ಬಲದೊಳ್
ಕುಂದು ಕರಂ ಪಿರಿದುಮಾಯ್ತು ಭರತನ ಬಲದೊಳ್ ೪೨೬

ನೆರೆದೆರಡುಂ ಬಲದರಸುಗ
ಳಿರೆ ಪರಿಭವಮುಂತು ತನಗೆ ಬರೆ ಮುನಿಸಿನ ದ
ಳ್ಳುರಿಗಳನುಗುೞುತ್ತುಂ ಚ
ಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ ೪೨೭

ಬೆಸಸಿದೊಡದು ಮಾರ್ಕೊಳ್ಳದೆ
ಬೆಸನಂ ಬಲವಂದು ಬಾಹುಬಲಿಯನಣಂ ಭೇ
ದಿಸಲಾಱದುದಱನಿರ್ದುದು
ಮಸುಳ್ದಿಸಕಂಗೆಟ್ಟು ಬಲದ ಮುಯ್ಪಿನ ಕೆಲದೊಳ್ ೪೨೮

ಆಗಳ್,

ಧರೆಯಂ ಪರ್ಬಿರ್ದುದೀ ಬಾಹುಬಲಿನೃಪಯಶೋ ದುಂದುಭಿದ್ವಾನವೆಂಬಂ
ತಿರೆ ದೇವಾನೀಕಿನೀ ದುಂದುಭಿರವ ಮಮರೀವೃಂದ ಮಾಂಗಲ್ಯ ಗೇಯ
ಸ್ವರದೊಳ್ ಕೈಗೂಡಿ ಪೊಣ್ಮುತ್ತಿರೆ ಮುದಿತ ಸುರಾನಂದ ಬಾಷ್ಪೋದ ಬಿಂದೂ
ತ್ಕರವೆಂಬಂತಾಗೆ ತಂದತ್ತರಲ ಮಱಿಗಳಂ ಪುಷ್ಪ ಮೇಘ ಪ್ರತಾನಂ ೪೨೯

ತನಗಲ್ಲದುದಂ ಮಾಡಿದ
ನಿನಿಸಂ ಚಕ್ರೇಶನೆಂಬ ಕುಲವೃದ್ಧರ ಭೂ
ವನಿತಾಧೀಶರ ನುಡಿಗ
ಳ್ಗೆ ನಾಣ್ಚಿದಂ ಭರತ ರಾಜನವನತ ಮಕುಟಂ ೪೩೦

## ೧೦ ಬಾಹುಬಲಿಯ ವೈರಾಗ್ಯಂ

ಬಾಹುಬಲಿ ತನ್ನ ದಕ್ಷಿಣ
ಬಾಹುವ ಕೆಲದಲ್ಲಿ ನಿಂದ ಚಕ್ರಮನಾಗಳ್
ಸಾಹಸರಸಿಕಂ ಕಂಡೀ
"ಸಾಹಸಮಂ ನೆಗಱ್ದನೆನ್ನೊಳಂ ಭರತೇಶಂ ೪೩೧

ಕಳೆದಿಡುವುದೆ ಕಷ್ಟಂ ಭೂ
ತಳ ರಾಜ್ಯ ವಿಮೋಹಮಚಿರ ರುಚಿ ಸಂಚಳಮಿಂ
ತಳವುಗಿಡಿಸಿದುದು ಮನುಕುಲ
ತಿಳಕನುಮಂ ಖಳ ಮಹೀಶರುಱದವರಳವೇ ೪೩೨

ಸೋದರರೊಳ್ ಸೋದರರಂ
ಕಾದಿಸುವುದು ಸುತನ ತಂದೆಯೆಡೆಯೊಳ್ ಬಿಡದು
ತ್ಪಾದಿಸುವುದು ಕೋಪಮನಳ
ವೀ ದೊರೆತೆನೆ ತೊಡರ್ವುದೆಂತು ರಾಜ್ಯಶ್ರೀಯೊಳ್ ೪೩೩

ಪತಾಕಿಯೊಳ್ ಲಕ್ಷ್ಮಿಯೊಳತಿ
ಕಾತರ ಕಾಪುರುಷ ಗಣನೆಯೊಳ್ ನೆರೆಯಲ್ಕಿಂ
ತೀತನೆ ಬಗೆಗಾನ್ ಪುರು ತನು
ಜಾತರ ಬಗೆದುದನೆ ಬಗೆವೆನಳಿಪಂ ಬಗೆಯೆಂ ೪೩೪

ಇನಿಯವು ಮೊದಲೊಳ್ ನಂಜಿನ
ಪನಿವೊಲ್ ಬೞಿಕಯ್ದೆ ಮುಳಿದು ಕೊಂದಿಕ್ಕುವುವಿಂ
ತೆನೆಯೆನೆ ವಿಷಯ ಸುಖಾಸ್ವಾ
ದನದೊಳ್ ಲಂಪಟರಿದೇಕೆಯೋ ನರ ಪಶುಗಳ್ ೪೩೫

ಕಿವಿ ಮೆಯ್ ಕಣ್ ನಾಲಗೆ ಮೂ
ಗಿವು ಶಬ್ದ ಸ್ಪರ್ಶ ರೂಪ ರಸ ಗಂಧ ಸಮು
ದ್ಭವ ಸುಖದೊಳ್ ತೊಡರ್ವುದೆ ಸುಖ
ಮವಿಲ್ಲದಂದಿಲ್ಲದರ್ಕತೀಂದ್ರಿಯಮೆ ಸುಖಂ ೪೩೬

ಕಿಡುವೊಡಲ ಕಿಡುವ ರಾಜ್ಯದ
ಪಡೆಮಾತುಗೊಳಲ್ಕಮೆನ್ನ ಮೆಯ್ಯಗಿದಪುದೀ
ಗಡೆ ಜೈನ ದೀಕ್ಷೆಯಂ ಕೊಂ
ಡಡಿಗೆಱಗಿಸುವೆಂ ಸಮಸ್ತ ಸುರ ಸಮುದಯಮಂ" ೪೩೭

ಎಂದಿಂತು ಬಗೆದು ಭರತನ
ನೆಂದಂ "ಚಕ್ರೇಶ ಸಿಗ್ಗನುೞಿ ಮುಳಿಸಂ ನೀನ್
ಎಂದಿಂಗಂ ಬಿಸುಡೀ ತ
ಮ್ಮಂದಿರೊಳಿಂತಿಂತು ಕಡ್ಡರಪ್ಪುದು* ಪೆಂಪೇ ೪೩೮

ನಿನ್ನೀ ಬೆಸಸಿದ ಚಕ್ರಮ
ದೆನ್ನೀ ದೇಹಾದ್ರಿಯಂ ಗೆಲಲ್ ನೆಱೆಯದು ನೀನ್
ಬಿನ್ನನದೇಕಿರ್ಪೆಯದೆಂ
ತೆನ್ನ ಗೆಲಲ್ ವಜ್ರಗಿರಿಯನಾರ್ಕುಮೆ ವಜ್ರಂ ೪೩೯

---

* ಪಾಠಾಂತರ: ಕಟ್ಟುವರ್ಪುದು, ಕಡ್ಡುವರ್ಪುದು.

ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳವಿಾ ಭಟ ಖಡ್ಗ ಮಂಡಲೋ
ತ್ಪಲ ವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯ ಲಕ್ಷ್ಮಿ ಭೂ
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀನ್
ಒಲಿದ ಲತಾಂಗಿಗಂ ಧರೆಗಮಾಟಸಿದಂದು ನೆಗಲ್ತೆ ಮಾಸದೇ ೪೪೦

ಅವಧರಿಸದೆ ನಿನ್ನೊಳ್ ಪಿರಿ
ದವಿನಯಮಂ ನೆಗಲ್ದ ದೋಷಮಂ ತಪದೊಳ್ ನೀ
ಗುವೆನಸದಾಗ್ರಹಮಂ ಬಿಸು
ಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ" ೪೪೧

ಎಂದು ಬಾಹುಬಲಿ ಕುಮಾರಂ ತಪಶ್ಚರಣ ನಿಶ್ಚಯ ಮನನಾದಾಗಳ್,

ಮನದೊಳ್ ಮುನ್ ಪುದಿದಿರ್ದ ಕೋಪಮನಿತುಂ ತೂಳ್ದಾಗಳೆತ್ತೆತ್ತ ಗೆ
ಯ್ದೆನಿದಂ ತಮ್ಮನೊಳೆಂಬುದೊಂದುಪಶಮಂ ಕೈಗಣ್ಮೆ "ನೀನೊರ್ಬನಯ್
ಮನುವಂಶಕ್ಕೆ ಲಲಾಮನಪ್ಪನುಜನಯ್ ಬೇಡಮ್ಮ ನೀನುಂ ತಪೋ
ವನಮಂ ಸಾರ್ವುದುಮಾನದಾರ್ಗೆ ಮೆಱೆವೆಂ ಮತ್ರಾಜ್ಯ ಸಾಮ್ರಾಜ್ಯಮಂ" ೪೪೨

ಎಂದು,

ನಿಜ ಪಾದಾಂಬುರುಹಕ್ಕೆ ಪಾದ್ಯವಿಧಿಯಂ ನೇತ್ರಾಂಬುವಿಂ ಮಾಡುವ
ಗ್ರಜನತ್ಯುನ್ನತಮಪ್ಪ ಮಸ್ತಕದ ಮೇಗೋರಂತೆ ಪಾಯ್ವಾತ್ಮ ಬಾ
ಷ್ಪ ಜಳೌಘಂಗಳಿನಂದು ಬಾಹುಬಲಿ ತನ್ನಿಂದಂ ನಿಧೀಶಂಗೆ ವಂ
ಶಜ ರಾಜ್ಯಾಭಿಷವೋತ್ಸವಂ ನೆಗಲ್ದುದೆಂಬಾಶಂಕೆಯಂ ಮಾಡಿದಂ ೪೪೩

ಅಂತು ಭರತೇಶ್ವರನಂ ಬಾಹುಬಲಿ ಕುಮಾರನೆಂತಾನುಮೊಡಂಬಡಿಸಿ ಮಹಾಬಲಿಯೆಂಬ ನಿಜ ತನೂಜನನಾತ್ಮೀಯ ಪದವಿಯೊಳ್ ನಿಱಿಸಿ,

ಕ್ಷಿತಿ ತಳದೊಳ್ ನೆಗಲ್ದಿರ್ದ
ಪ್ರತಿ ಮಲ್ಲನನಿಕ್ಕಿ ಮುಯ್ಪನಣಮಾನದೆ ದ
ರ್ಪಿತ ದುರಿತ ಮಲ್ಲನುಮನುಡಿ
ವ ತಕ್ಕಿನಿಂ ಸಭೆಗೆ ನಡೆದನಿಂದ್ರಾರ್ಚಿತನಾ ೪೪೪

ದೀಕ್ಷಾಗ್ರಹಣಂ

ಅಂತು ಬಂದು ಭಗವತ್ಪಾದ ಪೀಠೋಪ ಕಂಠದೊಳ್ ಸರ್ವಾಂಗೋಪನತನಾಗಿ ನಿಂದಾಗಳ್,

ಮೊದಲೊಳ್ ದೇವರ ದಯೆಗೆ
ಯ್ದುದಲ್ತೆ ಯುವರಾಜಪದವಿಯೆನಗೀಗಳುಮ
ಭ್ಯುದಯ ಕರ ಪ್ರವ್ರಜ್ಯದ
ಪದವಿಯ ಯುವರಾಜ ಪದವಿಯಂ ದಯೆಗೆಯ್ಯಿಂ ೪೪೫

ಗುರುಪದ ಪದ್ಮಾಂತಿಕದೊಳ್
ಪರಮೇಶ್ವರ ದೀಕ್ಷೆಯಂ ಮನಂಬಿಡೆ ಕೊಂಡೀ
ಧರೆಯಂ ಪೊಗಱಿಸಿದನಿದೇಂ
ಪುರು ಪರಮೇಶ್ವರ ಸುತರ್ ಪರಿಚ್ಛೇದಿಗಳೋ ೪೪೬

ಅಂತು ಜೈನ ದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗ ಚತುರ್ದಶ ಪೂರ್ವಂಗಳಂ ಕಲ್ತು ತದನುಮತದೊಳೇಕ ವಿಹಾರಿಯಾಗಿ ಸಂವತ್ಸರಾವಧಿವರಂ ಪ್ರತಿಮಾಯೋಗದೊಳ್ ನಿಲೆ,

ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್
ವಿಡಿದು ವಿಷೋರಗ ಪ್ರತತಿ ನೋಱಿಪ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ
ಕಿಡಿ ಪೊಱಪೊಣ್ಮೆ ಬಾಹುಬಲಿ ಯೋಗಿಯ ಘೋರ ತಪೋ ಮಹಾಗ್ನಿಯಿಂ
ಸುಡೆ ಸುಱಿದುಣ್ಮುತಿರ್ಪ ಕಿಡಿಗಳ್ಗೆಣೆಯಾದುವು ತತ್ಪ್ರದೇಶದೊಳ್ ೪೪೭

ಬಳೆದ ಜಡೆ ನಿಮಿರ್ದ ಬಳ್ಳಿಗ
ಳೊಳೆ ಪೆಣೆದು ವಿಷೋರಗಾನಳಾರ್ಚಿಗಳಿಂದಂ
ಮಿಳಿರ್ದುವು ಮುನಿಪ ಧ್ಯಾನಾ
ನಳ ನಿರ್ಯದ್ಧೂಮ ವೇಣಿಕಾ ನಿಕರದವೊಲ್ ೪೪೮

ಕೇವಲ ಜ್ಞಾನೋದಯಂ

ಅಂತುಗ್ರೋಗ್ರ ತಪದೊಳಮಾ ಬಾಹುಬಲಿ ಮುನೀಂದ್ರಂಗೆ ಕೇವಲ ಜ್ಞಾನಾವಾಪ್ತಿಯಾಗದುದರ್ಕೆ ಭರತೇಶ್ವರಂ ವಿಸ್ಮಯಮುತ್ತು ಪೋಗಿ ವೃಷಭ

ನಾಥನಂ ಬೆಸಗೊಳೆ, “ತಪದೊಳ್ ನಿಂದುಂ ನಿನ್ನ ನೆಲದೊಳ್ ನಿಂದೆವೆಂಬ ಮಾನ ಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ಲದಱಿಂ ಕೇವಲಜ್ಞಾನೋತ್ಪತ್ತಿಯಾಗದಿರ್ದುದು. ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಂ” ಎಂದು ಬೆಸಸಿದೊಡೆ, ಲಬ್ಧೋಪದೇಶನಾಗಿ ವಿವಿಧಾರ್ಚನಾ ಸಮಗ್ರ ಪರಿಜನ ಪರಿವೃತಂ ರಾಜರಾಜಂ ಮುನಿರಾಜ ಚರಣಾಂಭೋಜದೊಳ್ ಬಂದೆಱಗಿ ವಿವಿಧಾರ್ಚನೆಗಳಿಂದಮರ್ಚಿಸಿ,

“ನಿನ್ನ ಮಡಗೂಟ್‌ನೆಲಂ ಮಾ
ನೋನ್ನತ ನೀನೀಯೆ ಬಂದುದೆನಗಿದನೆನತೆಂ
ದೇನ್ ನಿನಗೆ ಬಗೆಯಲಪ್ಪುದೆ
ನಿನ್ನನೆ ನೀನ್ ಬಗೆಯ ಬಗೆಯದಿರ್ ಪೆಱಪೆಱತಂ” ೪೪೯

ಎನಲೊಡಮಂತಃಕರಣದೊ
ಳಿನಿಸಾನುಂ ನಿಂದುದೊಂದು ಮಾನ ಕಷಾಯಂ
ಮುನಿಪತಿಗೆ ಪೋಗೆ ಪುಟ್ಟಿದು
ದನಂತ ವಸ್ತುಪ್ರಕಾಶಿ ಕೇವಳಬೋಧಂ ೪೫೦

ಆಗಳ್ ದೊರೆಕೊಂಡಿರೆ ದೇ
ವಾಗಮಮೇಕಾತಪತ್ರಮೆಸೆದಿರೆ ಕರಮಿಂ
ಬಾಗಿರೆ ಚಾಮರಯುಗ್ಮಮ
ದಾಗಳೆ ನಿಲೆ ದಿವ್ಯ ವಿಷ್ಟರಂ ಮಣಿ ಖಚಿತಂ ೪೫೧

ಜಯ ನಿನದಂ ಸುರದುಂದುಭಿ
ಚಯ ನಿನದಂ ಪುಷ್ಪ ವರ್ಷಮೊರ್ಮೆಯೆ ಸಕಲೋ
ರ್ವಿಯನೆಯ್ದೆ ಪರ್ವುತಿರೆ ಚಿ
ತ್ರೆಯ ಸರಿಯಂತೆಱಗಿ ಪೋದುದಮರ ಸಮಾಜಂ ೪೫೨

ಅಂತು ಬಾಹುಬಲಿ ಕೇವಳಿಯುಂ ನಾನಾ ದೇಶ ವಿಹಾರದೊಳ್ ವಿಶ್ವ ಜನಮಂ ನಿಜ ವಚೋಮೃತದಿಂ ಭವ್ಯ ಜನ ಸಾರ್ಥಮಂ ತಣಿಪಲೆಂದು ಬಂದು ಕೈಲಾಸಶೈಲದೊಳಾದಿದೇವರ ಸನ್ನಿಧಿಯೊಳಿರ್ದಂ.

## ೧೧ ಸಾಕೇತಾಗಮನಂ

ಭರತೇಶ್ವರನುಮಾ ಮುನೀಶ್ವರನಂ ಪೂಜಿಸಿ,

ಪೆಸರ್ಗಂ ತೇಜಕ್ಕನೊಂದೋಜೆಗಮಹಿತ ಮಹೀ ಪಾಳಕರ್ ಬೆರ್ಚೆ ಬಾಯ್
ಳಿಸಿ ಹೈಮಕ್ಷ್ಮಾಭೃಚಳೇಂದ್ರಂಬರೆಗಮಖಿಳ ಷಟ್ಖಂಡ ಭೂಭಾಗಮಂ ಷ [ಕೇ
ಷ್ಟಿ ಸಹಸ್ರಾಬ್ದಂಗಳಿಂ ದಿಗ್ವಿಜಯದೊಳೊಗೆದಾನಂದಭೇರೀ ರವಂ ಘೂ
ರ್ಣಿಸೆ ಸಾಕೇತಕ್ಕೆ ವಂದಂ ಸುಕವಿಜನ ಮನೋಮಾನಸೋತ್ತಂಸ ಹಂಸಂ ೪೫೩

### ಚಕ್ರಾಭಿಷೇಕೋತ್ಸವಂ

ತದನಂತರಂ ಮಾಗಧ ವರತನು ಪ್ರಭಾಸಾಮರ ವಿಜಯಾರ್ಧ ಕುಮಾರ ಕೃತ ಮಾಲ ಹಿಮವತ್ಕುಮಾರ ದಿವಿಜರಿಂದಂ ಗಂಗಾ ಸಿಂಧು ದೇವೀ ಪ್ರಮುಖದೇವೀ ನಿವಹದಿಂದಂ ಲವಣಜಲಧಿ ಗಂಗಾ ಸಿಂಧು ನದ್ಯಾದಿ ತೀರ್ಥ ಜಳಂಗಳೊಳಭಿಷಿಕ್ತನಾದಾಗಳ್,

ಗಣ ಬದ್ಧಾಮರ ಖೇಚರ
ಗಣ ಭೂಚರ ನಿಕರ ಮಾಗಧಾದ್ಯಮರ ಶಿರೋ
ಮಣಿ ರುಚಿ ಪುದಿಯೆಯುಮಿನಿಸುಂ
ಮಣಿಯದೆ ಬೆಳಗಿದುವು ಭರತನೃಪ ನಖರುಚಿಗಳ್ ೪೫೪

ಅಂತು ಚಕ್ರಾಭಿಷೇಕೋತ್ಸವಾನಂತರಂ

ಮನು ಕುಳ ತಿಳಕಂ ವೃಷಭಾ
ಗ್ರ ನಂದನಂ ರಾಜ ರಾಜನಧಿರಾಜಂ ಚ
ಕ್ರನಿಧೀಶನಾದಿ ಭೂಭುಜ
ನೆನೆ ನೆಗಲ್ದಂ ಭರತ ಚಕ್ರಿ ವಿಶ್ವಂಭರೆಯೊಳ್ ೪೫೫

### ಭರತ ರಾಜ್ಯಭಾರಂ

ಹಿಮದಿಂದಂ ಲವಣಾಂಬು ರಾಶಿ ವರೆಗಂ ಷಟ್ಖಂಡ ಭೂಮಂಡಳಂ
ನಿಮಿರ್ದಾಜ್ಞಾ ಪ್ರಸರಕ್ಕಗುರ್ವುಗೊಳೆಯುಂ ವಿದ್ಯಾಧರರ್ ಮಾಗಧಾ
ದ್ಯಮರರ್ ತನ್ನನೆ ನಿಚ್ಚಮೋಲಗಿಸೆಯುಂ ಚಕ್ರೇಶ್ವರಂ ಕೀರ್ತಿ ವಿ
ಭ್ರಮದಿಂ ಪಜ್ಜಳಿಪನ್ನ ಮುಜ್ಜಳಿಸಿದಂ ವ್ಯೋಮಾವನೀ ಭಾಗಮಂ ೪೫೬

ಅಂತು ಭರತ ಮಂಡಳಮನೇಕ ಚ್ಛತ್ರ ಚ್ಛಾಯೆಯಿಂದಂ ಪ್ರತಿಪಾಲಿಸುತ್ತ ಮಿರೆಯಿರೆ ಸಕಲ ಚಕ್ರವರ್ತಿ,

ವಿಪ್ರಸಂತತಿ ನಿರ್ಮಾಣಂ

ಜಿನ ಪೂಜೋತ್ಸವಮಂ ಮಹಾ ಮಹಮುಮಂ ತಾಂ ಮಾಡಿ ಸಲ್ವನ್ನೆಗಂ
ಧನಮಂ ತಕ್ಕವರ್ಗೀಯವೇಳ್ಪುದದನಂತೇ ಗೆಯ್ದು ವೊಲ್ಲರ್ ತಪೋ
ಧನರಾರಾಧ್ಯ ಗೃಹಸ್ಥರಾದರೊಳಮಿನ್ನಾರ್ ತಕ್ಕರಾರಯ್ವೆನೊ
ಯ್ಯನುಪಾಯಾಂತರದಿಂದಮೆಂದೊಸಗೆಯಂ ತದ್ವ್ಯಾಜದಿಂ ಮಾಡಿದಂ ೪೫೭

ಹರಿತಾಂಕುರ ಫಳ ಪುಷ್ಪೋ
ತ್ಕರಂಗಳಂ ಪೊಸತೆ ನೊಳೆತ ಧಾನ್ಯಂಗಳನಾ
ಧರಣೀಶಂ ಕೆದಱಿಸಿದಂ
ನಿರಂತರಂ ರಾಜ ಗೇಹದೊಳಗಂ ಪೊಱಗಂ ೪೫೮

ಕೆದಱಿಸಿ ಬಱಿಯಂ ಬರವೇ
ಳ್ಪುದುಮಲ್ಲಿ ಕೆಲರ್ ವಿವೇಕ ರಹಿತರ್ ಬಂದರ್
ಮೊದಲೊಳೆ ಪೊಕ್ಕರ್ ಬ್ರತವಿ
ಲ್ಲದವರ್ ತುಱಿಯುತ್ತುಮಂಕುರಂಗಳನಾಗಳ್ ೪೫೯

ಸಾವದ್ಯ ಭೀರುಗಳ್ ಕೆಲ
ರಾ ವಿವಿಧ ಫಲ ಪ್ರಸೂನ ಪಲ್ಲವ ತತಿಯಿಂ
ತೀವಿದ ರಾಜಾಂಗಣಮನಿ
ಳಾ ವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್ ೪೬೦

ನಿಲಲೊಡಮನಿಬರುಮಂ ಭೂ
ತಲ ಪತಿ ಬಱಿಯಟ್ಟಿ ಬರಿಸೆ ಪೆಱತೊಂದೆಡೆಯೊಳ್
ಮಲ ರಹಿತರ್ ಬಂದು ಧರಾ
ಲಲನಾ ಧೀಶಂಗೆ ವಿನತ ಮಸ್ತಕರಾದರ್ ೪೬೧

ಆಗಳ್ ಭರತೇಶ್ವರ ಚಕ್ರವರ್ತಿ, "ನೀಮಿನಿಬರುಮಿವರ್ ಬಂದ ಮಾರ್ಗ ದೊಳ್ ಬಾರದೆ ಪೆಱತೊಂದು ಮಾರ್ಗದೊಳೇಕೆ ಬಂದಿರೆ"ಂದು ಬೆಸಗೊಳೆ,

"ಫಳ ಕುಸುಮ ಪ್ರವಾಳ ಹರಿತಾಂಕುರ ರಾಜಿಯೊಳಲ್ಲಿ ಜೀವ ಸಂ
ಕುಳಮಳವಲ್ಲದುಂಟದಱಿನಾಗದು ಪರ್ವದಿನಂಗಳೊಳ್ ಬ್ರತಂ
ಗಳನೊಡಗೂಡಿ ನಿಂದೆಮಗೆ ಮೆಟ್ಟಲಿಳೇಶ್ವರ ಕೇಳ್ದೆವಾವಿದಂ
ತಿಳಿಯೆ ಗಣಾಧಿಪರ್ ಬೆಸಸೆ ರುಂದ್ರ ಜಿನೇಂದ್ರ ಸಭಾಂತರಾಳದೊಳ್ ೪೬೨

ಅದಱಿಂ ಪ್ರವಾಳ ಪತ್ರ ಪುಷ್ಪಾಂಕುರಂಗಳಿಂದಂ ಸಂಕೀರ್ಣಮಪ್ಪ ರಾಜಾಂಗಣಮಂ ಮೆಟ್ಟದೆ ಪೆಱತೊಂದು ಬಟ್ಟೆಯೊಳ್ ಬಂದೆವೆ"ಂಬುದುಂ, ಅವರ ಧೃಢ ವ್ರತಕ್ಕೆ ಮೆಚ್ಚಿ, ದಾನ ಸನ್ಮಾನ ಯೋಗ್ಯರಪ್ಪರೆಂದು ತಪನೀಯ ಸೂತ್ರದೊಳ್ ಏಕಾದ್ಯೇಕೋತ್ತರ ದಶಾಂತಂಬರಮವರವರ ನೆಲೆಗಳೊಳ್ ಬ್ರಹ್ಮ ಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರ ಗಾತ್ರರ್ ಮಾಡಿ,

ಏನಭಿಮತಮಪವರ್ಗವರ್ಗದ
ನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸ
ನ್ಮಾನ ಪುರಸ್ಸರಮಂತುಟೆ
ನಾನಾ ವ್ರತ ಯುತರನಾರುಮೇನ್ ಮನ್ನಿಸರೇ ೪೬೩

ಭರತೇಶ್ವರಂ ತಾನುಂ ಮುನ್ನೆ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತೋಪಾಸಕಾಧ್ಯಯನನಪ್ಪುದಱಿಂದಂ ಎಂಟುಂ ತೆಱದ ಪೂಜೆಯುಮಂ ಮನ್ನಿಸಿ ಶುದ್ಧವೃತ್ತಿಯಿಂದರ್ಥೋಪಾರ್ಜನಂಗೆಯ್ವ ವಾರ್ತೆಯುಂ ಚತುರ್ವಿಧಮಪ್ಪ ದತ್ತಿಯುಂ ಸಕಳ ಶಾಸ್ತ್ರಂಗಳನೋದುವೋದಿಸುವ ನೆನೆವ ಬರೆವ ಪರಮ ಸ್ವಾಧ್ಯಾಯಮುಂ ಪಂಚಾಣುವ್ರತಾದಿ ಪ್ರವರ್ತನ ಸ್ವಭಾವ ಸಂಯಮಮುಂ ಅನಶನ ವೃತ್ಯಾದಿ ತಪೋನುಷ್ಠಾನಮುಂಬೆರಸಾರ್ಯ ಷಟ್ಕರ್ಮಂಗಳಂ ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ,

"ಆಱುಂ ವೃತ್ತಿಗಳನಿವಂ
ಮಿಾಱಿದರಲ್ಲರ್ ದ್ವಿಜನ್ಮರೀ ವೃತ್ತಿಗಳಿಂ
ಬೇಱಾದರ್ ದ್ವಿಜರುಂತೇಂ
ಬೇಱುಂಟೆ ಮನುಷ್ಯ ಜಾತಿ ತಾನೊಂದೆ ವಲಂ" ೪೬೪

ಎಂದವರನಾತ್ಮೀಯಾನ್ವಯೋಚಿತ ವ್ರತಂಗಳೊಳ್ ದೃಢವ್ರತರಂ ಮಾಡಿ ಗರ್ಭಾದಿ ನಿರ್ವಾಣ ಪರ್ಯಂತಂಗಳಪ್ಪ ಕ್ರಿಯೆಗಳಂ

ಮೊದಲಿಂ ತಗುಳ್ದು ತುದಿವರ
ಮಿದರ್ಕಿದಾಚರಣಮಿದಱ ವಿಧಿಯಿಂತುಟು ತ
ಪ್ಪದೆ ಮಂತ್ರಪೂರ್ವಕಂ ನೆಗ
ೞ್ವುದೆಂದು ಚಕ್ರಾಧಿಪಂ ಮನಂಗೊಳೆ ಪೇೞ್ದಂ ೪೬೫

ಪೇೞ್ದು, "ಈ ಕ್ರಿಯಾ ವಿಶೇಷಂಗಳನಿಲ್ಲಿಂದಿತ್ತೆಡೆಯುಡುಗದೆ ನಡೆಯಿಸುವುದು. ತಪ್ಪದಂತು ನೆಗೞ್ದಂದು ಪರಮ ಸುಖಾಸ್ಪದಕ್ಕೆ ನೀಮೆ ಮೊದಲಿಗರಪ್ಪಿರ್.

ಪರಮ ಬ್ರಹ್ಮ ತನೂಭವರ್ ದ್ವಿಜ ವರರ್ ವರ್ಣೋತ್ತಮರ್ ಲೋಕ ಪೂ
ಜ್ಯರಿಳಾ ವಲ್ಲಭ ಮಾನ್ಯರುನ್ನತ ಗುಣರ್ ಚಾರಿತ್ರ ಶುದ್ಧರ್ ಧರಾ
ಮರರೀ ಬ್ರಾಹ್ಮಣರೆ"ಂದು ಕೊಂಡು ಕೊನೆದಾ ಷಟ್ಖಂಡ ಭೂಮಂಡಲೇ
ಶ್ವರನೋರಂತೆ ನೆಗೞ್ಚೆ ಕೂಡೆ ನೆಗೞ್ದತ್ತಿತ್ತಂ ದ್ವಿಜನ್ಮಾನ್ವಯಂ ೪೬೬

## ೧೨ ಸ್ವಪ್ನ ದರ್ಶನಂ

ಅಂತು ಭರತೇಶ್ವರಂ ತಾನೆ ಮಾಡಿದ ತನ್ನ ಕೊಂಡಾಟದಿನತಿ ಪ್ರಸಿದ್ಧಮಾದ ವಿಪ್ರ ಸಂತತಿ ಕೆಲವು ಕಾಲಂ ನಡೆವನ್ನೆಗಮೊಂದು ದಿವಸಂ ಆಶ್ಚರ್ಯಭೂತಂಗಳುಂ ದೂರಾರಿಷ್ಟ ಫಲ ಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು, ಬೆರ್ಚಿದಂತೆರ್ದುಮಿಾಗಳೆನ್ನ ಕಂಡ ಕನಸುಗಳೀ ಯುಗದ ಕಡೆಯೊಳ್ ಪ್ರಜೆಗಳ್ಗೆ ವಿವಿಧೋಪದ್ರವ ಸೂಚಕಂಗಳಾಗಿ ತೋರ್ಕುಮೆಂದನುಮಾನದಿನಸ್ಪಷ್ಟ ರೂಪದಿನಱಿದು, ಭಗವದರ್ಹತ್ ಸಮಿಾಪಕ್ಕೆ ಪೋಗಿ ಕೇವಲ ಜ್ಞಾನದಿಂ ವಿಶೇಷ ನಿಶ್ಚಯಮುಂ ಮಾಡುವೆನೆಂದು ಮಕುಟ ಬದ್ಧ ಪರಿವೃತನಾಗಿ ಬಂದು ಕೈಳಾಸ ಗಿರೀಂದ್ರ ಸ್ಥಿತ ಸಮವಸೃತಿಯಂ ಪೊಕ್ಕು ದೇವ ದಾನವ ಗಂಧರ್ವ ವಿದ್ಯಾಧರಾರಾಧ್ಯನಂ ವೃಷಭನಾಥನಂ ಸ್ತುತಿಯಿಸಿ ಅರ್ಚಿಸಿ ಗಣಧರಾದಿ ಯತಿ ಸಮಿತಿಗೆಱಗಿ ಉಚಿತಸ್ಥಾನದೊಳ್ ಕುಳ್ಳಿರ್ದಾಗಳ್, ಪರಿಣಾಮ ಶುದ್ಧಿ ದೊರೆಕೊಳೆ ಭರತಂಗೆ ತೊಟ್ಟನವಧಿ ಪುಟ್ಟಿತ್ತು. ಅಂತುತ್ಪನ್ನಾವಧಿ ಬೋಧಂ ಧರ್ಮಾಮೃತಾಸ್ವಾದನ ಪರನಾಗಿ ಕಿಱಿದು ಪೊೞ್ತಿರ್ದು,

"ಆದಿ ಬ್ರಹ್ಮನೆನಲ್ ಮೊದ
ಲಾದುದಱಿಂ ದೇವ ಮಾೞ್ಪ ನೀನಿರ್ದಂತಾ
ನಾದ ಮರುಳ್ತನದಿಂದು
ತ್ಪಾದಿಸಿದೆಂ ಬ್ರತ ಸಮೇತ ವಿಪ್ರಾನ್ವಯಮಂ ೪೬೭

ಇದಱೊಳ್ ಗುಣಮೋ ದೋಷಮೊ
ಪೊದಱ್ದು ನಿಂದಪುದಯುಕ್ತಮೋ ಯುಕ್ತಮೊ ಪೇ
ೞಿದು ಹಾನಿಯೊ ವೃದ್ಧಿಯೊ ತಾ
ನದಾವುದಂ ಪೊರ್ದಿ ನಿಲ್ಕುಮಘ ವಿಘಟ ಪಟೂ ೪೬೮

ಭಗವದರ್ಹದ್ವಚನಂ

ಅದಲ್ಲದೆಯುಮಿಂದಿನ ದಿನಂ ಬೆಳಗಪ್ಪ ಜಾವದೊಳ್ ಪದಿನಾಱು ಕನಸುಗಳಂ ಕಂಡೆನಾ ಕನಸುಗಳನಿಷ್ಟ ಫಲ ಸೂಚಕಂಗಳೆಂಬುದಂ ಸಾಮಾನ್ಯದಿನುಪಲಕ್ಷಿಸಿದೆನವಱ ಫಲಮುಮನೆನಗಱಿಯೆ ಬೆಸಸಿಂ"ಎಂದು ಬೆಸಗೊಳ್ವುದುಂ, ಪ್ರಶ್ನಾನುಕ್ರಮದಿಂ ತ್ರಿಲೋಕ ಗುರುವಿಂತೆಂದು ಬೆಸಸಿದಂ: "ನೀನಾ ದ್ವಿಜನ್ಮಜಾತಿಯಂ ಒಳ್ಳಿತಂ ಮಾಡಿದೆಯಾದೊಡಂ,

[ದೊಂದಾ
ಧರೆಯೊಳ್ ಧರ್ಮಾರ್ಥದಿಂ ನೀಂ ಸೃಜಿಯಿಸಿ ನೆಗೞ್ದೀ ವಿಪ್ರ ಸಂತಾನ
ಚರಣಂ ನೀನೆಂದ ಪಾಂಗಿಂ ಕೃತ ಯುಗದೊಳೆ ದಲ್ ಸಲ್ಗುಮಿನ್ನತ್ತ ನಷ್ಟಾ
ಚರಣಂ ಸನ್ಮಾರ್ಗದೊಳ್ ಮಚ್ಚರಿಸಿ ಕಲಿಯುಗಾಭ್ಯರ್ಣದೊಳ್ ದ್ರವ್ಯ ಲೋಭಾ
ತುರರುನ್ಮಾರ್ಗೋಪದೇಶೋದ್ಯತ ಮತಿಗಳತಿ ಕ್ರೂರರಪ್ಪರ್ ದ್ವಿಜನ್ಮರ್ ೪೬೯

ಆದೊಡಮೀಗಳವರ್ ಸದಾಚಾರರಪ್ಪುದಱಿಂ ಅವರನಾ ಮಾೞ್ಕೆಯೊಳೆ ನಡೆಯಲೀಯದೆ ಮಾಡಿ ಕಿಡಿಸಿದೊಡೆ ನಿನಗೆ ಪಿರಿದುಂ ದೂಱಕ್ಕುಮೆ"ಂದು ಪೇೞ್ದು, ಮತ್ತಮಾತನ ಕಂಡ ಷೋಡಶಸ್ವಪ್ನ ಸೂಚಿತ ಫಲಂಗಳನಿಂತೆಂದು ಬೆಸಸಿದರ್:

"ಭರತ ಮಹೀತಳಮನಳಂ
ಕರಿಸಿರ್ದಿರ್ಪತ್ತು ಮೂಱು ಕೇಸರಿಗಳನಾ
ದರದಿಂ ಕಂಡುದಱಿಂದನಿ
ಬರೆ ತೀರ್ಥ ಕರರ್ಕಳಪ್ಪರವರ ವಿಹಾರಂ ೪೭೦

ಧರೆಯೊಳ್ ಸಲೆ ಪಾಷಂಡಿಗ
ಳರಿಬರ್ ಪುಟ್ಟಿಯುಮಡಂಗುವರ್ ಮತ್ತಂ ಕೇ
ಸರಿಗಳ ಬಳಸಿಯುಮನುಕೂ
ಲ ರೂಪದಾಡುವ ಮೃಗಂಗಳಂ ಕಂಡುದಱಿಂ ೪೭೧

ಪರಮ ಜಿನ ತೀರ್ಥದೊಳ್ ಪಲ
ಬರುಮಾಗಿಯುಮೇನ್ ಕು*ಲಿಂಗಿಗಳ್ ವಿಕೃತಿಗಳಿಂ
ವಿರಹಿತರಪ್ಪರ್ ಮದ ಸಿಂ
ಧುರ ಭಾರಮನಾನಲಾಱದಳ್ಪಿಂ ಬೆನ್ನಂ ೪೭೨

ನಳಿನಳಿದು ನಡೆವ ಹಯದಱಿ
ಯಳವಂ ಕಂಡುದಱಿನಧಿಕ ಬಲ ಮುನಿಪ ಧೃತಾ
ತುಳ ಗುಣ ಭಾರಮನಾಂಪನಿ
ತಳವಿಲ್ಲದೆ ಕಿಡುವರಲ್ತೆ ದುಷ್ಷಮ ಯತಿಗಳ್ ೪೭೩

ನೆರೆದೊಂದಿ ನಿಂದ ಶಾಕ್ವರ
ವರ ಯೂಥಮನವನಿನಾಥ ಕಂಡುದಱಿಂದೊ
ರ್ವರೆ ವಿಹರಿಪುದಂ ಬಿಸುಟಂ
ಬರಾಂಬರರ್ ತಮ್ಮ ಸಮುದಯಂ ಬೆರಸಿರ್ಪರ್ ೪೭೪

ಮುಸುಱಿದ ಮುಗಿಲ್ಗಳಿಂದಣ
ಮೆಸೆಯದೆ ನಿಂದರ್ಕ ಬಿಂಬಮಂ ಕಂಡುದಱಿಂ
ದೆಸೆಯದು ದುಷ್ಷಮ ಕಾಲದೊ
ಳಸದೃಶ ಕೈವಲ್ಯ ಬೋಧ ದಿನಕರ ಬಿಂಬಂ ೪೭೫

ಕಳಿಕಾಂಕುರ ಕುಸುಮೋತ್ಕರ
ಫಳ ಪಲ್ಲವ ರಹಿತ ಮಹಿಜಮಂ ಕಂಡುದಱಿಂ
ದಳವಿಲ್ಲದ ನರ ನಾರೀ
ಕುಳಮನುಪಮ ಸತ್ಯ ಶೌಚ ವಿರಹಿತಮಕ್ಕುಂ ೪೭೬

---
*ಪಾಠಾಂತರ: ಮೇಕ

ಹರಿತಾಂಕುರ ಪಲ್ಲವ ಪ
ತ್ರ ರಾಜಿಯಂ ಬಿಸುಟು ಶುಷ್ಕ ಪತ್ರಂಗಳನಾ
ದರದಿಂ ಮೇವಜ ಕುಳಮಂ
ದೊರೆಕೊಳೆ ನೀಂ ಸ್ವಪ್ನ ಕಾಲದೊಳ್ ಕಂಡುದಱಿಂ ೪೭೭

ಸಮಯಿಗಳುಂ ಚಾತುರ್ವ
ರ್ಣಮುಮುಚಿತ ಚರಿತ್ರಮಂ ಬಿಸುಟ್ಟಾದಂ ಪೊ
ಲ್ಲಮೆಯೊಳ್ ಸಲೆ ನಡೆವರ್ ದು
ಷ್ಷಮಮೆಂಬಯ್ದನೆಯ ಕಾಲದೊಳ್ ಭರತ ನೃಪಾ ೪೭೮

ಕರಿ ಪತಿಯನೇಱಿ ಕೋಡಗ
ಮಿರೆ ಕಂಡುದಱಿಂದಮಾದಿ ಭೂಪರ್ ಕಿಡೆ ಬೇ
ಡರುಮಕುಲೀನರುಮತಿ ದು
ಶ್ಚರಿತ್ರರುಂ ಭೂಪರಪ್ಪರನ್ಯಾಯಪರರ್ ೪೭೯

ಕಾಗೆಗಳಿಂದಂ ಬಳಸಿದ
ಗೂಗೆಗಳಂ ಕಂಡೆಯಪ್ಪ ಕಾರಣದಿಂ ಜೈ
ನಾಗಮವಿದರಂ ಸಾರದೆ
ಪೋಗಿ ಕು ಲಿಂಗಿಗಳನೀ ಜನಂ ಸೇವಿಸುಗುಂ ೪೮೦

ಆಡುವ ಮರುಳ್ಗಳಂ ನಡೆ
ನೋಡಿದುದಱಿನಿಂತು ಕನಸಿನೊಳ್ ಮಕ್ಕಳ್ಗಂ
ಕೂಡೆ ಪೆಸರಿಟ್ಟು ಸಲೆ ಕೊಂ
ಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್ ೪೮೧

ಕಡೆವಿಡಿದು ಬಳಸಿ ನೀರಿರೆ
ನಡು ಬತ್ತಿದ ಕೆಱೆಯನಿಂತು ಕಂಡುದಱಿಂದಂ
ನಡು ನಾಡೊಳಱಿಂ ನೆಲಸದೆ
ಕಡೆಯೊಳ್ ನೆಲೆಗೊಳ್ಗುಮಿಲ್ಲಿ ಸಂದೆಯಮುಂಟೇ ೪೮೨

ಧೂಳೀಧೂಸರವರರ
ತ್ನಾಳಿಗಳಂ ಕಂಡ ದೂಸಱಿಂದಂ ಧರಣೀ
ಪಾಳಕಮುನಿಪರ್ ಪಂಚಮ
ಕಾಳದೊಳಣಮಾಗರಲ್ತೆ ಋದ್ಧಿಪ್ರಾಪ್ತರ್ ೪೮೩

ಕೊರಲೊಳ್ ಕಟ್ಟಿದ ಮಾಲೆಯ
ಸಿರಿಖಂಡದ ತಳ್ಕುವೆರಸು ಬಿಡುನಾಯ್ ಬೆರಸಾ
ದರದಿಂದನರ್ಘ್ಯಮಣಿವಿ
ಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡುದಱಿಂ ೪೮೪

ವ್ರತಹೀನರ್ ಸನ್ಮಾರ್ಗ
ಪ್ರತಿಕೂಲರ್ ವ್ಯಸನವಶಗತರ್ ಪಾಪಿಗಳಿಂ
ತತಿ ಕಷ್ಟ*ರಿಷ್ಟರಾದಪ
ರತಿಥಿಗಳಿನ್ನನ್ನದಾನಮಂ ಕುಡುವೆಡೆಯೊಳ್ ೪೮೫

ತರುಣವೃಷಂ ಕೆಲೆದು ತೊಳ
ಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂ
ತರುಣಜನಂಗಳೆ ತರ್ಪರ್
ಪರಿಣತವಯಸರ್ಕಳಪ್ಪವರ್ ಮೆಯ್ದಾರರ್ ೪೮೬

ಪರಿವೇಷಂಗೊಂಡಾ ಖರ
ಕರನಂ ಕಂಡುದಱನಂದು ಮುನಿನಿಕರಕ್ಕಾ
ದರದವಧಿಮನಃಪರ್ಯಯ
ಮೆರಡುಮಣಂ ಪುಟ್ಟವೆಂದು ನಂಬು ನರೇಂದ್ರಾ ೪೮೭

ಪುದಿದ ತಱಗೆಲೆಗಳಂ ಕಂ
ಡುದಱಿಂದಂ ಧಾನ್ಯಸಮಿತಿ ನೀರಸಮಕ್ಕುಂ
ತುದಿಯೊಳ್ ಮನುಜಪ್ರತತಿಗ
ಮುದೆ ದಲ್ ಭೋಗೋಪಭೋಗಕಾರಣಮಕ್ಕುಂ ೪೮೮

---

* ಪಾಠಾಂತರ: ರಪ್ಪರವನಿಯೊಳತಿಥಿಯೊ

ಇವು ದೂರಫಲಂಗಳ್ ಸ್ವ
ಪ್ನ ವಿಶೇಷಂಗಳ್ ತನೂಜ ಕೊಕ್ಕರಿಸದಿರಿ
ನ್ನಿವಱಿಡೆಗೆ ನಿನಗೆ ಸಲೆ ಮಾ
ಱ್ಕೆ ವಿಶ್ವವಿಘ್ನೋಪ ಶಾಂತಿಯಂ ಜಿನಧರ್ಮಂ" ೪೮೯

ಪ್ರಿಯ ಧರ್ಮ ನೃಪತಿ

ಎಂಬುದುಂ, ಭರತೇಶ್ವರಂ ಪ್ರಸನ್ನ ಮನನಾಗಿ ಪುರು ಪರಮೇಶ್ವರಂಗೆಱಗಿ ಬಂದಯೋಧ್ಯಾಪುರಮಂ ಪೊಕ್ಕು ದುಸ್ಸ್ವಪ್ನದರ್ಶನ ಕರ್ಷಣಾರ್ಥಮಾಗಿ ಶಾಂತಿಕ ಕ್ರಿಯೆಗಳಂ ನೆಗಟ್ಬ್ದಿ,

[ದೊಳ್ ದೇ

ವಿವಿಧದ್ವೀಪಂಗಳೊಳ್ ಮಂದರಗಿರಿ ತಟದೊಳ್ ಜ್ಯೋತಿರಾವಾಸ
ವವಿಮಾನಾನೀಕದೊಳ್ ಶೋಭಿಸುವ ಜಿನಗೃಹ ವ್ರಾತಮಂ ಗೆಲ್ದು ರತ್ನ
ಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನ ನಿಕೇತಂಗಳಂ ಮಾಡಿಸುತ್ತುಂ
ದಿವಿಜೇಂದ್ರಸ್ತುತ್ಯನಾದಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ ೪೯೦

ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ ನೀಳವಾ
ಗಸದೊಳ್ ಕಾಳಸೆಗೊಂಡುದೆಂಬಿನೆಗಮದ್ರೀಂದ್ರಂಗಳಂ ತಂದು ಕೀ
ಲಿಸಿದಂ ನಿಶ್ಚಳಮಪ್ಪಿನಂ ವಸುಧೆಗಾ ಕಲ್ಪಾಂತಮೆಂಬಂತು ಮಾ
ಡಿಸಿದಂ ಜೈನಗೃಹಂಗಳಂ ಪಲವುಮಂ ಸಂಸಾರ ಸಾರೋದಯಂ ೪೯೧

ಅಂತು ಚಕ್ರನಾಥಂ ತನ್ನ ಮಾಡಿಸಿದ ಚೈತ್ಯಾಲಯಂಗಳೊಳ್ ಆದಿ ಭಟ್ಟಾರಕಾದಿಯಾಗೆ ಭವಿಷ್ಯತ್ತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ ಮಾಣಿಕ್ಯದೇವರೆಂದು ಕೊಂಡಾಡಿ, ತತ್ಪೂಜಾ ಕರಣ ಪುಣ್ಯವಾಸರಂಗಳೊಳ್ ಉಪವಾಸ ನಿರತಂ ಗಂಧೋದಕಂಗಳಿಂದಭಿಷೇಕಂಗೆಯ್ದು ಅರ್ಚಿಸಿ ಅನೇಕ ಸ್ತವನಂಗಳಿಂ ಸ್ತುತಿಯಿಸಿ ಭಕ್ತಿಯಂ ಮೆಱಿದಂ. ಮತ್ತಂ ಸಾಕೇತಮಂ ಬಳಸಿದ ಕನಕ ಪ್ರಾಕಾರದ ಬಾಗಿಲ್ವಾಡಂಗಳೊಳಂ ರಾಜಮಂದಿರದ ಗೋಪುರ ದ್ವಾರಂಗಳೊಳಂ ತನ್ನ ಪುರದ ಪೋಪ ಬರ್ಪ ರಾಜಮಾರ್ಗದೊಳಂ ಚತುರ್ವಿಂಶದರ್ಹತ್ಪ್ರತಿಮಾ ವಿರಾಜಮಾನ ಹೇಮ ದಾಮ ವಿಳಂಬಿತ ಮಣಿ ಘಂಟಾ ಸಮನ್ವಿತ ವಂದನ ಮಾಲೆಗಳಂ

ಪುಗೆ ಪೊಱಮಡೆ ತನ್ನ ಮನಂ
ಬುಗುವಂತಿರೆ ತನ್ನ ಮಕುಟ ಶಿಖರಮನವು ನೆ
ಟ್ಟಗೆ ತಾಗುವಂತುವಮಾಗಿರೆ
ಜಗದಧಿಪನುದಾತ್ತ ಭಕ್ತಿಯಿಂ ಮಾಡಿಸಿದಂ ೪೯೨

ತನಗೆ ಭರತೇಶ್ವರಂ ವಂ
ದನಾರ್ಥದಿಂ ಸಮೆದ ಮಾಲೆ ಭರತದೊಳದು ವಂ
ದನ ಮಾಲೆಯೆಂಬ ಪೆಸರಂ
ತನಗೆ ಪೆಸರ್ಮಾಡಿ ಕೂಡೆ ಸಂದಪುದಿನ್ನುಂ ೪೯೩

ಪ್ರಿಯಧರ್ಮನೃಪತಿಯಂ ನೋ
ಡಿ ಯಥಾ ರಾಜಾ ತಥಾ ಪ್ರಜಾ ಎಂಬ ವೊಲೋ
ಜೆಯೊಳೋಜೆಗೊಂಡು ಧರ್ಮ
ಪ್ರಿಯರಾದರ್ ಪ್ರಜೆಗಳುಂ ಸಮಸ್ತಾವನಿಯೊಳ್ ೪೯೪

## ೧೩ ಆದಿತೀರ್ಥಕರ ಪರಿನಿರ್ವಾಣಂ

ಮತ್ತಿತ್ತ ವೃಷಭ ನಾಥನುಂ, ಎಣ್ಬತ್ತು ನಾಲ್ವರ್ ಗಣಧರದೇವರುಂ, ಸಕಳ ಪೂರ್ವ ಧರರುಂ, ಶಿಕ್ಷಕರುಂ, ಅವಧಿ ಜ್ಞಾನಿಗಳುಂ ಕೇವಳ ಜ್ಞಾನಿಗಳುಂ ವಿಕ್ರಿಯರ್ಧಿ ಪ್ರಾಪ್ತರುಂ ಮನಃಪರ್ಯಯ ಜ್ಞಾನಿಗಳುಂ ವಾದಿಗಳುಂ ಮೊದಲಾಗೆ ಮುನಿಪತಿಗಳುಂ, ಆರ್ಯಿಕಾಗಣಮುಂ ಶ್ರಾವಕರುಂ ಶ್ರಾವಕಿಯರುಂ ಚತುರ್ವಿಧ ದೇವನಿಕಾಯಮುಂ ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ ಬೆರಸು ಧರ್ಮಾಮೃತ ವರ್ಷದಿಂ ಧರ್ಮಕ್ಷೇತ್ರಂಗಳೊಳ್ ಭವ್ಯಸಸ್ಯಂಗಳನನೇಕ ಬ್ರತ ಫಲ ಭರ ವಿನತಂಗಳ್ ಮಾಡಿ, ಪದಿನಾಲ್ಕು ದಿವಸದಾಯುಷ್ಯಮುಂಟೆನೆ ಕೈಳಾಸ ಪರ್ವತದ ಸಿದ್ಧ ಕೂಟದೊಳ್ ಪೌಷ್ಯ ಮಾಸದ ಪೌರ್ಣಮಿಾದಿನದಂದು ಯೋಗ ಪಲ್ಯಂಕಾಸನದಿಂದಂ ಯೋಗ ನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ. ಅನ್ನೆಗಮಿತ್ತಲ್ ಭರತಾದಿಗಳನಿಬರುಂ ತಂತಮ್ಮ ಕಂಡ ಕನಸುಗಳಂ ಪ್ರಭಾತ ಸಮಯದೊಳ್ ಪುರೋಹಿತಂಗಱಿಪಿದೊಡೆ, "ನಿಮ್ಮ ಕಂಡ

ಕನಸುಗಳಿವು ಪೇೞಪೇೞತೇ
ನನಂತ ಗುಣ ನಿಳಯನಾದಿದೇವಂ ಪಲಬರ್
ಮುನಿ ಪತಿಗಳ್ ವೆರಸಡರ್ದಪ
ನನಶ್ವರಾಸ್ಪದಮನೆಂಬುದಂ ಸೂಚಿಸುಗುಂ" ೪೯೫

ಎಂಬುದುಂ, ಆದಿಭಟ್ಟಾರಕ ವ್ಯತಿಕರ ಸ್ಥಿತಿಯನಾನಂದನೆಂಬಂ ಧರ್ಮ ಕಾರ್ಯನಿಮಿತ್ತಂ ಬಂದಱಿಪಿದೊಡೆ, ಭರತೇಶ್ವರ ಚಕ್ರವರ್ತಿ ವಿನೇಯ ಜನ ಸಮೇತಂ ಬಂದು ಭಟ್ಟಾರಕರಂ ಮೂಱು ಸೂೞ್ ಬಲವಂದು ಕೃತಾಭೀಷ್ಟ ಸ್ತವನ ಪರಂ ಮಹಾ ಮಹಮೆಂಬ ಮಹಾ ಪೂಜೆಯಂ ಮಹಾ ವಿಭೂತಿಯಿಂ ಪದಿನಾಲ್ಕುದಿವಸಂಬರಂ ನಿರಂತರಂ ಮಾಡೆ, ವೃಷಭನಾಥಂ ಖಂಡಿತ ಘಾತಿ ಚತುಷ್ಕಂ ಶುಕ್ಲ ಧ್ಯಾನ ಪರಾಯಣಂ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ, ಸ್ವಕೀಯ ಚರಮ ಸಮಯದೊಳ್ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ, ಬೞಯಂ ಕ್ಷಾಯಿಕ ಸಮ್ಯಕ್ತ್ವಾನಂತ ಜ್ಞಾನ ದರ್ಶನ ವೀರ್ಯ ಸೂಕ್ಷ್ಮಾವಗಾಹಾ ಗುರುಲಘುತಾವ್ಯಾಬಾಧಂಗಳೆಂಬ

[ಚೂಡಾ

ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ ಸುಖಸಾದ್ಭೂತನುಂ ಲೋಕ
ಮಣಿಯುಂ ಶಶ್ವತ್ತ್ರಿಲೋಕೀ ಪ್ರಣುತನುಮತಿ ವಿಖ್ಯಾತನುಂ ಭವ್ಯ ಚಿಂತಾ
ಮಣಿಯುಂ ತಾನಾಗಿ ತನ್ನೊಳ್ ನೆಱೆಯೆ ಪಡೆದು ತನ್ನಂದಮಂ ತಾನೆ ತನ್ನ
ತ್ತಣಿನಾದಿ ಬ್ರಹ್ಮನೇಕ ಕ್ಷಣದೊಳೆ ಪರಮ ಬ್ರಹ್ಮ ಸದ್ಮಕ್ಕೆ ಸಂದಂ ೪೯೬

ದೊರೆಕೊಂಡ ಮಾಘ ಮಾಸಂ
ಬರೆ ಕೃಷ್ಣ ಚತುರ್ದಶೀ ದಿನಂ ಸಮನಿಸೆ ತ
ತ್ಪುರು ದೇವಂ ಮುಕ್ತಿ ವಧೂ
ವರತೆಯನಭಿಜಿನ್ಮುಹೂರ್ತದೊಳ್ ಕೈಕೊಂಡಂ ೪೯೭

## ಪರಿನಿರ್ವಾಣ ಕಲ್ಯಾಣಂ

ಅಂತು ವೃಷಭೇಶ್ವರಂ ತ್ರಿಲೋಕ ಶಿಖರಿ ಶೇಖರಾಯಮಾನಮೆನಿಸಿದೀಷತ್ ಪ್ರಾಗ್ಭಾರದ ಮೇಗಣ ಘನೋದಧಿ ಘನಾನಿಳ ತನುವಾತ ತ್ರಿತಯ ಭಾಗದೊಳ್ ಅವ್ಯಾಬಾಧನುಮನಂತ ಸುಖಾಂಬುಧಿ ನಿಳಯನುಮಾಗಿ ನೆಲಸಿರ್ದಂ. ಇತ್ತ

ಚತುರ್ವಿಧ ದೇವ ನಿಕಾಯಮುಂ ಪುರುದೇವ ಪರಿನಿರ್ವಾಣ ಮಹಾ ಕಲ್ಯಾಣ ಪೂಜಾ ನಿರ್ವರ್ತನಾಭಿಲಾಷಿಯಾಗಿ ನಿರ್ವಾಣ ಭೂಮಿಯನನೇಕ ಸುರಭಿ ಸುರತರು ಕುಸುಮ ಸುಗಂಧಾಕ್ಷತಂಗಳಿಂದಮರ್ಚಿಸಿ,

ಸ್ಫುರಿತಾಗ್ನೀಂದ್ರ ಕಿರೀಟ ಕೋಟಿ ಮಣಿ ಸಂಭೂತಾಗ್ನಿ ಯಿಂ ಚಂದನಾ
ಗುರು ಕರ್ಪೂರ ಲವಂಗ ಕುಂಕುಮ ಘೃತ ಕ್ಷೀರಾನಲ ದ್ರವ್ಯ ಸಂ
ಕರ ಸಂಪರ್ಕದೊಳೆಯ್ದೆ ಪೆರ್ಚಿದುದಱಿಂ ರೂಪಾಂತರಕ್ಕೊಯ್ಯುದ್ದ ಭಾ
ಸುರದಿಂ ತತ್ಸುರ ರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ ೪೯೮

ಅಂತರ್ಚಿಸಿ, ಭಗವಚ್ಛರೀರ ಹೋಮ ಕುಂಡ ದಕ್ಷಿಣ ಭಾಗದೊಳ್ ಗಣಧರ ಶರೀರ ಸಂಸ್ಕಾರ ಕುಂಡಮನಿಱಿಸಿ, ತದಪರ ದಿಗ್ಭಾಗದೊಳ್ ಅನಗಾರ ಕೇವಳಿ ಹುತಾಶನ ಕುಂಡಮಂ ಸ್ಥಾಪನಂಗೆಯ್ದು, ಆ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯಾಭಿಧಾನ ಕುಂಡಂಗಳಿಂ ಕೊಂಡು ಲಲಾಟ ಕಂಠ ಭುಜ ಶಿಖರಯುಗಳ ಹೃದಯ ಪ್ರದೇಶದೊಳಂ,

ಭೂತಿಗಳೊಳ್ ಕಲ್ಯಾಣ ವಿ
ಭೂತಿಗಳೆಮಗಕ್ಕೆ ಬೇಗಮಿನ್ನೆಂದು ಮನೋ
ಜಾತ ಮಹೋತ್ಸಾಹರ್ ತ
ದ್ಭೂತಿಯನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್ ೪೯೯

ಅಂತು ತ್ರಿಪುಂಡ್ರಂಗಳನಿಟ್ಟೊಸಗೆಯಿಂದೊಸಗೆ ಮಱುಳ್ಗೊಂಡು,

ಆನಂದ ನಾಟಕಂ ಪರ
ಮಾನಂದಮನಂದು ಮಾಡೆ ದಿವಿಜಾಧೀಶರ್
ನಾನಾ ಪ್ರಕಾರದಿಂದಮ
ದೇನೆಂಬುತ್ಸವಮನಱ್ತಿಯಿಂ ಮಾಡಿದರೋ ೫೦೦

ಭರತ ಶೋಕಾವೇಗಂ

ಆಗಳಾತ್ಮೀಯ ಗುರು ವಿಯೋಗ ಶೋಕಾನಳ ದಹ್ಯಮಾನ ಮಾನಸನಾಗಿರ್ದ ಭರತ ಪತಿಯ ಶೋಕಾವೇಗಮಂ ವೃಷಭಸೇನ ಗಣಾಗ್ರಣಿಗಳಿಂತೆಂದಾಱಿಸಿದರ್ :

"ಖಳ ಕರ್ಮಾಷ್ಟಕಮಂ ಪಡಲ್ವಡಿಸಿ ಸಂಸಾರಾಬ್ಧಿಯಂ ದಾಂಟಿ ನಿ
ಶ್ಚಳ ಸೌಖ್ಯಾಸ್ಪದಮಂ ತ್ವದೀಯ ಜನಕಂ ಕೈಕೊಂಡೊಡೀ ದೇವ ಸಂ
ಕುಳಮಿಂದ್ರಂಬೆರಸಾಡಿದಪ್ಪುದಿದಱೊಳ್ ನೀಂ ರಾಗಿಸಲ್ ತಕ್ಕು ದೇ
ಕೊಳಕೊಳ್ವಯ್ ಜಡರಂತೆ ಶೋಕ ರಸಮಂ ಷಟ್ಖಂಡ ಧಾತ್ರೀಶ್ವರಾ ೫೦೧

ನಿನಗೆ ವೃಷಭೇಶ್ವರಂ ಲೋ
ಚನ ಗೋಚರನಿನ್ನೆವರೆಗಮಿಾಗಳ್ ನಿಂದಂ
ಮನು ಕುಲ ಲಲಾಮ ನೆಟ್ಟನೆ
ಮನದೊಳ್ ಕಡು ಸಾರೆಯಲ್ತೆ ಮುನ್ನಿಂದೀಗಳ್ ೫೦೨

ಭರತೇಶ್ವರ ನಾಮಪ್ಪೊಡೆ
ಚರಮಾಂಗರುಮಖಿಳ ಮಲ ವಿಲೇಪನದಿಂದಂ
ಪುರು ಪರಮೇಶ್ವರನೆಯ್ದಿದ
ಪರಮ ಪದಂ ನಮಗಮದುವೆ ನೆಲೆ ಪೆಱತುಂಟೇ ೫೦೩

ಅದಲ್ಲದೆಯುಂ ಜೀವಂಗಳ್ ಶುಭಾಶುಭ ಕರ್ಮ ಪ್ರೇರಿತಂಗಳಾಗಿ ಚತುರ್ಗತಿ ಸಂಸಾರಂಗಳೊಳ್ ನಾನಾ ಶರೀರೋಪಾದಾನ ಪರಿತ್ಯಜನ ಪುರಸ್ಸರಂ ಪರಿಭ್ರಮಿಸುಗುಂ. ಅದು ನಮ್ಮಿನಿಬರ ಭವಾವಳಿಯಿಂದೆ ನಮಗನುಭೂತ ಪೂರ್ವಂ. ಭವದೀಯ ಜನಕಂ ಪುರು ಪರಮೇಶ್ವರಂ,



[ವಜ್ರಜಂಘಂ

ಭೋಗ ಕಾಂಕ್ಷೆಯೊಳ್ ಜಯವರ್ಮಂ ಬಱಿಕೆ ಮಹಾಬಳಂ ಲಲಿತಾಂಗಂ
ಭೋಗ ಭೂಮಿಜಂ ಶ್ರೀಧರ ದೇವಂ ಸುವಿಧಿ ನರಾಧಿಪನಚ್ಯುತೇಂದ್ರಂ
ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕೈಸಿದ ವಜ್ರನಾಭಿ
ಯಾಗಿ ಸರ್ವಾರ್ಥ ಸಿದ್ಧಿಯೊಳ್ ಪುಟ್ಟಿ ಬಂದಿಲ್ಲಿ ತಾನಾದಿ ದೇವನಾದಂ ೫೦೪

ಮತ್ತಂ, ಧನಶ್ರೀಯುಂ ನಿರ್ನಾಮಿಕೆಯುಂ ಸ್ವಯಂಪ್ರಭಾದೇವಿಯುಂ ಶ್ರೀಮತಿಯುಂ ಆರ್ಯೆಯುಂ ಸ್ವಯಂಪ್ರಭದೇವನುಂ ಕೇಶವ ಮಹೀಶನುಂ ಅಚ್ಯುತ ಪ್ರತೀಂದ್ರನುಂ ಧನದತ್ತನುಂ ಅಹಮಿಂದ್ರನುಂ ಆಗಿ ಬಂದೀಗಳಾದಿ ದಾನ ತೀರ್ಥ ಪ್ರವರ್ತಕ ಶ್ರೇಯಾಂಸನಾದಂ ; ಅತಿಗೃದ್ಧ ಮಹೀಶನುಂ

ನಾರಕನುಂ ವ್ಯಾಘ್ರನುಂ ಈಶಾನ ಕಲ್ಪಜನುಂ ಮತಿವರ ಮಂತ್ರಿಯುಂ ಅಧೋಗ್ರೈವೇಯಕ ದಿವಿಜನುಂ ಸುಬಾಹು ಮಹೀಪತಿಯುಂ ಸರ್ವಾರ್ಥ ಸಿದ್ಧೀಶ್ವರನುಂ ಅಹಮಿಂದ್ರನುಮಾಗಿ ಬಂದು ನೀನೀಗಳ್ ಭರತೇಶ್ವರ ಚಕ್ರವರ್ತಿ ಯಾದಯ್; ನಾರಕನುಂ ಪ್ರೀತಿವರ್ಧನ ಸೇನಾನಾಯಕನುಂ ಭೋಗ ಭೂಮಿ ಜನುಂ ಕನಕ ಪ್ರಭಾಮರನುಂ ಲಲಿತಾಂಗದೇವ ಸಾಮಾನಿಕನುಂ ಪ್ರಭಂಕರನುಂ ವಜ್ರಜಂಘ ಸೇನಾಧೀಶ್ವರನಕಂಪನನುಂ ಅಧೋ ಗ್ರೈವೇಯಕನುಮಹಮಿಂದ್ರ ನುಂ ಮಹಾಬಾಹು ಮಹೀಪತಿಯುಂ ಸರ್ವಾರ್ಥಸಿದ್ಧಿ ಜನುಮಾಗಿ ಬಂದು ಋಷಭೇಶ್ವರ ತನೂಜನೀಗಳ್ ಬಾಹುಬಲಿ ಕುಮಾರನಾದಂ; ದಿವಿಜನುಂ ಪ್ರೀತಿವರ್ಧನ ಮಂತ್ರಿಯುಂ ಭೋಗ ಭೂಮಿಜನುಂ ಕನಕ ಪ್ರಭಾಮರನುಂ ವಜ್ರಜಂಘ ಪುರೋಹಿತನಾನಂದನುಂ ಅಧೋಗ್ರೈವೇಯಕನುಮಹಮಿಂದ್ರನುಂ ಪೀಠನುಂ ಸರ್ವಾರ್ಥಸಿದ್ಧೀಶನುಮಾಗಿ ಬಂದು ನಾನೀಗಳ್ ವೃಷಭನಾಥಂಗೆ ಪ್ರಥಮ ಗಣಧರನಾದೆಂ.

ಭವ ವಾರಾಶಿಯೊಳಿಂತು ಜೀವನಿವಹಂ ಬರ್ದುಂತ್ತು ಮಿರ್ಕುಂ ಮಹೋ
ತ್ಸವಮಲ್ತೇ ಗುರುವಿಂತು ದಾಂಟಿದೊಡಿದಂ ಬೇಡೀ ವಿಷಾದಂ ನಿರ
ಸ್ತ ವಿವೇಕಂಬೊಲಿದೇಕೆ ಮೋಹಿಸಿದಪಯ್ ನೀಂ ಮಾಣ ಶಕ್ರಂಗೆ ವ
ಸ್ತುವಿವರ್ ನಿನ್ನವೊಲಾರ್ ಪೆಜರ್ ಭುವನದೊಳ್ ಷಟ್ಖಂಡಧಾತ್ರೀಶ್ವರಾ" ೫೦೫

ಎನೆ ದಾವ ದಗ್ಧ ಗಿರಿ ನೂ
ತನ ಜಳದ ಜಳಂಗಳಿಂದಮಾಱುವ ವೋಲ್ ಭೋಂ
ಕೆನೆ ಭರತನನಾಱಿಸಿದಂ
ಮುನಿ ವಿನುತ ಗಣಾಧಿನಾಥ ವಚನಾಮೃತದಿಂ ೫೦೬

## ೧೪ ಭರತ ದೀಕ್ಷಾಗ್ರಹಣಂ; ಭರತಪುರುತನಯ ಪರಮ ಸುಖಾವಾಪ್ತಿ

ಅಂತಪಗತ ಗುರು ಶೋಕ ವೇಗನಾಗಿ ಗಣಧರ ಚರಣ ಸರಸಿಜಂಗಳ್ಗೆಱಗಿ ತನ್ನ ಭೋಗತೃಷ್ಣೆಯಂ ತಾನೆ ತನ್ನ ಮನದೊಳ್ ನಿಂದಿಸುತ್ತುಂ ಮುಕ್ತ್ಯ ನುರಕ್ತ ಚಿತ್ತನಾಗುತ್ತುಂ ಬಂದಯೋಧ್ಯಾಪುರಮಂ ಪೊಕ್ಕು, ಕೆಲವು ದಿವಸ ಮಿರ್ದು, ಒಂದು ದಿವಸಂ ಪುರು ಪರಮೇಶ್ವರನ ದೂತನಂ ಕಾಣ್ಬವೊಲ್ ಕೆನ್ನೆಯ ನರೆಯಂ ಕಂಡು,

"ಹೇಯಂ ಸಾಮ್ರಾಜ್ಯಮುಪಾ
ದೇಯಂ ಪ್ರವ್ರಜ್ಯಮೆ"ಂದು ಮಾಣದೆ ರಾಜ್ಯ
ಶ್ರೀಯಂ ಕೊಟ್ಟಂ ಮುಕ್ತಿ
ಶ್ರೀಯಂ ಬಗೆದರ್ಕಕೀರ್ತಿಗಾ ಭರತೇಶಂ ೫೦೭

ಅಂತು ಪರಿತ್ಯಕ್ತ ಸಾಮ್ರಾಜ್ಯನಾಗಿ ಕೈಲಾಸ ಶೈಲಕ್ಕೆ ಪೋಗಿ ಭಗವದಾದಿ ಭಟ್ಟಾರಕರ ನಿರ್ವಾಣ ಭೂಮಿ ಸಮೀಪ ಸ್ಥಿತ ವಿಶಾಲ ಸ್ಫಟಿಕ ಶಿಲಾತಳಾರೂಢ ನುತ್ತರಾಭಿಮುಖನಾಗಿ ಸಿದ್ಧ ಭಕ್ತಿಪೂರ್ವಕಂ ತ್ರಿಜಗದ್ಗುರುವೇ ಗುರುವೆಂದು ತತ್ಪದ ಸರಸಿಜ ಧ್ಯಾನ ಪರಾಯಣನಾಗಿ,

ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃಪರ್ಯಯ
ಜ್ಞಾನಂ ಪುಟ್ಟಿದುದಂತು ಪುಟ್ಟಿದ ಬಳಿಕ್ಕಂತರ್ಮುಹೂರ್ತಕ್ಕೆ ಭ
ವ್ಯಾನಂದ ಪ್ರದಮಿಂದ್ರವೃಂದ ಕೃತ ಕಲ್ಯಾಣಾಸ್ಪದಂ ಕೇವಲ
ಜ್ಞಾನಂ ಪುಟ್ಟಿದುದಿಂತು ಭವ್ಯತೆ ಜಗಕ್ಕಾಶ್ಚರ್ಯಮಾಯಿತ್ತಶನಾ ೫೦೮

ನರಲೋಕವೊಂದೆ ಮುನ್ನಿನ
ಚರಣಾಬ್ಜಕ್ಕೆಱಗೆ ನೆಗಱ್ದ ಕೇವಳ ಬೋಧಂ
ದೊರೆಕೊಳೆ ಸುರನರಲೋಕಂ
ಚರಣಾಬ್ಜಕ್ಕೆಱಗೆ ಭರತಯತಿಪತಿ ನೆಗಱ್ದಂ ೫೦೯

ಅಂತು ದೇವ ಮಾನವ ಪರಿಷತ್ಪರಿವೃತನಾಗಿ ನಾನಾ ವಿಧ ಧರ್ಮಕ್ಷೇತ್ರಂಗಳೊಳೊಂದು ಲಕ್ಕೆ ಪೂರ್ವಂಬರಂ ಧರ್ಮಾಮೃತಾಂಬು ಸೇಕದಿಂ ವಿನೇಯ ಜನ ಸಸ್ಯ ಸಂಪತ್ಪರಂಪರೆಯಂ ಮಾಡಿ, ಕೈಳಾಸ ಶೈಲ ಶಿಖರಾಲಂಕಾರ ನಿರುದ್ಧ ಯೋಗನುಂ ಅಪಗತ ಯೋಗ ಗುಣಸ್ಥಾನನುಂ ಚತುರ್ಥ ಧ್ಯಾನಾನಳ ದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ,

ಪರಮ ಶ್ರೀ ಸಂತತಾವಾಸದೊಳಖಿಳ ಸುಖ ಸ್ವಚ್ಛ ಸಂಪನ್ನ ತೋಯಾ
ಕರದೊಳ್ ಶಶ್ವದ್ಗುಣಾಂಭೋರುಹ ವಿಳಸನ ವಿಭ್ರಾಜಿಯೊಳ್ ಸಿದ್ಧ ಹಂಸೋ
ತ್ಕರಲೀಲಾ ರಮ್ಯದೊಳ್ ಸಂದಮೃತ ನಿಳಯ ನಿರೇಜಿನೀ ಷಂಡದೊಳ್ ಸೌಂ
ದರ ಕೇಳೀ ಹಂಸನಾದಂ ಸುಕವಿ ಜನ ಮನೋ ಮಾನಸೋತ್ತಂಸ ಹಂಸಂ ೫೧೦

ಭರತ ಯತಿ ಪತಿಯ ತದನಂ
ತರದೊಳ್ ತದ್ವೃಷಭ ಸೇನ ಗಣನಾಥ ಪುರ
ಸ್ಸರ ಪುರುತನಯರ್ ಕ್ರಮದೊಳ್
ಪರಮ ಸುಖಾಸ್ಪದಮನನಿಬರುಂ ಕೈಕೊಂಡರ್ ೫೧೧

## ೧೫ ಉಪಸಂಹಾರಂ

ಶಕ ವರ್ಷಮೆಂಟು ನೂಱ
ಕ್ಕೆ ಕಡೆಯೊಳಱುವತ್ತು ಮೂಱು ಸಂದಂದು ಜಗತ್
ಪ್ರಕಟ ಪ್ಲವ ಸಂವತ್ಸರ
ದ ಕಾರ್ತಿಕಂ ಮುದಮನೀಯೆ ನಂದೀಶ್ವರದೊಳ್ ೫೧೨

ಸಿತ ಪಕ್ಷದ ಪಂಚಮಿ ದಿನ
ಪತಿ ವಾರಂ ಶುಭದ ಮೂಲ ನಕ್ಷತ್ರದೊಳ
ನ್ವಿತವಾಗೆ ನೆಗಳ್ದುದೀ ಮತ್
ಕೃತಿ ಜಗದೊಳ್ ಪುದಿದು ಸಾಗರಾಂತ ಕ್ಷಿತಿಯಂ ೫೧೩

ತ್ರಿದಶ ಸ್ತುತ್ಯಮಿದಾದಿ ದೇವ ಚರಿತಂ ಕರ್ಣಾಮೃತ ಸ್ಯಂದಿಯ
ಕ್ಕಿದು ಭವ್ಯಾವಳಿಗೆಂದು ಪೇೞ್ಸೆ ಬುಧರ್ ಸ್ವರ್ಗಾಪವರ್ಗಕ್ಕಮಾ
ಸ್ಪದಮಪ್ಪಾದಿ ಪುರಾಣ ವಸ್ತುಕೃತಿಯಂ ಪೇೞ್ದಿಂ ಬೆಡಂಗಪ್ಪ ಮಾ
ರ್ಗದೊಳಂ ದೇಸೆಯೊಳಂ ಪೊದಳ್ದಿಸೆವಿನಂ ಸಂಸಾರ ಸಾರೋದಯಂ ೫೧೪

ರಸ ಭಾವೋಪೇತ ಧರ್ಮಾಮೃತ ರಸ ಮಯದೊಳ್ ಘೋರ ಸಂಸಾರ ನಾನಾ
ವ್ಯಸನ ವ್ಯುಚ್ಛಿತ್ತಿಯೊಳ್ ಧಾರ್ಮಿಕ ಜನ ಜನಿತಾನಂದದೊಳ್ ಹೃದ್ಯ ವಿದ್ಯಾ
ರಸದೊಳ್ ಸಂಸಾರ ಸಾರೋದಯ ವಿರಚಿತದೊಳ್ ವಾಗ್ವಧೂಮುದ್ರೆಯೊಳ್ ಮು
ದ್ರಿಸಿ ನಿಂದತ್ತಾದಿ ತೀರ್ಥೇಶ್ವರನ ಚರಿತದೊಳ್ ವಾಕ್ಯ ಮಾಣಿಕ್ಯ ಕೋಶಂ ೫೧೫

ಭಾಸುರ ದೇವ ಕೋಟಿ ವಿಭುವಪ್ಪ ಮಹರ್ಧಿಕನಪ್ಪ ವಾಸವಂ
ಗಾಸನ ಕಂಪಮಂ ಪಡೆದು ತೀರ್ಥಕರತ್ವಮನಿತ್ತನಶ್ವರಾ
ವಾಸಮನೆಯ್ದಿಸಲ್ಕಿದುವೆ ಷೋಡಶ ಭಾವನೆಯಿಂದೆ ಷೋಡಶಾ
ಶ್ವಾಸಮನೆಯ್ದೆ ಭಾವಿಸುಗೆ ಭವ್ಯರನಂತ ಸುಖಾಭಿಲಾಷಿಗಳ್ ೫೧೬

ಇದು ದೇವೇಂದ್ರ ಮುನೀಂದ್ರ ವಂದ್ಯ ಪರಮ ಜಿನೇಂದ್ರ ಮುಖ ಚಂದ್ರ
ವಾಕ್ಚಂದ್ರಿಕಾ ಪ್ರಸರ ಪ್ರಸಾದೋದೀರ್ಣ ಸೂಕ್ತಿ ಕಲ್ಲೋಲ
ಮಾಲಾಕೀರ್ಣ ಕವಿತಾ ಗುಣಾರ್ಣವ ಪ್ರಣೀತಮ
ಪ್ಪಾದಿಪುರಾಣಂ ಸಂಪೂರ್ಣಂ

---

# ಟಿಪ್ಪಣಿಗಳು

ಯಾವ ಪುಟದಲ್ಲಿ ವಿವರಣೆ ಕೊಟ್ಟಿದೆಯೆಂಬುದನ್ನು [ಪು. xx] ಎಂದು ಮುಂತಾಗಿ ರೋಮನ್ ಅಂಕಿಯಲ್ಲಿ ಪುಟಸಂಖ್ಯೆ ಹಾಕಿ ಸೂಚಿಸಿದೆ. ಕನ್ನಡ ಅಂಕಿ ಆ ಮಾತು ಬರುವ ಪದ್ಯ ಅಥವಾ ವಚನ ಸಂಖ್ಯೆಯನ್ನು ಸೂಚಿಸುತ್ತದೆ. ವಚನಕ್ಕೆ ಕೊಟ್ಟಿರುವ ಸಂಖ್ಯೆ ಆ ಸಂಖ್ಯೆಯ ಪದ್ಯ ಆದಮೇಲೆ ಬರುವ ವಚನವನ್ನು ಸೂಚಿಸುತ್ತದೆ.

## ಅ

ಅಂಗ ೪೪೬ ವ ಜೈನಶಾಸ್ತ್ರ [ಪು. xx]

ಅಚ್ಯುತಕಲ್ಪ ೫೪ ವ ೧೬ನೆಯ ಸ್ವರ್ಗ [ಪು. lii]

ಅಣಿಮಾದ್ಯಷ್ಟಗುಣ ೪೩ (ಗುಣ ನೋಡಿ)

ಅಣುವ್ರತ ೪೯ ವ [ಪು. xliii]

ಅಧರ್ಮ ೨೭೫ ವ ಷಡ್ದ್ರವ್ಯಗಳಲ್ಲಿ ಒಂದು [ಪು. xxvii]

ಅನಗಾರ ಕೇವಳಿ ೪೯೮ ವ ಕೇವಲಜ್ಞಾನ ಹೊಂದಿದವನು ಕೇವಲಿ. ಕೇವಲಿಗಳೆಲ್ಲರೂ ಅನಗಾರಿಗಳೇ, ಎಂದರೆ ಮನೆತೊರೆದವರೇ. ಆದರೂ ಅವರನ್ನು ತೀರ್ಥಂಕರ ಕೇವಲಿ, ಗಣಧರ ಕೇವಲಿ ಮತ್ತು ಅನಗಾರ ಕೇವಲಿಗಳೆಂದು ಮೂರು ಬಗೆಯಾಗಿ ವಿಂಗಡಿಸುತ್ತಾರೆ. ತೀರ್ಥಂಕರರೂ ಗಣಧರರೂ ಅಲ್ಲದ ಉಳಿದ ಸಾಮಾನ್ಯ ಕೇವಲಿಗಳೇ ಅನಗಾರ ಕೇವಲಿಗಳು.

ಗೃಹಸ್ಥಾಶ್ರಮವನ್ನು ಪ್ರವೇಶಿಸದೆ ಬ್ರಹ್ಮಚರ್ಯಾವಸ್ಥೆಯಲ್ಲೇ ದೀಕ್ಷೆಪಡೆದು ಕೇವಲ ಜ್ಞಾನ ಹೊಂದಿದವರು ಅನಗಾರ ಕೇವಲಿಗಳು—ಎಂದೂ ವಿವರಿಸುವುದುಂಟು.

ಅನಶ್ವರಾಸ್ಪದ ೪೯೫ ಶಾಶ್ವತ (ಸುಖ) ಸ್ಥಾನ, ಮುಕ್ತಿ.

ಅನಂತಚತುಷ್ಟಯ ೨೫೭ ಅನಂತ ಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ—ಈ ನಾಲ್ಕು.

ಅನುಪ್ರೇಕ್ಷೆ ೩೩, ದ್ವಾದಶಾನುಪ್ರೇಕ್ಷೆ ೯೫ ವ [ಪು. xxxvii]

ಅಂತರಾಯ ಪಂಚಕ ೨೫೬ ವ ಐದು ವಿಘ್ನಗಳು: ೧ ದಾನಾಂತರಾಯ—ದಾನಕ್ಕೆ ವಿಘ್ನಕಾರಿಯಾದ ಕರ್ಮ. ೨ ಲಾಭಾಂತರಾಯ—ಲಾಭಕ್ಕೆ ವಿಘ್ನಕಾರಿಯಾದ ಕರ್ಮ. ೩ ಭೋಗಾಂತರಾಯ—ಭೋಗಕ್ಕೆ ವಿಘ್ನಮಾಡುವ ಕರ್ಮಗಳು. ೪ ಉಪಭೋಗಾಂತರಾಯ—ಅನೇಕ ವೇಳೆ ಭೋಗಿಸುವ ವಸ್ತುಗಳ ಸೇವನೆಗೆ ಉಪಭೋಗವೆಂದು ಹೆಸರು. ಉಪಭೋಗಕ್ಕೆ ವಿಘ್ನಕಾರಿಯಾದ ಕರ್ಮ

ಉಪಭೋಗಾಂತರಾಯ. ೫ ವೀರ್ಯಾಂತರಾಯ—ಅನಂತವೀರ್ಯ ವ್ಯಕ್ತವಾಗದಂತೆ ತಡೆಯುವ ಕರ್ಮ.

ಅಭವ್ಯ ೨೩ ವ [ಪು. lv]

ಅರ್ಹತ್-ಸಿದ್ಧ-ಆಚಾರ್ಯ-ಉಪಾಧ್ಯಾಯ-ಸರ್ವಸಾಧುಗಳ್ ೬ ಪಂಚ ಪರಮೇಷ್ಠಿಗಳು. [ಪು. xliv]

ಅವಧಿಬೋಧ ೮೫ ವ ಅವಧಿಜ್ಞಾನ [ಪು. xlii]

—ಜ್ಞಾನಿ ೪೯೪ ವ ಅವಧಿಜ್ಞಾನವುಳ್ಳವನು.

ಅವಸರ್ಪಿಣಿ ೯೬ ವ ಕಾಲವಿಭಾಗ [ಪು. xxviii]

ಅಷ್ಟಮಂಗಳ ೧೨೧ ವ ಛತ್ರ, ಧ್ವಜ, ಕಲಶ, ಚಾಮರ, ಸುಪ್ರತಿಷ್ಟಕ (ಪೂಜಾದ್ರವ್ಯಗಳನ್ನಿಡುವ ಒಂದು ಬಗೆಯ ಪಾತ್ರೆ), ಭೃಂಗಾರ (ಗಿಂಡಿ), ಕನ್ನಡಿ, ಬೀಸಣಿಗೆ—ಈ ಎಂಟು ಮಂಗಳ ವಸ್ತುಗಳು.

ಅಹಮಿಂದ್ರ ೯೧ ವ ಕಲ್ಪಾತೀತ ವಿಮಾನಗಳ ದೇವತೆ [ಪು. lii]

## ಆ

ಆಚಾರ ೩ ಇವು ಐದು: ೧ ದರ್ಶನಾಚಾರ—ತೀವ್ರವಾದ ಮತ್ತು ಸ್ಥಿರವಾದ ನಂಬಿಕೆ. ೨ ಜ್ಞಾನಾಚಾರ—ಜ್ಞಾನವನ್ನು ಹೆಚ್ಚಿಸಿಕೊಳ್ಳುವುದು. ೩ ಚಾರಿತ್ರಾಚಾರ—ತನ್ನ ನಿತ್ಯ ಜೀವನವನ್ನು ಉತ್ತಮಪಡಿಸಿಕೊಳ್ಳುವುದು. ೪ ತಪ ಆಚಾರ—ದೊಡ್ಡ ತಪಸ್ವಿಯಾಗುವುದು. ೫ ವೀರ್ಯಾಚಾರ—ಆತ್ಮಬಲವನ್ನು ಹೆಚ್ಚಿಸಿಕೊಳ್ಳುವುದು.

ಆರ್ಯ ೭೦ ವ ಭೋಗಭೂಮಿ ನಿವಾಸಿಗಳಿಗೆ ಆರ್ಯರೆಂದು ಹೆಸರು. ಅವರು ಗಂಡು ಹೆಣ್ಣು ಅವಳಿಗಳಾಗಿ ಹುಟ್ಟುತ್ತಾರೆ. ಮಕ್ಕಳು ಹುಟ್ಟಿದ ಕೂಡಲೆ ತಾಯಿ ತಂದೆಗಳು ಸೀತು ಆಕಳಿಸಿ ಸತ್ತುಹೋಗುತ್ತಾರೆ. ಆ ಮಕ್ಕಳು ಬೇರೆಯವರ ಆರೈಕೆಯಿಲ್ಲದೆಯೆ ಬೆಳೆದು ೪೯ ದಿನಗಳಲ್ಲಿ ಪರಿಪೂರ್ಣ ಯೌವನವಂತರಾಗುತ್ತಾರೆ. ಬಳಿಕ ಅವರು ದಂಪತಿಗಳಾಗಿ ಕಲ್ಪವೃಕ್ಷಗಳಿಂದ ಬಯಸಿದ್ದನ್ನೆಲ್ಲ ಪಡೆಯುತ್ತ ಸುಖವಾಗಿ ಬಾಳುತ್ತಾರೆ.

ಭರತ ವರ್ಷದಲ್ಲಿಯೂ ಮೊದಲು ಭೋಗಭೂಮಿಸ್ಥಿತಿಯಿತ್ತು. ಆಗ ಇಲ್ಲಿನ ಜನರಿಗೂ ಆರ್ಯರೆಂದೇ ಹೆಸರಿತ್ತು. ಕಾಲ ಬದಲಿಸಿ ಕರ್ಮಭೂಮಿ ಸ್ಥಿತಿ ಬರುತ್ತಿರುವಾಗ ೧೪ ಮಂದಿ ಮನುಗಳು ಹುಟ್ಟಿ ಪ್ರಜಾಕ್ಷೇಮಕ್ಕೆ ತಕ್ಕ ಏರ್ಪಾಟು ಮಾಡಿದರು.

ಆರ್ಯಷಟ್ಕರ್ಮಂಗಳ್ ೪೬೩ ವ ಯೋಗ್ಯವಾದ ಆರು ಕರ್ಮಗಳು. ಭರತ ಚಕ್ರವರ್ತಿ ಬ್ರಾಹ್ಮಣರಿಗೆ ಗೊತ್ತುಪಡಿಸಿದ ಆರು ಕರ್ಮಗಳು: ೧ ಇಜ್ಯಾ—ಪೂಜೆ. ೨ ವಾರ್ತೆ—ನಿರ್ದುಷ್ಟವಾದ ರೀತಿಯಲ್ಲಿ ಜೀವನಕ್ಕೆ ಸಂಪಾದಿಸುವುದು.

೩ ದತ್ತಿ—ದಾನ. ೪ ಸ್ವಾಧ್ಯಾಯ—ಅಧ್ಯಯನ, ಅಧ್ಯಾಪನ. ೫ ಸಂಯಮ—ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳುವುದು. ೬ ತಪಸ್ಸು.

ಜೀವನೋಪಾಯಕ್ಕೆ ಆದಿನಾಥ ವಿಧಿಸಿದ ಆರು ಕರ್ಮಗಳು: ೧ ಅಸಿ—ಸೇವಾಕರ್ಮ. ೨ ಮಷಿ—ಬರವಣಿಗೆ. ೩ ಕೃಷಿ—ಭೂವ್ಯವಸಾಯ. ೪ ವಿದ್ಯೆ—ಶಾಸ್ತ್ರೋಪಜೀವನ. ೫ ವಾಣಿಜ್ಯ—ಮಾರಾಟ. ೬ ಶಿಲ್ಪ—ಚಿತ್ರಕಲೆ ಮೊದಲಾದವು.

ಆರ್ಯಿಕಾ ೪೯೪ ವ [ಪು. xliii]

ಅರ್ಹಂತ್ಯ ೨೧೬ ಅರ್ಹಂತನ ಸ್ಥಿತಿ, ಅರ್ಹತ್ಪದವಿ.

ಅವಶ್ಯಕ ೫ ನಿತ್ಯವೂ ನಡಸುತ್ತಿರಬೇಕಾದ ಅವಶ್ಯಕ ಕ್ರಿಯೆಗಳು [ಪು. xlv]

ಆಸನಕಂಪ ೧೧೧ ಮುನಿಗಳಿಗೆ ಕೇವಲ ಜ್ಞಾನವುಂಟಾದಾಗ, ತೀರ್ಥಂಕರರ ಅವತಾರವಾದಾಗ ಮತ್ತು ಇಂಥ ಇತರ ಸಂದರ್ಭಗಳಲ್ಲಿ ಆ ಸೂಚನೆಗಾಗಿ ಇಂದ್ರನ ಪೀಠ ಅಲುಗುತ್ತದೆ. ಆಗ ಇಂದ್ರ ಅವಧಿಜ್ಞಾನದಿಂದ ವಿಷಯವನ್ನು ತಿಳಿದು ತಕ್ಕಂತೆ ನಡೆಯುತ್ತಾನೆ.

ಆಸ್ರವ ೨೭೫ ವ ಒಂದು ತತ್ತ್ವ [ಪು. xxxiv]

## ಈ

ಈರ್ಯಾಗೋಚರಂ ಶುದ್ಧಿ ೨೪೨ ಈರ್ಯಾಸಮಿತಿ [ಪು. xxxvi]

ಈಶಾನ ಕಲ್ಪ ೩೪ ವ ಎರಡನೆಯ ಸ್ವರ್ಗ [ಪು. lii]

ಈಷತ್ ಪ್ರಾಗ್ಭಾರ ೪೯೭ ವ [ಪು. lii]

## ಉ

ಉತ್ತರಕುರು ೭೩ ವ [ಪು. l]

ಉಪಶಾಂತ ಗುಣಸ್ಥಾನ ೯೫ ವ ಹನ್ನೊಂದನೆಯ ಗುಣ ಸ್ಥಾನ [ಪು xxxiv]

ಉಪಾಸಕ ೮೯ ವ ಜೈನ ಗೃಹಸ್ಥ

ಉಪಾಸಕಾಧ್ಯಯನ ೪೬೩ ವ ಉಪಾಸಕರ (ಎಂದರೆ, ಗ್ರಹಸ್ಥ ಶ್ರಾವಕರ) ಆಚಾರಾದಿಗಳನ್ನು ಕುರಿತ ಶಾಸ್ತ್ರಭಾಗ; ಅಂಗಶಾಸ್ತ್ರಗಳಲ್ಲಿ ಏಳನೆಯದು [ಪು. xx]

## ಋ

ಋದ್ಧಿ ೧೦ ತಪಸ್ಸಿದ್ಧಿ ಪಡೆದವರಿಗೆ ಉಂಟಾಗುವ ಮಹಿಮೆ.

೧ ಔಷಧರ್ಧಿ—ಮುನಿಯ ಬೆವರು, ಉಗುಳು ಮುಂತಾದವೂ ಇತರರಿಗೆ ಉಪಕಾರಕವಾದ ಔಷಧದಂತಾಗುವ ಮಹಿಮೆ. ೨ ರಸರ್ಧಿ—ಬೇಕಾದಾಗ ಅಮೃತರಸಾದಿಗಳನ್ನು ಸ್ರವಿಸುವ ಶಕ್ತಿ. ೩ ಬಲರ್ಧಿ—ಅಮಿತವಾದ ಮನೋಬಲ ವಾಗ್ಬಲ ಕಾಯಬಲಗಳುಂಟಾಗುವುದು. ೪ ಅಕ್ಷೀಣಾವಸಥ

ಋದ್ಧಿ—ಮುನಿ ಇರುವ ಮನೆಯಲ್ಲಿ ಎಷ್ಟು ಜನ ಬಂದರೂ ಎಲ್ಲರಿಗೂ ಸ್ಥಳವಿರುವ ಮಹಿಮೆ. ೫ ಅಕ್ಷೀಣಮಹಾನಸ ಋದ್ಧಿ—ಮುನಿ ಭೋಜನ ಮಾಡಿದ ಮನೆಯಲ್ಲಿ ಆಹಾರ ಸಾಮಗ್ರಿ ಕಡಮೆಯಾಗದಿರುವ ಮಹಿಮೆ.

[ಮಹಾಪುರಾಣದಲ್ಲಿ ಈ ಐದು ಋದ್ಧಿಗಳ ವಿವರಣೆ ದೊರೆಯುತ್ತದೆ. ಆದರೆ ಋದ್ಧಿಗಳು ಏಳು ಎಂದು ಪ್ರಸಿದ್ಧಿ. ಅವು ಯಾವುವೆಂಬುದನ್ನು ಬೇರೆಯವರು ಹೀಗೆ ಹೇಳುತ್ತಾರೆ: ೧ ಬುದ್ಧಿ ಋದ್ಧಿ—ಅಪರಿಮಿತವಾದ ಬುದ್ಧಿಶಕ್ತಿಯನ್ನು ಪಡೆದಿರುವುದು. ೨ ತಪರ್ಧಿ—ಅನೇಕ ಬಗೆಯ ಮಹಾತಪಸ್ಸುಗಳನ್ನು ಮಾಡುವ ಶಕ್ತಿ. ೩ ಔಷಧರ್ಧಿ. ೪ ರಸರ್ಧಿ (ಮೇಲಿನ ವಿವರಣೆಯ ಅಕ್ಷೀಣ ಮಹಾನಸ ಋದ್ಧಿಯೂ ಇದರಲ್ಲಿಯೇ ಸೇರುತ್ತದೆ). ೫ ಬಲರ್ಧಿ. ೬ ಜ್ಞಾನರ್ಧಿ—ಐದು ಬಗೆಯ ಜ್ಞಾನಗಳನ್ನೂ ಅತಿಶಯವಾಗಿ ಪಡೆದಿರುವುದು. ೭ ಚಾರಣರ್ಧಿ—ಆಕಾಶ, ನೀರು ಮೊದಲಾದವುಗಳಲ್ಲಿ ನಡೆಯುವ ಶಕ್ತಿಯುಳ್ಳವರಾಗಿರುವುದು]

## ಏ

ಏಕತ್ವ ೨೯ ದ್ವಾದಶಾನುಪ್ರೇಕ್ಷೆಗಳಲ್ಲೊಂದು [ಪು. xxxvii]

ಏಕಾದಶ ನಿಳಯ ೮೯ ವ ಗೃಹಸ್ಥರ ಹನ್ನೊಂದು ನೆಲೆಗಳು [ಪು. xliii]

## ಕ

ಕರ್ಮ:

ಕರ್ಮಾಷ್ಟಕ ೫೦೧ [ಪು. xxxii]

ಕರ್ಮನಿರ್ಜರೆ ೧೨ [ಪು. xxxviii]

ಕರ್ಮಪ್ರಕೃತಿ(ಗಳ ನಿರ್ಮೂಲೋಚ್ಛಿತ್ತಿ) ೨೭೫ ವ ಕರ್ಮಪ್ರಕೃತಿಗಳನ್ನು ಬೇರುಸಹಿತ ಕತ್ತರಿಸಿ ಹಾಕುವುದು [ಪು. xxxviii]

ಕಲ್ಪ ೩೪ ವ ಸ್ವರ್ಗ [ಪು. lii]

ಕಲ್ಪಜ ೪೨ ಕಲ್ಪವೆಂಬ ಸ್ವರ್ಗಗಳಲ್ಲಿ ಹುಟ್ಟಿದ ದೇವತೆ.

ಕಲ್ಪವೃಕ್ಷ ೪೪ ವ, ಕಲ್ಪಾಂಘ್ರಿಪ ೨೪೯, ಕಲ್ಪಾವನಿಜ ೯೬ ಸ್ವರ್ಗಗಳಲ್ಲೂ ಭೋಗಭೂಮಿಗಳಲ್ಲೂ ಇರುವ, ಕಲ್ಪಿಸಿಕೊಂಡದ್ದನ್ನು ಎಂದರೆ ಬಯಸಿದ್ದನ್ನು ಕೊಡುವ ಮರಗಳು. ಕಲ್ಪವೃಕ್ಷಗಳಲ್ಲಿ ಹತ್ತು ಬಗೆ: ೧ ಮದ್ಯಾಂಗ ಎಂಬುದು ಉತ್ತಮ ಪಾನೀಯಗಳನ್ನು ಕೊಡುತ್ತದೆ. ೨ ಭೂಷಣಾಂಗ ವೃಕ್ಷ ಬೇಕು ಬೇಕಾದ ಒಡವೆಗಳನ್ನು ಕೊಡುತ್ತದೆ. ೩ ವಸ್ತ್ರಾಂಗ ಬಗೆಬಗೆಯ ಬಟ್ಟೆಗಳನ್ನೂ, ೪ ತೂರ್ಯಾಂಗ ನಾನಾ ವಾದ್ಯಗಳನ್ನೂ, ೫ ಮಾಲ್ಯಾಂಗ ತೆರ ತೆರದ ಮಾಲೆಗಳನ್ನೂ, ೬ ಗೃಹಾಂಗ ವಾಸಕ್ಕೆ ಮನೆಗಳನ್ನೂ, ೭ ಭಾಜ

ನಾಂಗ ಪಾತ್ರೆಗಳನ್ನೂ, ೮ ಭೋಜನಾಂಗ ಅಮೃತಮಯವಾದ ಆಹಾರಗಳನ್ನೂ, ೯ ಜ್ಯೋತಿರಂಗ ಬೆಳಕನ್ನೂ, ೧೦ ದೀಪಾಂಗ ಮನೆಯೊಳಗೆ ಬೇಕಾದ ದೀಪಗಳನ್ನೂ ಕೊಡುತ್ತವೆ. ಈ ಕಲ್ಪವೃಕ್ಷಗಳ ಸಹಾಯದಿಂದ ಭೋಗಭೂಮಿಜರೂ ಕಲ್ಪವಾಸಿಗಳೂ ನಿಶ್ಚಿಂತರಾಗಿ ಸುಖಪಡುತ್ತಾರೆ.

ಕಲ್ಪ ೩೪೩ ಒಂದು ಅವಸರ್ಪಿಣಿ, ಒಂದು ಉತ್ಸರ್ಪಿಣಿ—ಎರಡೂ ಸೇರಿದಷ್ಟು ಕಾಲ [ಪು. xxviii]

ಕವಿಪರಮೇಷ್ಠಿ ೮ ಇವರು ರಚಿಸಿದ ತ್ರಿಷಷ್ಟಿ ಶಲಾಕಾ ಪುರುಷ ಪುರಾಣದ ಆಧಾರದಿಂದ ಜಿನಸೇನಾಚಾರ್ಯರು ಆದಿಪುರಾಣವನ್ನು ಬರೆದುದಾಗಿ ಹೇಳಿದೆ. ಪ್ರಸಿದ್ಧ ಜೈನ ಕವಿಗಳೆಲ್ಲ ಇವರನ್ನು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ. ಇವರು ಸುಮಾರು ಕ್ರಿ. ಶ. ೫೫೦ರಲ್ಲಿ ಇದ್ದಿರಬಹುದು. ಇವರು ಕನ್ನಡದಲ್ಲಿ ಬರೆದರೋ ಇಲ್ಲವೋ ತಿಳಿಯದು. (ಕರ್ಣಾಟಕ ಕವಿಚರಿತ್ರೆ)

ಕಷಾಯ (ಮಾನ—) ೪೪೮ ವ [ಪು. xxxv]

ಕಾಲಲಬ್ಧಿ ೭೦ ವ [ಪು. lv]

ಕಿಲ್ಬಿಷಂಗಳ್ (ಎಂಟುಂ—) ೨ ಎಂಟು ದೋಷಗಳು; ಘಾತಿ ಅಘಾತಿ ಕರ್ಮಗಳು.

ಕೇವಲ ಜ್ಞಾನ=ಕೇವಲ ಬೋಧ ೫೩ ವ [ಪು. xlii]

ಕೇವಲ ಜ್ಞಾನೋತ್ಪತ್ತಿಯೊಸಗೆ ೫೩ ವ ಕೇವಲ ಜ್ಞಾನ ಕಲ್ಯಾಣ [ಪು. lix]

ಕೇವಳಿ ೧೮ ವ, ಕೇವಳಜ್ಞಾನಿ ೪೯೪ ವ ಕೇವಲಜ್ಞಾನ ಹೊಂದಿದವನು.

ಕೈವಲ್ಯಬೋಧೋದಯ ೨೪೯ ಕೇವಲಜ್ಞಾನ ಹುಟ್ಟುವುದು.

ಕೈವಲ್ಯಲಕ್ಷ್ಮಿ ೨೫೭ ಕೇವಲಿ ಪದವಿ.

ಕ್ಷಾಯಿಕ ಸಮ್ಯಕ್ತ್ವ ೪೯೫ ವ, ಕ್ಷಾಯಿಕ ಸಮ್ಯಗ್‌ದೃಷ್ಟಿ ೨೫೬ ವ ದರ್ಶನ ಮೋಹನೀಯ ಕರ್ಮದಲ್ಲಿ ಮಿಥ್ಯಾತ್ವ, ಸಮ್ಯಙ್ಮಿಥ್ಯಾತ್ವ, ಸಮ್ಯಕ್ತ್ವಪ್ರಕೃತಿ ಎಂದು ಮೂರು ವಿಧ. ಜೀವನಿಗೆ ನಿಜವಾದ ತತ್ತ್ವಸ್ವರೂಪದಲ್ಲಿ ನಂಬಿಕೆಯುಂಟಾಗದಿರುವುದಕ್ಕೆ ಮಿಥ್ಯಾತ್ವವೆಂದೂ, ಮಿಶ್ರರೂಪವಾದ ನಂಬಿಕೆಯುಂಟಾಗುವುದಕ್ಕೆ ಸಮ್ಯಙ್ಮಿಥ್ಯಾತ್ವವೆಂದೂ, ಆ ತತ್ತ್ವಗಳಲ್ಲಿನ ನಂಬಿಕೆ ಚಲಮಲಿನ ರೂಪಹೊಂದುವುದಕ್ಕೆ ಸಮ್ಯಕ್ತ್ವಪ್ರಕೃತಿಯೆಂದೂ ಹೆಸರು. ಈ ಮೂರು ಕರ್ಮಗಳ ಮತ್ತು ನಾಲ್ಕು ಕಷಾಯಗಳ ಸಂಪೂರ್ಣ ನಾಶದಿಂದ ಉಂಟಾಗುವ ಶ್ರದ್ಧೆಗೆ ಕ್ಷಾಯಿಕಸಮ್ಯಕ್ತ್ವ ಎಂದು ಹೆಸರು. ಈ ಕ್ಷಾಯಿಕ ಸಮ್ಯಕ್ತ್ವವುಳ್ಳವನೇ ಕ್ಷಾಯಿಕ ಸಮ್ಯಗ್ದೃಷ್ಟಿ.

## ಗ

ಗಣಧರ ದೇವರು ೪೯೪ ವ ತೀರ್ಥಂಕರರ ಶಿಷ್ಯಗಣದ ಮುಂದಾಳುಗಳು; ಪ್ರಧಾನ ಶಿಷ್ಯರು.

ಗಣಿನೀ ೨೭೭ ವ ತೀರ್ಥಂಕರರ ಶಿಷ್ಯತ್ವವಹಿಸಿದ ಸಾಧ್ವೀಗಣದ ಮುಂದಾಳಾದವಳು.

ಗತಿ ೮೬, ಗತಿಚತುಷ್ಟಯ ೨೦೬, ಚತುರ್ಗತಿ ೩೫೪, ಚತುರ್ಗತಿ ಸಂಸಾರ ೫೦೩ ವ [ಪು. xxiii]

ಗರ್ಭಾವತರಣ ಮಂಗಳ ೧೦೫ [ಪು. lviii]

ಗಾರ್ಹಪತ್ಯದಕ್ಷಿಣಾಗ್ನ್ಯಾಹವನೀಯಾಭಿಧಾನ ಕುಂಡಂಗಳಿಂ ೪೯೮ ವ ತೀರ್ಥಂಕರ, ಗಣಧರ, ಉಳಿದ ಕೇವಲಿಗಳು—ಇವರನ್ನು ದಹಿಸಿದ ಅಗ್ನಿಕುಂಡಗಳಿಗೆ ಕ್ರಮವಾಗಿ ಗಾರ್ಹಪತ್ಯಾಗ್ನಿ, ದಕ್ಷಿಣಾಗ್ನಿ, ಅಹವನೀಯಾಗ್ನಿ ಕುಂಡಗಳೆಂದು ಹೆಸರು.

ಗುಣಂ (—ಎಂಟುಂ) ೨, ಅಷ್ಟಗುಣಂಗಳ್ ೨೫೬ ವ ಮುಕ್ತಜೀವರಿಗಿರುವ ಎಂಟು ಗುಣಗಳು: ೧ ಸಮ್ಯಕ್ತ್ವ, ೨ ಅನಂತದರ್ಶನ, ೩ ಅನಂತಜ್ಞಾನ, ೪ ಅನಂತವೀರ್ಯ, ೫ ಸೂಕ್ಷ್ಮತ್ವ, ೬ ಅವಗಾಹಿತ್ವ, ೭ ಅವ್ಯಾಬಾಧತ್ವ, ೮ ಅಗುರುಲಘುತ್ವ. (೪೯೫ ವ ನೋಡಿ). [ಪು. xxxiii]

ಅಣಿಮಾದ್ಯಷ್ಟಗುಣ ೪೩ ಅಣಿಮಾ, ಮಹಿಮಾ, ಲಘಿಮಾ, ಪ್ರಾಪ್ತಿ, ಪ್ರಾಗಮ್ಯ, ಈಶಿತ್ವ, ವಶಿತ್ವ, ಕಾಮರೂಪಿತ್ವ—ಈ ಎಂಟು ಗುಣಗಳು. ಅಣುವಿನಂತೆ ಸೂಕ್ಷ್ಮರೂಪವನ್ನು ಧರಿಸುವ ಶಕ್ತಿ ಅಣಿಮಾ. ಪರ್ವತದಂತೆ ಮಹದ್ರೂಪವನ್ನು ಧರಿಸುವ ಶಕ್ತಿ ಮಹಿಮಾ. ಹತ್ತಿಯಂತೆ ಹಗುರವಾಗುವ ಶಕ್ತಿ ಲಘಿಮಾ. ಇಷ್ಟವಾದದ್ದನ್ನು ಪಡೆಯುವ ಅಥವಾ ತಾನಿದ್ದಲ್ಲಿಂದಲೆ ಮೇರುಶಿಖರ ಸೂರ್ಯಚಂದ್ರಾದಿಗಳನ್ನು ಮುಟ್ಟುವ ಶಕ್ತಿಗೆ ಪ್ರಾಪ್ತಿಯೆಂದು ಹೆಸರು. ಭೂಮಿಯ ಮೇಲೆ ನಡೆಯುವಂತೆ ನೀರಿನ ಮೇಲೆಯೂ ನೀರಿನೊಳಗೆ ಪ್ರವೇಶಿಸುವಂತೆ ಭೂಮಿಯೊಳಗೂ ಸಂಚರಿಸುವ ಅಥವಾ ಪ್ರವೇಶಿಸುವ ಶಕ್ತಿಗೆ ಪ್ರಾಗಮ್ಯವೆಂದು ಹೆಸರು. ಸಮಸ್ತ ದೇವತೆಗಳಿಗೂ ಒಡೆಯನಾಗಿರುವ ಶಕ್ತಿಗೆ ಈಶಿತ್ವವೆಂದೂ, ಅವರನ್ನೆಲ್ಲ ವಶಮಾಡಿಕೊಳ್ಳುವ ಶಕ್ತಿಗೆ ವಶಿತ್ವವೆಂದೂ ಹೆಸರು. ತನಗೆ ಇಷ್ಟವಾದ ರೂಪವನ್ನು ಧರಿಸಿಕೊಳ್ಳುವ ಶಕ್ತಿಯೇ ಕಾಮರೂಪಿತ್ವ. ಇವು ಎಂಟೂ ದೇವತೆಗಳಿಗೆ ಉಂಟಾಗುವ ವಿಕ್ರಿಯಾ ಋದ್ಧಿಗಳು. ಇವು ತಪೋಬಲದಿಂದ ಮುನಿಗಳಿಗೂ ಉಂಟಾಗುತ್ತವೆ.

ಷಡ್ಗುಣಂಗಳ್ ೨೨೮ ರಾಜರು ಯುದ್ಧದಲ್ಲಿ ಅನುಸರಿಸುವ ಆರು ಬಗೆಯ ನಡವಳಿಕೆಗಳು: ೧ ಸಂಧಿ, ೨ ವಿಗ್ರಹ—ಯುದ್ಧ, ೩ ಯಾನ—ದಂಡೆತ್ತಿ ಹೋಗುವುದು, ೪ ಆಸನ—ಪಾಳೆಯ ಬಿಟ್ಟು ಕೂರುವುದು, ೫ ದ್ವೈಧೀಭಾವ—ತನ್ನ ಸೇನೆಗಳನ್ನು ವಿಭಾಗಿಸುವುದು, ೬ ಸಂಶ್ರಯ—ಹೆಚ್ಚು ಬಲಶಾಲಿಯಾದವನನ್ನು ಆಶ್ರಯಿಸುವುದು.

ಮೂವತ್ತಾಱುಂ ಗುಣಂಗಳ್ ೩ ಆಚಾರ್ಯರಿಗೆ ಮೂವತ್ತಾರು ಗುಣಗಳುಂಟು: ದ್ವಾದಶ ತಪಸ್ಸುಗಳು (೧೨), ದಶಧರ್ಮಗಳು (೧೦) ಷಡಾವ

ಶ್ಯಕಗಳು (೬), ಪಂಚಾಚಾರಗಳು (೫), ತ್ರಿಗುಪ್ತಿಗಳು (೩)—ಎಲ್ಲ ಒಟ್ಟು ೩೬ [ವಿವರಗಳಿಗೆ ಆಯಾ ಪದಗಳನ್ನು ನೋಡಿ.]

ಗುಣವ್ರತ ೮೯ ವ [ಪು. xliii]

ಗುಣಸ್ಥಾನ ೯೫ ವ [ಪು. xxxiv]

ಗುಪ್ತ್ಯಾದಿಗಳ್ ೨೭೫ ವ [ಪು. xxxvii]

ಗುರುಪಂಚಕ ೫೨ ವ. ಪಂಚಪರಮೇಷ್ಠಿಗಳು [ಪು. xliv]

ಗ್ರಹಯುದ್ಧ ೪೧೫ ವ. ಕುಜಾದಿ ಗ್ರಹಗಳು ಚಂದ್ರನೊಡನೆ ಸೇರಿದರೆ ಸಮಾಗಮವೆಂದೂ ಪರಸ್ಪರ ಸೇರಿದರೆ ಯುದ್ಧವೆಂದೂ ಸಂಜ್ಞೆ (ಮೈಸೂರು ಪಂಚಾಂಗ)

ಗ್ರೈವೇಯಕ (ಅಧೋ—) ೯೧ ವ ಗ್ರೈವೇಯಕ ವಿಮಾನಗಳಲ್ಲಿ ಕೆಳಗಿನವು [ಪು. lii]

ಗಂಗಾ ಕೂಟ ೩೪೯ ವ ಹಿಮವತ್ಪರ್ವತದಲ್ಲಿ ಗಂಗಾನದಿ ಹುಟ್ಟುವ ಶಿಖರ (?)

ಗಂಧ ಕುಟಿ ೨೬೦ ವ ಸಮವಸರಣದಲ್ಲಿ ತೀರ್ಥಂಕರನು ಕುಳಿತು ಉಪದೇಶ ಮಾಡುವ ಮಧ್ಯ ಮಂಟಪ.

## ಘ

ಘನೋದಧಿ ಘನಾನಿಳ ತನುವಾತ ೪೯೭ ವ ಲೋಕವನ್ನು ಆವರಿಸಿರುವ ಮೂರು ಗಾಳಿಯ ಸುತ್ತುಗಳು [ಪು. xlviii]

ಘಾತಿ ೨೫೭, ಘಾತಿ ಚತುಷ್ಕಂ ೪೯೫ ವ [ಪು. xxxii]

## ಚ

ಚಕ್ರಧರ ೬೧ ವ ಚಕ್ರವರ್ತಿ

ಚಕ್ರರತ್ನ ೫೩ ವ [ಪು. lx]

ಚತುರಂಗ ಬಲ ೩೬೪, ಚತುರ್ಬಲ ೨೯೧ ಆನೆ, ಕುದುರೆ, ರಥ, ಕಾಲಾಳು–ಈ ನಾಲ್ಕು ಪಡೆಗಳುಳ್ಳ ದಂಡು.

ಚತುರ್ಥ ಧ್ಯಾನ ೫೦೯ ವ ನಾಲ್ಕನೆಯದಾದ ಶುಕ್ಲ ಧ್ಯಾನ [ಪು. xxxix]

ಚತುರ್ನಿಕಾಯಾಮರರ್ ೧೦೬ ವ [ಪು. xxv]

ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನ ೩೧ ವ ಅನ್ನ, ಪಾನ, ಖಾದ್ಯ, ಲೇಹ್ಯ—ಎಂಬ ನಾಲ್ಕು ಬಗೆಯ ಆಹಾರಗಳನ್ನೂ ಶರೀರಾಭಿಮಾನವನ್ನೂ ತೊರೆಯುವುದು.

ಚರ ೭೦ ವ ಒಂದು ಜನ್ಮದಲ್ಲಿ ಹುಟ್ಟಿದ್ದ ಜೀವ ಸತ್ತು ಬೇರೊಂದು ಜನ್ಮ ಎತ್ತಿರುವಾಗ 'ಹಿಂದೆ ಇಂಥವನಾಗಿ ಹುಟ್ಟಿದ್ದ' ಎಂಬ ಅರ್ಥ ಬರುವಂತೆ 'ಚರ' ಎಂಬ ಮಾತು ಸೇರಿಸುತ್ತಾರೆ. 'ಶಾರ್ದೂಲ ಚರನಪ್ಪ' ಎಂದರೆ, 'ಹಿಂದೆ ಶಾರ್ದೂಲನಾಗಿ ಹುಟ್ಟಿದ್ದ' ಎಂದರ್ಥ.

ಚರಮಾಂಗ ೩೧೮, ಚರಮ ದೇಹಧಾರಿ ೪೧೫ ವ ಕೊನೆಯ ದೇಹ ಧರಿಸಿದವನು. ಆ ದೇಹ ಬಿದ್ದ ಮೇಲೆ ತಿರುಗಿ ಹುಟ್ಟದೆ ಮುಕ್ತನಾಗುವವನು.

ಚರ್ಯೆ ೬೯ ವ ಮುನಿ ಭಿಕ್ಷೆಗಾಗಿ ತಿರುಗುವುದು, ಭಿಕ್ಷಾಟನೆ.

ಚಾರಣ ೨೭ ವ ಆಕಾಶದಲ್ಲಿ ನಡೆಯುವ ಮುನಿ.

ಚೈತ್ಯ ೨೩ ವ ಜಿನಮಂದಿರ; ಜೈನ ದೇವಾಲಯ.

## ಜ

ಜಗತ್ತ್ರಯಾಂತಸ್ಸ್ಥಿತನರಕಪ್ರಸ್ತಾರಭವನವ್ಯಂತರಾವಾಸಾಸಂಖ್ಯಾತದ್ವೀಪಾಬ್ಧಿತ್ರಿಷಷ್ಟಿಸ್ವರ್ಗಪಟಲಂಗಳುಮಂ ೨೭೫ ವ ಲೋಕಾಕಾರ ವಿವರಣೆ ನೋಡಿ [ಪು. xxv, xlvi–lii]

ಜನ್ಮಾಭಿಷೇಕ ೧೧೧ ವ [ಪು. lviii]

ಜ್ಞಾನಚತುಷ್ಟಯ ೨೬೨ ವ, ಚತುರ್ಜ್ಞಾನ ೨೨೫ ಮತಿ, ಶ್ರುತ, ಅವಧಿ, ಮನಃಪರ್ಯಯ—ಎಂಬ ಮೊದಲಿನ ನಾಲ್ಕು ಜ್ಞಾನಗಳು [ಪು. xli]

ಜ್ಞಾನಾವರಣ ಪಂಚಕ ೨೫೬ ವ ಐದು ಬಗೆಯ ಜ್ಞಾನಗಳನ್ನು ಮರೆಮಾಡುವ ಐದು ಬಗೆಯ ಕರ್ಮಗಳು [ಪು. xxxii, xli]

ಜಿನಕಲ್ಪಿತ ೨೫೫ ವ ಪಂಚ ಮಹಾವ್ರತಗಳು, ಪಂಚ ಸಮಿತಿಗಳು, ತ್ರಿಗುಪ್ತಿಗಳು—ಇವನ್ನು ಪೂರ್ಣವಾಗಿ ಪಾಲಿಸುವುದು, ಪರೀಷಹ ಉಪಸರ್ಗಗಳನ್ನು ಸಹಿಸುವುದು, ಇವೇ ಮೊದಲಾದ್ದು ಜಿನಕಲ್ಪಿತಾಚರಣ.

ಜಿನಸೇನಾಚಾರ್ಯ ೧೦ ಪಂಪನ ಆದಿಪುರಾಣಕ್ಕೆ ಮೂಲವಾದ ಸಂಸ್ಕೃತ ಮಹಾಪುರಾಣದ ಮೊದಲ ಭಾಗವಾದ ಪೂರ್ವ ಪುರಾಣವನ್ನು ರಚಿಸಿದವರು. ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷನಿಗೆ ಗುರುಗಳಾಗಿದ್ದರು. ಹಲವು ಸಂಸ್ಕೃತ ಗ್ರಂಥಗಳನ್ನು ರಚಿಸಿದರು.

## ತ

ತಪಂ ೧೯ ತಪಸ್ಸು. ಹನ್ನೆರಡು ಬಗೆ [ಪು. xxxix]

ತಮಿಸ್ರ ಗುಹಾ ೩೨೯ ವಿಜಯಾರ್ಧ ಪರ್ವತದಲ್ಲಿರುವ 'ಕತ್ತಲೆಯ ಗವಿ'. ಇದರ ಮೂಲಕವೇ ಉತ್ತರ ಭರತಕ್ಕೆ ಹೋಗಬೇಕು. [ಪು. lxi]

ತೀರ್ಥಕರ, ಚಕ್ರಧರ, ಬಲದೇವ, ವಾಸುದೇವ, ಪ್ರತಿವಾಸುದೇವ ಕಥಾ....೨೭೫ ವ ಶಲಾಕಾಪುರುಷ ಚರಿತ್ರ ವಿವರಣೆಯನ್ನು ನೋಡಿ [ಪು. liii]

ತ್ರಿಲೋಕಶಿಖರಿಶೇಖರನ್ ೬೯ ವ ಲೋಕಾಗ್ರದಲ್ಲಿ ನೆಲಸಿರುವವನು; ಸಿದ್ಧಶಿಲೆಯನ್ನು ಸೇರಿದ ಸಿದ್ಧ.

ತ್ರಿಸಾಕ್ಷಿಕನಾಗಿ ೨೨೧ ವ ಆತ್ಮ, ಇಂದ್ರ, ಸಿದ್ಧರು—ಈ ಮೂವರು ಸಾಕ್ಷಿಯಾಗಿ.

## ದ

ದತ್ತಿ (ಚತುರ್ವಿಧಮಪ್ಪ—) ೪೬೩ ವ ದಾನ. ನಾಲ್ಕು ಬಗೆ: ೧ ದಯಾದತ್ತಿ—ಸಮಸ್ತ ಪ್ರಾಣಿಗಳಿಗೂ ಅಭಯ ಕೊಡುವುದು. ೨ ಸಮದತ್ತಿ—ತನಗೆ ಸಮಾನರಾದ ಶ್ರಾವಕರಿಗೆ ಕನ್ಯಾದಿ ದಾನ ಮಾಡುವುದು. ೩ ಪಾತ್ರದತ್ತಿ—ಯತಿ ಮೊದಲಾದವರಿಗೆ ಯೋಗ್ಯವಾದ ಆಹಾರ ಮೊದಲಾದ್ದನ್ನು ಕೊಡುವುದು. ೪ ಸಕಲ ದತ್ತಿ—ಮಗನಿಗೆ ತನ್ನ ಸರ್ವಧನಗಳನ್ನೂ ಒಪ್ಪಿಸಿ ಕೊಡುವುದು.

ದಮ ೧೯ ಇಂದ್ರಿಯಗಳನ್ನು ಅಡಗಿಸಿ ಹಿಡಿತದಲ್ಲಿಟ್ಟುಕೊಳ್ಳುವುದು.

ದಯೆ ೧೯ ಪ್ರಾಣಿಗಳಲ್ಲಿ ಸಹಾನುಭೂತಿಯಿಟ್ಟು, ಅವಕ್ಕೆ ಹಿಂಸೆ ಮಾಡದಿರುವುದು.

ದರ್ಶನ ಮೋಹನೀಯ ತ್ರಿಕ ೨೫೬ ವ ಸಮ್ಯಗ್‌ದರ್ಶನ ಕಾಣದಂತೆ ಮಾಡುವ ಮೂರು ಮೋಹನೀಯ (ಮೋಹಗೊಳಿಸುವ) ಕಾರಣಗಳು: ಮಿಥ್ಯಾತ್ವ, ಸಮ್ಯಜ್ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಪ್ರಕೃತೆ (ಪಂಪ).

ದರ್ಶನ ರತ್ನ ೮೧ ಮೊದಲನೆಯ ರತ್ನ. ಸರಿಯಾದ ಕಾಣ್ಕೆ, ನಂಬುಗೆ [ಪು. xl]

ದೇವ ನಿಕಾಯ ೮೫ ವ [ಪು. xxv]

ದೇವೇಂದ್ರಮುನೀಂದ್ರ ೯ ಪಂಪನ ಗುರು. ದೊಡ್ಡ ತಪಸ್ವಿ, ರಾಜಪೂಜಿತನಾದವನು.

## ಧ

ಧರ್ಮ ೧೯ ಪ್ರಾಣಿಗಳ ಶ್ರೇಯಸ್ಸಿಗೆ ಸಾಧನವಾದ ಉತ್ತಮ ನಡವಳಿಕೆ.

ಧರ್ಮ ೨೭೫ ವ ಷಡ್‌ದ್ರವ್ಯಗಳಲ್ಲೊಂದು [ಪು. xxvii]

ಧ್ಯಾನ ೨೫೮ [ಪು. xxxix]

## ನ

ನಮಸ್ಕಾರ ಮಂತ್ರ ೪೮ [ಪು. xlvi]

ನರಕ ೮೫ ವ [ಪು. xlviii]

ನಿಕಾಯ ೧೦೬ ವ ಗುಂಪು, ತಂಡ, ದೇವನಿಕಾಯ [ಪು. xxv]

ನಿಧಿ ೪೫೫ [ಪು. lx]

ನಿರ್ಜರಾ ೨೭೫ ವ, ಕರ್ಮ ನಿರ್ಜರೆ ೧೨ ಒಂದು ತತ್ತ್ವ [ಪು. xxxviii]

ನಿರ್ಯಾಪಕಾಚಾರ್ಯ ೩೧ ವ ನಿರ್ಯಾಪಕ ಎಂದರೆ ಹಡಗು ನಡಸುವ ಕರ್ಣಧಾರ. ಅವನಂತೆ ದಾರಿ ತೋರಿಸಿ ಸಮಾಧಿಯನ್ನು ಸಾಧಿಸಿಕೊಡುವುದರಲ್ಲಿ ಮುಖ್ಯನಾದ ಆಚಾರ್ಯನೆ ನಿರ್ಯಾಪಕಾಚಾರ್ಯ.

ನಂದೀಶ್ವರ ೫೧೨, ನಂದೀಶ್ವರ ಮಹಾಮಹಿಮೆ ೪೨ ವ ಆಷಾಢ, ಕಾರ್ತಿಕ, ಫಾಲ್ಗುಣ ಮಾಸಗಳಲ್ಲಿ ಶುಕ್ಲಪಕ್ಷದ ಅಷ್ಟಮಿಯಿಂದ ಪೂರ್ಣಿಮೆಯ ವರೆಗೆ ಎಂಟೆಂಟು ದಿನ ದೇವತೆಗಳು ನಂದೀಶ್ವರ ದ್ವೀಪಕ್ಕೆ [ಪು. xlix] ಹೋಗಿ ಅಲ್ಲಿನ ಜಿನಬಿಂಬಗಳನ್ನು ಪೂಜಿಸುತ್ತಾರೆಂದು ನಂಬಿಕೆ. ಆ ಭಾವನೆಯಿಂದ ಆ ಕಾಲದಲ್ಲಿ

ಇಲ್ಲಿಯೂ ಭಕ್ತರು ಪೂಜೆಮಾಡುತ್ತಾರೆ. ಆ ಪೂಜೆಗೆ, ಉತ್ಸವಕ್ಕೆ, 'ನಂದೀಶ್ವರ ಅಷ್ಟಾಹ್ನಿಕ ಮಹ' ಎಂದು ಹೆಸರು. ಅದೇ 'ನಂದೀಶ್ವರ ಮಹಾಮಹಿಮೆ'. ಆ ಪೂಜೆ ನಡೆಯುವ ಕಾಲಗಳಿಗೆ 'ನಂದೀಶ್ವರ' ಎಂದು ಹೆಸರು.

## ಪ

ಪಂಚಾಶ್ಚರ್ಯ ೭೦ ಐದು ಆಶ್ಚರ್ಯಗಳು: ೧ ದೇವ ದುಂದುಭಿ ಮೊಳಗುವುದು. ೨ ಹೂಮಳೆಗರೆಯುವುದು. ೩ ಚಿನ್ನದ ಮಳೆ ಸುರಿಯುವುದು. ೪ ದೇವತೆಗಳು ಪ್ರಶಂಸೆಮಾಡುವುದು. ೫ ತಂಗಾಳಿ ಬೀಸುವುದು.

ಪಂಚ ಗುರು ಸಮಕ್ಷದೊಳ್ ೩೧ ವ ಐವರು ಗುರುಗಳ ಎದುರಿಗೆ; ಪಂಚ ಪರಮೇಷ್ಠಿಗಳ ಸಾಕ್ಷಿಯಾಗಿ [ಪು. xliv]

ಪಂಚ ನಮಸ್ಕೃತಿ ೩೩ ಪಂಚ ಪರಮೇಷ್ಠಿಗಳ ನಮಸ್ಕಾರ [ಪು. xlvi]

ಪಂಚ ಪದಂಗಳ್ ೩೨ ಪಂಚ ಪರಮೇಷ್ಠಿಗಳ ನಮಸ್ಕಾರ ಮಂತ್ರಗಳು [ಪು. xlvi]

ಪಂಚ ಪರಮೇಷ್ಠಿಗಳ್ಗೆ ೩೦೨ ವ [ಪು. xliv]

ಪದಾರ್ಥ (ನವ—) ೮೧ [ಪು. xxiii]

ಪರಮ ಸ್ಥಾನಂಗಳಂ (ಸಪ್ತ—) ೮೫ ವ ಏಳು ಉತ್ತಮ ಸ್ಥಾನಗಳು: ೧ ಸಜ್ಜಾತಿ.—ಒಳ್ಳೆಯ ಜನ್ಮದಲ್ಲಿ ಹುಟ್ಟುವುದು, ೨ ಸದ್ಗೃಹಸ್ಥತ್ವ—ಶ್ರಾವಕನಾಗುವುದು, ೩ ಪಾರಿವ್ರಾಜ್ಯ—ಮನೆತೊರೆದು ತಪಸ್ವಿಯಾಗುವುದು, ೪ ಸುರೇಂದ್ರತ್ವ—ದೇವೇಂದ್ರಪದವಿ, ೫ ಸಾಮ್ರಾಜ್ಯ—ಚಕ್ರವರ್ತಿ ಪದವಿ, ೬ ಆರ್ಹಂತ್ಯ—ಅರ್ಹತ್ಪದವಿ, ೭ ನಿರ್ವಾಣ—ಮುಕ್ತಿ.

ಪರಿಣಾಮ ಶುದ್ಧಿ ೪೬೬ ವ ಮನಃಪರಿಪಾಕ.

ಪರೀಷಹ ೨೨೫ ವ [ಪು. xxxviii]

ಪಳಿತ ೩೮ ವ ಸಾಮಾನ್ಯ ಎಣಿಕೆಗೆ ಮೀರಿದ ಒಂದು ಬಹು ದೀರ್ಘಕಾಲ.

ಪಾಂಡುಕವನ ೧೨೧ ವ ಮಂದರ ಪರ್ವತದ ಮೇಲಿನ ನಾಲ್ಕು ವನಗಳಲ್ಲೊಂದು.

ಪಾರಾವಾರ (ಕಾಲ) ೩೮ ವ=ಸಾಗರ ೪೩ ವ ಪಳಿತಕ್ಕಿಂತ ಬಹು ಪಾಲು ಹೆಚ್ಚಾದ ಕಾಲ.

ಪುದ್ಗಲ ೨೭೫ ವ [ಪು. xxvi]

ಪುರ್ಬ (ಕಾಲ) ೨೨ ವ=ಪೂರ್ವ ೧೬೪ ಎಂಬತ್ತನಾಲ್ಕು ಲಕ್ಷ ವರ್ಷಕ್ಕೆ ಒಂದು ಪೂರ್ವಾಂಗವೆಂದು ಹೆಸರು. ೮೪ ಲಕ್ಷವನ್ನು ೮೪ ಲಕ್ಷದಿಂದ ಗುಣಿಸಿದರೆ ಬರುವಷ್ಟು ವರ್ಷಕ್ಕೆ ಒಂದು ಪೂರ್ವವೆಂದು ಹೆಸರು. ೮೪,೦೦,೦೦೦ × ೮೪,೦೦,೦೦೦ ವರ್ಷ.

ಪೂಜೆ (ಎಂಟುಂ ತೆಱದ—) ೪೬೩ ವ ಜಲ, ಗಂಧ, ಅಕ್ಷತ, ಪುಷ್ಪ, ಚರು, ಧೂಪ, ದೀಪ, ಫಲ—ಈ ಎಂಟು ವಸ್ತುಗಳಿಂದ ನಡಸುವ ಪೂಜೆ.

